# ಕನ್ನಡ ಸಾಹಿತ್ಯ ವಿಮರ್ಶೆ ಮತ್ತು ಭಾರತೀಯ ಕಾವ್ಯ ಮೀಮಾಂಸೆ

## ಸಾಹಿತ್ಯದ ಅರ್ಥ ವಿವರಣೆ

ಸಾಹಿತ್ಯ ಪದದ ಪರಿಕಲ್ಪನೆಯನ್ನು, ಅದರ ಅರ್ಥ ವಿವರಣೆಯನ್ನು ಖಚಿತವಾಗಿ, ನಿಖರವಾಗಿ ಹಾಗೂ ನಿರ್ದಿಷ್ಟವಾಗಿ ವ್ಯಾಖ್ಯಾನಿಸಿ ವಿವರಿಸುವುದು ತುಂಬ ಕ್ಲಿಷ್ಟಕರವಾದುದು. ಇಂಗ್ಲೀಷಿನ 'Literature' ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಸಾಹಿತ್ಯ' ಎಂಬ ಪದವನ್ನು ಬಳಸಲಾಗುತ್ತದೆ. ಈ ಪದದ ಬಳಕೆಯು 19ನೇ ಶತಮಾನದ ಉತ್ತರಾರ್ಧದಲ್ಲಿ ಹೆಚ್ಚು ಹೆಚ್ಚು ಬಳಕೆಯ ಶಬ್ದವಾಗಿ ಬೆಳಕಿಗೆ ಬಂದಿತು. ಪ್ರಾಚೀನ ಅಲಂಕಾರಿಕರು ಈ 'ಸಾಹಿತ್ಯ' ಪದದ ಪರಿಕಲ್ಪನೆಗೆ ಬದಲಾಗಿ 'ಕಾವ್ಯ' ಎಂಬ ಪದವನ್ನು ಬಳಸುತ್ತಿದ್ದರು. ರಚನಾ ವಿಧಾನ ಗದ್ಯವಾಗಲಿ, ಪದ್ಯವಾಗಲಿ ಹಾಗೂ ಶಾಸ್ತ್ರವಾಗಲಿ ಇವೆಲ್ಲಕ್ಕೂ ಕಾವ್ಯವೆಂದೇ ಕರೆಯುತ್ತಿದ್ದರು. ಕಾವ್ಯವೆಂದರೆ ವಿಶಾಲವಾದ ಅರ್ಥದಲ್ಲಿ ಅದರ ಸಮಗ್ರತೆಯನ್ನು ಸೂಚಿಸುವ ಪದವಾಗಿತ್ತು. ನಿರ್ದೇಶನಕ್ಕೆ ಗದ್ಯ-ಪದ್ಯ ಮಿಶ್ರಿತವಾದ ಕಾವ್ಯವನ್ನು ಚಂಪೂ ಕಾವ್ಯವೆಂದು ಪಂಪನ ಕಾವ್ಯಪರಂಪರೆಯಲ್ಲಿ ಕರೆಯುತ್ತಿದ್ದುದನ್ನು ಗಮನಿಸಬಹುದು. ಬರವಣಿಗೆ ಇಲ್ಲದ ಕಾಲದಿಂದಲೂ ನೆನಪಿನಲ್ಲಿ ಉಳಿದುಕೊಳ್ಳುವ ಮತ್ತು ಕಠಿಣವಾದ ವಾಙ್ಮಯವನ್ನು ಸರಳಗೊಳಿಸಿಕೊಳ್ಳುವ ಹಾಗೂ ಗದ್ಯಭಾಗವನ್ನು ಪದ್ಯರೂಪದಲ್ಲಿ ಕಂಠಪಾಠ ಮಾಡಿ ನೆನಪಿನಲ್ಲಿ ಇಟ್ಟುಕೊಳ್ಳುವುದರಿಂದ ಪದ್ಯವನ್ನೇ ಅವಲಂಬಿಸಿಕೊಂಡಿದ್ದರು. ಹಾಗಾಗಿ ಕಾವ್ಯ ಎಂಬ ಪದದ ಬಳಕೆಯನ್ನು ಸಾಹಿತ್ಯದ ಸಮಗ್ರತೆಯನ್ನು ಸೂಚಿಸುವ ಪದವನ್ನಾಗಿ ಬಳಕೆಗೆ ತಂದಿದ್ದರು. ಸಾಹಿತ್ಯ ಮೂಲತಃ ಲೇಖಕನ ಅಥವಾ ಬರಹಗಾರನ ಆಂತರಿಕ ಲೋಕದ ಅಭಿವ್ಯಕ್ತಿಯ ಭಾವನಾತ್ಮಕ ತತ್ವ ವಿಚಾರ. ಹಾಗೆಯೇ ಅದು ಆತನ ಭಾವನೆಯ ರೂಪದಲ್ಲಿರುವ ಶಬ್ದಾರ್ಥಗಳ ಸಹಿತತ್ವವಾಗಿರುತ್ತದೆ.

ಸಾಹಿತ್ಯ ಅನ್ನುವಂತಹದ್ದು ಕಾಲ್ಪನಿಕವಾದದ್ದು. ಅಂದರೆ ಈ ಲೋಕದಿಂದ ಹೊರತಾದುದಲ್ಲ. ಈ ಲೋಕ ಜಗತ್ತಿನ ಸಂಗತಿಗಳು, ಘಟನೆಗಳು, ಕಾರ್ಯಕಾರಣಗಳು ಲೇಖಕನಿಗೆ ಮೂಲವಸ್ತುಗಳಾಗಿದ್ದರೂ ಅವುಗಳನ್ನು ತನ್ನೊಳಗಿನ ಭಾವ ಜಗತ್ತಿನಲ್ಲಿ ಕರಗಿಸಿಕೊಂಡು ತನ್ನ ಸೃಜನಶೀಲ ಕ್ರಿಯೆ-ಪ್ರಕ್ರಿಯೆಗಳಿಂದ ವಿಭಿನ್ನ ಸ್ವರೂಪದಲ್ಲಿ ಭಾಷಾಮಾಧ್ಯಮದ ಮೂಲಕ [illegible] ಪುನರ್ ಸೃಷ್ಟಿಸುತ್ತಾನೆ. ಈ ಪ್ರಕ್ರಿಯೆಯ [illegible] ಸಾಹಿತ್ಯವೆನ್ನುವುದು. ಈ ಹಿನ್ನೆಲೆಯಲ್ಲಿಯೆ [illegible] ತು ''ತಾನು ಪಡೆಯುವ

ಪ್ರಾಪಂಚಿಕ ಅನುಭವಗಳನ್ನು ಆತ್ಮಾನಂದರೂಪವಾಗಿ ತಾನು ವ್ಯಂಜಿಸಬೇಕೆಂದಿರುವ ಭಾವನೆಗಳಿಗೆ ತಕ್ಕಂತೆ ಅರ್ಥಸಹಿತವಾದ ಶಬ್ದಗಳಿಂದ ಪುನಃ ಬಹಿರಂಗಪಡಿಸುವ ಕಲಾಸೃಷ್ಟಿಯನ್ನು ನಾವು ಸಾಹಿತ್ಯವೆಂದು ಕರೆಯಬಹುದೆಂದು'' ವಸ್ತುನಿಷ್ಠವಾಗಿ ವಿವೇಚಿಸಿದ್ದಾರೆ. ಸಾಹಿತ್ಯ ಲೋಕದ ಯಥಾವತ್ತಾದ ಅನುಕರಣೆಯಲ್ಲ. ಬದಲಾಗಿ ಅದು ಪುನರ್ ಸೃಷ್ಟಿಯ ಕ್ರಿಯೆ. ಬ್ರಹ್ಮಲೋಕ ಜಗತ್ತನ್ನು ಸೃಷ್ಟಿಸಿದ್ದಾನೆಂದು ಸಂಪ್ರದಾಯ ನಿಷ್ಠೆಗಳು ಹೇಳಿದರೆ, ಅದೇ ಸೃಷ್ಟಿಯನ್ನು ಲೇಖಕ ಅಥವಾ ಕವಿ ತನ್ನ ಭಾವಲೋಕದಲ್ಲಿ ಪುನರ್ ಸೃಷ್ಟಿಮಾಡುತ್ತಾನೆ. ಆದ್ದರಿಂದಲೇ ಈತನು ಸಾಹಿತ್ಯ ಜಗತ್ತಿನಲ್ಲಿ ಎರಡನೆಯ ಬ್ರಹ್ಮನೆಂದು ಕರೆಯಿಸಿಕೊಳ್ಳುತ್ತಾನೆ. ಸಾಹಿತಿಯ ಈ ಪ್ರಕ್ರಿಯೆಯನ್ನೇ ಡಾ॥ ಜಿ.ಎಸ್. ಶಿವರುದ್ರಪ್ಪನವರು (ಸಮಗ್ರ ಗದ್ಯ) ''ಸಾಹಿತ್ಯ ಜೀವನದ ಗತಿಬಿಂಬ'' ಎಂದು ಕರೆದಿದ್ದಾರೆ.

ಸಾಹಿತಿ ಮತ್ತು ಸಾಹಿತ್ಯದ ಕ್ರಿಯೆ ವಿಶಿಷ್ಟ ಅನುಭವದಿಂದ ಕೂಡಿದ ಅಭಿವ್ಯಕ್ತಿಸ್ವರೂಪದ್ದಾಗಿರುತ್ತದೆ. ಅದನ್ನು ಸಾಹಿತಿ ತನ್ನ ವಿಶಿಷ್ಟ ಅನುಭವ ವಿಶೇಷವಾದ ಭಾಷಾ ಮಾಧ್ಯಮದ ಮೂಲಕ ಹೊರಗೆಡವುತ್ತಾನೆ. ''ಹೀಗೆ ತನ್ನಲ್ಲಿನ ಅನುಭವಗಳನ್ನು ಸಮುಚಿತವಾದ ಭಾಷಾ ಮಾಧ್ಯಮದ ಮೂಲಕ ಪರಿಣಾಮಕಾರಿಯಾಗಿ ಬಿಡುಗಡೆ ಮಾಡಿಕೊಳ್ಳುವ ಕಲೆಗಾರಿಕೆಯನ್ನು ಸಾಹಿತ್ಯ ಎಂದು ಕರೆಯಬಹುದು'' ಎಂದು ಸಾಹಿತ್ಯವನ್ನು (ಸಮಗ್ರ ಗದ್ಯ) ವ್ಯಾಖ್ಯಾನಿಸಿರುವ ಪ್ರೊ. ಜಿ.ಎಸ್. ಶಿವರುದ್ರಪ್ಪ ನವರ ಮಾತುಗಳು ಅರ್ಥಪೂರ್ಣವಾದುದು. ಸಾಹಿತಿಯ 'ವಿಶಿಷ್ಟ ಅನುಭವ ವಿಶೇಷ' ವೆಂದರೆ ಇದೊಂದು ಸಾಹಿತಿಯ ವಿಶೇಷವಾದ ಕುಸುರಿ ಕೆಲಸ. ಈ ಕ್ರಿಯೆ ಎಲ್ಲರಿಗೂ ದಕ್ಕುವುದಿಲ್ಲ. ಸಾಹಿತ್ಯ ಮುಖ್ಯವಾಗಿ ಧ್ಯಾನ (ಸ್ಫೂರ್ತಿ)ಸ್ಥಿತಿಯ ಚಿತ್ತವೃತ್ತಿ. ಇದರಲ್ಲಿ ಯಾರು ನೈಪುಣ್ಯತೆ, ತನ್ಮಯತೆ, ಏಕಚಿತ್ತತೆ, ಪ್ರತಿಭೆಯ ಕಾಣ್ಕೆ, ಸಮೃದ್ಧತೆ ಹಾಗೂ ಕಾಯಕ ನಿಷ್ಠೆಯನ್ನು ಸಾಧಿಸಿಕೊಂಡಿರುತ್ತಾರೋ ಅವರಿಗೆ ಈ ಜಾಣ್ಮೆ ಸಿದ್ಧಿಸುತ್ತದೆ. ಸಾಹಿತ್ಯ ಎಲ್ಲ ಜ್ಞಾನಶಾಸ್ತ್ರ ಶಿಸ್ತುಗಳಿಗಿಂತಲೂ ಪ್ರತ್ಯೇಕವಾದ, ವಿಶೇಷವಾದ ಸೃಜನಶೀಲ ಮನಸ್ಸಿನ ಭಾವನಾತ್ಮಕವಾದ ಜ್ಞಾನ ಶಾಖೆಯಾಗಿದೆ.

## ಸಾಹಿತ್ಯದ ಸ್ವರೂಪ

ಸಾಹಿತ್ಯ ಲೇಖಕನ ಅಥವಾ ಬರಹಗಾರನ ಸೃಜನಶೀಲ ಮನಸ್ಸಿನ ಅನುಭವದ ಅಭಿವ್ಯಕ್ತಿಯ ಬರವಣಿಗೆಯ ಕ್ರಿಯಾ ಸೃಷ್ಟಿಯಾದರೂ, ಅದು ತನ್ನ ಒಡಲಿನಲ್ಲಿ ವಾಸ್ತವ ಬದುಕಿನ ಪ್ರಕ್ರಿಯೆಯ ಪುನರ್ ಸೃಷ್ಟಿಯನ್ನು ನಿರ್ಮಿಸಿಕೊಂಡಿದೆ. ಹಾಗಾಗಿ ಸಾಹಿತ್ಯ ವಾಸ್ತವ ಬದುಕಿನ ಬದ್ಧತೆಯ ಇನ್ನೊಂದು ರೂಪವಾಗಿದೆ. ಅದು ಲೋಕೋತ್ತರ ಲೋಕಾತೀತ ಹಾಗೂ ಲೋಕಾತಿಶಯವಾದ

ಪುರಾವೆ ಅಂದರೆ ಕ್ರಿ.ಶ. 634 ರಲ್ಲಿ ರಚಿಸಲಾಗಿರುವ ಐಹೊಳೆ ಶಾಸನಗಳು. ಈ ಹೊತ್ತಿಗೆ ಕನ್ನಡದ ಪದಗಳು ಕೂಡ ಬಳಕೆಯಾಗಿರುವ ಸೂಚನೆಗಳು ಈ ಶಾಸನಗಳಲ್ಲಿ ತಿಳಿಯಬಹುದಾಗಿದೆ. ಹಲವಾರು ಶಾಸನಗಳು ನಮಗೆ ದೊರೆತಿದ್ದರೂ ನಮಗೆ ದೊರೆಯುವ ಮೊದಲ ಗ್ರಂಥ 'ಕವಿರಾಜಮಾರ್ಗ'. ಇದು ಒಂಬತ್ತನೆಯ ಶತಮಾನದ ರಾಷ್ಟ್ರಕೂಟ ಚಕ್ರವರ್ತಿಯಾದ ಅಮೋಘವರ್ಷ ನೃಪತುಂಗನ ಕಾಲದಲ್ಲಿ ರಚನೆಯಾದ ಗ್ರಂಥವಾಗಿದೆ. ಆದರೆ ಇದನ್ನು ಬರೆದ ಕವಿಯ ಬಗೆಗೆ ನಿರ್ದಿಷ್ಟಸಾಕ್ಷಿಗಳಿಲ್ಲವಾದರೂ ನೃಪತುಂಗನ ಆಸ್ಥಾನದಲ್ಲಿದ್ದ ಶ್ರೀವಿಜಯನೆಂಬುವನು ಇದನ್ನು ಬರೆದನೆಂದು ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

'ಕವಿರಾಜಮಾರ್ಗ' ವೆನ್ನುವ ಗ್ರಂಥವನ್ನು ಹೊರತುಪಡಿಸಿದರೆ ಮುಂದಿನ ನೂರು ವರ್ಷಗಳ ಅವಧಿಯಲ್ಲಿ ನಮಗೆ ದೊರೆಯುವುದು ಪಂಪನ 'ವಿಕ್ರಮಾರ್ಜುನ ವಿಜಯ' ಮತ್ತು 'ಆದಿಪುರಾಣ'ಗಳು. ಸಾಹಿತ್ಯದ ದೃಷ್ಟಿಯಿಂದ ಪಂಪನೇ ಆದಿಕವಿಯೆಂದು ತೀರ್ಮಾನಿಸಲಾಗಿದೆ. ಇವತ್ತಿನ ಸಾಹಿತ್ಯದ ಪ್ರಗತಿಯನ್ನು ಹೋಲಿಸಿದರೆ, ಹಿಂದಿನ ಸಾಹಿತ್ಯದ್ದು ಮಂದಗತಿ ಅನ್ನಿಸುವುದು ಸಹಜವಾದರೂ ಇದಕ್ಕೆ ಅಕ್ಷರತೆಯ ಪ್ರಮಾಣ ಕಾರಣವಾಗಿರಬಹುದು.

ಕನ್ನಡ ಸಾಹಿತ್ಯ ಆಧುನಿಕ ಕಾಲವನ್ನು ಹೊರತುಪಡಿಸಿ ನೋಡಿದರೆ, ಮೂರು ನಾಲ್ಕು ಹಂತಗಳಲ್ಲಿ ಒಂದು ಹೊಸತಿರುವನ್ನು ಪಡೆದಿದೆ. ಈ ಬದಲಾವಣೆ, ಕವಿಗಳ ದೃಷ್ಟಿ, ಧ್ಯೇಯ, ಧೋರಣೆಗಳಲ್ಲಿ ಮಾತ್ರವಲ್ಲ, ಕಾವ್ಯದ ಛಂದೋ ರೂಪಗಳಲ್ಲಿಯೂ, ಭಾಷಾ ರೂಪಗಳಲ್ಲಿಯೂ ಅನುಕ್ರಮವಾಗಿ ಕಾಣಿಸಿಕೊಂಡಿದೆ. ಚಂಪೂ, ವಚನ, ರಗಳೆ, ಷಟ್ಪದಿ, ಕೀರ್ತನ, ತ್ರಿಪದಿ, ಸಾಂಗತ್ಯ ಇವುಗಳನ್ನು ಗಮನಿಸಬಹುದಾಗಿದೆ. ಮೊದಲನೆಯದು ಚಂಪೂ ಕಾವ್ಯ ಪ್ರಕಾರವಾಗಿದ್ದು ಗದ್ಯಪದ್ಯ ಮಿಶ್ರಿತವಾದ, ಪ್ರೌಢವಾದ ಬರವಣಿಗೆಯ ಕಾಲ. ವಿಕ್ರಮಾರ್ಜುನ ವಿಜಯ, ಆದಿಪುರಾಣಗಳು ಈ ಕಾಲದ ಪ್ರಮುಖ ಕೃತಿಗಳಾಗಿವೆ. ಕನ್ನಡ ಸಾಹಿತ್ಯದಲ್ಲಿ ಪಂಪನ ನಂತರದ ನವೋದಯ ಘಟ್ಟ ಎಂದರೆ ಹನ್ನೆರಡನೆಯ ಶತಮಾನದ ವಚನ, ರಗಳೆ, ಷಟ್ಪದಿಗಳ ಕಾಲ. ಈ ಕಾಲದ ಮುಖ್ಯ ಲಕ್ಷಣವೆಂದರೆ, ಸಾಹಿತ್ಯವು ರಾಜಾಶ್ರಯದ ಹಂಗನ್ನು ತಿರಸ್ಕರಿಸಿದ್ದು, ಅದುವರೆಗು ಕನ್ನಡದ ಮೇಲೆ ಕವಿದುಕೊಂಡ ಸಂಸ್ಕೃತದ ದಟ್ಟವಾದ ಪ್ರಭಾವದಿಂದ ತಪ್ಪಿಸಿಕೊಂಡು ಸರಳವಾದ ಸುಲಭವಾದ ಆಡುಮಾತಿನ ಧಾಟಿಯಲ್ಲಿ ವಚನಗಳನ್ನು ಬರೆದದ್ದು. ಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ, ಚನ್ನಬಸವ, ಅಕ್ಕಮಹಾದೇವಿ, ಜೇಡರ ದಾಸಿಮಯ್ಯ ಮುಂತಾದವರು ಪ್ರಮುಖರಾದ ವಚನಕಾರರಾಗಿದ್ದಾರೆ. ಈ ವಚನ ರಚನೆಯಲ್ಲಿ ಅಂದಿನ ಸಾಮಾನ್ಯ ಜನರೂ ಪಾಲ್ಗೊಂಡಿದ್ದಾರೆ. ಅಂಬಿಗರ ಚೌಡಯ್ಯ, ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ನುಲಿಯ ಚಂದಯ್ಯ ಇತ್ಯಾದಿ ವಚನಕಾರರ

ಹೆಸರುಗಳು ಅವರವರು ಕೈಗೊಂಡ ವೃತ್ತಿಯನ್ನೂ ಮತ್ತು ಅವರು ಬಂದ ಸಾಮಾಜಿಕ ಸ್ತರಗಳನ್ನೂ ಸೂಚಿಸುತ್ತದೆ.

ವಚನಕಾರರ ನಂತರ ಪ್ರಮುಖ ಕವಿಯಾಗಿ ಗೋಚರವಾಗುವ ಹರಿಹರ ಕವಿ. ಆತ ತನ್ನ ರಗಳೆ ಕಾವ್ಯಪ್ರಕಾರದಲ್ಲಿ ಬೃಹತ್ ಸಾಹಿತ್ಯವನ್ನು ರಚಿಸಿದ್ದು ಆತನನ್ನು ರಗಳೆಯ ಕವಿ ಎಂದು ಹಾಸ್ಯ ಮಾಡಿದ್ದರಿಂದ ತಾನು ಚಂಪೂ ರೀತಿಯಲ್ಲಿ ಪ್ರೌಢವಾಗಿ ಬರೆಯಬಲ್ಲನೆಂದು ತೋರಿಸಲು 'ಗಿರಿಜಾ ಕಲ್ಯಾಣ'ವನ್ನು ಬರೆದಿದ್ದಾನೆ. ಹರಿಹರನು ರಗಳೆಗಳನ್ನು ಬರೆಯುತ್ತಿದ್ದ ಸಂದರ್ಭದಲ್ಲಿಯೇ ಅವನ ಸೋದರಳಿಯನಾದ ರಾಘವಾಂಕ ಷಟ್ಪದಿ ರೂಪದಲ್ಲಿ ಬರೆಯುತ್ತಿದ್ದುದು ವಿಶೇಷವಾಗಿದೆ. ಹರಿಹರನ ರಗಳೆ, ಸುದೀರ್ಘವಲ್ಲದ ಕಥನ ಕಾವ್ಯಕ್ಕೆ ಮಾತ್ರ ಖಚಿತವೆಂದು ಕಂಡು ಬಂದಿದ್ದರಿಂದ ರಗಳೆಯ ರೂಪವೊಂದರ ಅಭಿವ್ಯಕ್ತಿಯ ಸಾಧ್ಯತೆಗಳನ್ನು ಹರಿಹರ ಸೂರೆಮಾಡಿದ್ದರಿಂದ, ಅದೇ ಕಾಲದ ತಾನು ಬೇರೊಂದು ಅಭಿವ್ಯಕ್ತಿ ಮಾಧ್ಯಮವನ್ನು ರೂಪಿಸಿಕೊಳ್ಳಬೇಕೆನ್ನುವ ರಾಘವಾಂಕನ ವಿವೇಕಪರವಾದ ಎಚ್ಚರ ಕನ್ನಡದ ಷಟ್ಪದಿ ಪರಂಪರೆಗೆ ನಾಂದಿಯಾಯಿತು. ರಾಘವಾಂಕನಿಂದ ಮೊದಲು ಮಾಡಿಕೊಂಡು, ಹತ್ತೊಂಬತ್ತನೆಯ ಶತಮಾನದವರೆಗೆ ರಚಿತವಾದುವೆಂದು ತಿಳಿದಿರುವ ಷಟ್ಪದಿ ಕಾವ್ಯಗಳನ್ನು ಪಟ್ಟಿ ಮಾಡಿದರೆ ಅವು ನೂರಾಮೂವತ್ತರವರೆಗೆ ಆಗುತ್ತವೆ.

ನಂತರದ ಬೆಳವಣಿಗೆಯಲ್ಲಿ ಪ್ರಾರಂಭವಾದ ದಾಸ ಸಾಹಿತ್ಯ ಪ್ರಕಾರದ ಕಾವ್ಯ ರಚನೆ ಸಾಹಿತ್ಯದ ದಿಕ್ಕೇ ಬದಲಾಗಿ ಹೋಯಿತು. ಕೀರ್ತನೆಗಳೆಂದು ಈ ಸಾಹಿತ್ಯ ರೂಪ, ವೈಷ್ಣವ ಭಕ್ತಿಯು ಕನ್ನಡನಾಡಿನಲ್ಲಿ ಪ್ರವಹಿಸಿದ ಸಂದರ್ಭದಲ್ಲಿ ಹುಟ್ಟಿಕೊಂಡಿತು. ಹರಿದಾಸರಿಂದ ಕನ್ನಡದಲ್ಲಿ ವೈಷ್ಣವ ಸಾಹಿತ್ಯವಾದ ಕೀರ್ತನೆಗಳು ರಚಿತವಾದವು. ಹದಿಮೂರನೇ ಶತಮಾನದ ಕೊನೆಗಿದ್ದ ನರಹರಿತೀರ್ಥರೇ ಈ ಪರಂಪರೆಗೆ ಮೊದಲಿಗರೆನ್ನಬಹುದು. ಕೀರ್ತನೆಗಳು ಹುಟ್ಟಿಕೊಂಡಿದ್ದು ಹಾಡಾಗಿಯೇ, ಹಾಡುವುದಕ್ಕಾಗಿಯೇ. ಮೊದಲು ಪಲ್ಲವಿ, ಅನುಪಲ್ಲವಿ ಆನಂತರ ನಾಲ್ಕು ಪದಗಳ ಕೆಲವು ಪದ್ಯಗಳು. ಈ ಕೀರ್ತನೆಗಳಿಂದ ಮುಖ್ಯವಾಗಿ ಪುರಂದರದಾಸರ ಕೀರ್ತನೆಗಳಿಂದ ಕರ್ನಾಟಕ ಸಂಗೀತವು ಉದಯವಾಗಿ ತೆಲುಗಿನ ಸುಪ್ರಸಿದ್ಧ ವಾಗ್ಗೇಯಕಾರರಾದ ತ್ಯಾಗರಾಜರಿಗೆ ಸ್ಫೂರ್ತಿಯಾಯಿತೆಂಬುದು ಮಹತ್ವದ ಸಂಗತಿಯಾಗಿದೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮುಂದಿನದು ಹೊಸಗನ್ನಡ ಸಾಹಿತ್ಯ ಯುಗವಾಗಿದ್ದು ಗದ್ಯ ಮತ್ತು ಭಾವಗೀತೆಗಳನ್ನು ಈ ಕಾಲದ ಮುಖ್ಯ ಸಾಹಿತ್ಯ ರೂಪಗಳೆನ್ನಬಹುದು. ಈ ಕಾಲದಲ್ಲಿ ನಡೆದಷ್ಟು ಪ್ರಯೋಗಗಳು ಹಿಂದೆಂದೂ ನಡೆದಿಲ್ಲ. ಹೊಸಗನ್ನಡವು ಗದ್ಯರೂಪ ಸಾಹಿತ್ಯದ ಗದ್ದುಗೆಯನ್ನೇರಿದ ಕಾಲ

ಎನ್ನಬಹುದು. ಹೊಸಗನ್ನಡ ಸಾಹಿತ್ಯ ಅನೇಕ ಮುಖವಾಗಿ ಬೆಳೆದಿದ್ದು ಹಿಂದಿನ ಸಾಹಿತ್ಯ ಪರಂಪರೆಯಿಂದ ತೀರಾ ಭಿನ್ನವಾದ ದೃಷ್ಟಿ, ಧ್ಯೇಯ, ಧೋರಣೆ, ಶೈಲಿಗಳಲ್ಲಿ ಹೊಸತನವನ್ನು ಪ್ರಕಟಿಸಿಕೊಂಡಿದೆ.

**ಧರ್ಮ ರಾಜಾಶ್ರಯ ಮತ್ತು ಕನ್ನಡ ಸಾಹಿತ್ಯ ಚರಿತ್ರೆ**

(ಕನ್ನಡ ಸಾಹಿತ್ಯದ ಬೆಳವಣಿಗೆಗೆ ಕರ್ನಾಟಕ ಪ್ರಮುಖ ಅರಸರ ಮನೆತನಗಳು ನೀಡಿದ ಪ್ರೋತ್ಸಾಹ, ಕರ್ನಾಟಕ ಪ್ರಮುಖ ಬೆಳವಣಿಗೆಯಲ್ಲಿ ಸಾಹಿತ್ಯ ಮತ್ತು ಸಾಹಿತ್ಯದ ಬೆಳವಣಿಗೆಯಲ್ಲಿ ಧರ್ಮ ನಿರ್ವಹಿಸಿದ ಪಾತ್ರ)

ಯಾವುದೇ ಭಾಷೆಯ ಸಾಹಿತ್ಯವು ಜೀವಂತವಾಗಿದ್ದಲ್ಲಿ, ನಿಂತ ನೀರಾಗಿರುವುದಿಲ್ಲ. ಬದಲಾಗಿ ಸದಾ ಹರಿಯುವ ನೀರಿನಂತೆ ಸಮೃದ್ಧವಾಗಿರುತ್ತದೆ ಮತ್ತು ಕ್ರಿಯಾಶೀಲವಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಒಂದು ಭಾಷೆಯಲ್ಲಿ ರಚನೆಯಾಗುವ ಸಾಹಿತ್ಯವು ತನ್ನನ್ನು ಸದಾ ಬದಲಾವಣೆಗೆ ಒಡ್ಡಿಕೊಳ್ಳುತ್ತದೆ. ಒಂದು ಪ್ರಕಾರದಲ್ಲಿ ರಚನೆಯಾಗುತ್ತಿದ್ದ ಕಾವ್ಯ ಪ್ರಕಾರ ನಿರಂತರವಾಗಿ ಬದಲಾಗುತ್ತಾ ಸಾಗುತ್ತದೆ. ತನ್ನಲ್ಲಿ ಹೊಸದನ್ನು ಸೇರಿಸಿಕೊಂಡು ಹಳೆಯದನ್ನು ತೊರೆದು ಹೊಸ ಹೊಸ ರೂಪಗಳನ್ನು ಪಡೆಯುತ್ತಾ ಸಾಗುತ್ತದೆ. ಕಾಲದಿಂದ ಕಾಲಕ್ಕೆ ಹಳೆಯ ರೂಪಗಳನ್ನು ನಿಧಾನವಾಗಿ ಕಳಚುತ್ತಾ, ಹೊಸ ರೂಪಗಳನ್ನು ತೊಡುತ್ತಾ ಬೆರಳೆಣಿಕೆಗೆ ನಿಲುಕುವ ಕೆಲವೇ ತಿರುವುಗಳಲ್ಲಿ ಹಾಯ್ದು, ಸಮೃದ್ಧವಾಗಿ ಬೆಳೆದಿರುವ ಕನ್ನಡ ಸಾಹಿತ್ಯದ ಪ್ರಮುಖ ಪ್ರೇರಣೆಗಳು ಮುಖ್ಯವಾಗಿ ಮೂರು ಎಂದು ಲೆಕ್ಕ ಹಾಕಬಹುದು. ನಮ್ಮ ಕವಿಗಳು ಹುಟ್ಟಿ ಬೆಳೆದ ಪರಿಸರದಲ್ಲಿದ್ದ ಮತ್ತು ನಮ್ಮ ಕವಿಗಳು ಶ್ರದ್ಧೆಯಿಂದ ಒಪ್ಪಿಕೊಂಡ ಪ್ರಮುಖವಾದ ಮತಧರ್ಮಗಳು ಮೊದಲನೆಯದು. ಕವಿಗಳಿಗೆ ಉದ್ದಕ್ಕೂ ಆಶ್ರಯ ಹಾಗೂ ಪ್ರೋತ್ಸಾಹವನ್ನು ಒದಗಿಸಿದ ರಾಜಾಸ್ಥಾನಗಳು ಎರಡನೆಯದಾದರೆ ನಮ್ಮ ಕವಿಗಳಿಗೆ ಸಾಹಿತ್ಯದ ಆರಂಭ ಕಾಲದಿಂದಲೂ ಹಿನ್ನೆಲೆಯಾಗಿದ್ದುಕೊಂಡು, ಅವರ ಕೃತಿಗಳ ವಸ್ತು ಹಾಗೂ ಭಾಷೆಯ ಮೇಲೆ ಪ್ರಬಲವಾದ ಪ್ರಭಾವವನ್ನು ಬೀರುತ್ತಾ ಬಂದ ಸಂಸ್ಕೃತ ಸಾಹಿತ್ಯ ಪರಂಪರೆ ಮೂರನೆಯದು.

ಭಾರತೀಯ ಜನರು ಮೂಲಭೂತವಾಗಿ ಧರ್ಮದ ತಳಹದಿಯ ಮೇಲೆ ಬದುಕುತ್ತಿದ್ದು ಎಲ್ಲಾ ಕಾವ್ಯ ಕಲೆಗಳ ಮೂಲ ಸ್ಫೂರ್ತಿಯ ಸೆಲೆಯೇ ಧರ್ಮವಾಗಿದೆ. ಹಾಗೆಯೇ ಕನ್ನಡ ನಾಡು ಅನೇಕ ಧರ್ಮಗಳ ನೆಲೆ ಮನೆಯಾದದ್ದರ ಜೊತೆಗೆ ಈ ಎಲ್ಲಾ ಧರ್ಮಗಳು ಜತೆಗೂಡಿ ವರ್ಧಿಸುವ ಅವಕಾಶವನ್ನು ಉದ್ದಕ್ಕೂ ಕಲ್ಪಿಸಿಕೊಟ್ಟಿದೆ. ಕರ್ನಾಟಕದಲ್ಲಿ ಪ್ರವರ್ಧಮಾನವಾದ ಮುಖ್ಯ ಧರ್ಮಗಳು ಇಲ್ಲಿನ ಸಾಹಿತ್ಯ ಹಾಗೂ ಕಲೆಗಳ ಬೆಳವಣಿಗೆಗೆ ಕಾರಣವಾಗಿದೆ. ಅವುಗಳನ್ನು ಜೈನ, ವೀರಶೈವ ಮತ್ತು ವೈಷ್ಣವ

ಧರ್ಮಗಳೆಂದು ಗುರುತಿಸಬಹುದು. ಆಯಾ ಮತಧರ್ಮಗಳು ಕರ್ನಾಟಕದಲ್ಲಿ ಉತ್ಕರ್ಷವಾಗಿದ್ದು, ಅಂದಂದಿನ ಸಾಹಿತ್ಯಕ್ಕೆ ಮುಖ್ಯ ಪ್ರೇರಣೆಗಳಾಗಿರುವುದು ವಾಸ್ತವ. ಇವುಗಳ ಜತೆಗೆ ಕರ್ನಾಟಕದಲ್ಲಿ ಬೌದ್ಧ ಧರ್ಮವೂ ಒಂದು ಕಾಲಕ್ಕೆ ಇದ್ದುದರಿಂದ ಕನ್ನಡದಲ್ಲಿ ಬೌದ್ಧ ಸಾಹಿತ್ಯವೊಂದು ಇದ್ದಿರಬೇಕೆಂದು ಟಿ.ಎಸ್. ವೆಂಕಣ್ಣ ಅಭಿಪ್ರಾಯಪಡುತ್ತಾರೆ.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿ ನೋಡಿದಾಗ ಆಧುನಿಕ ಕಾಲವನ್ನು ಹೊರತುಪಡಿಸಿ, ಉದ್ದಕ್ಕೂ ಜೈನ, ವೀರಶೈವ, ವೈಷ್ಣವ ಧರ್ಮಗಳು ಕನ್ನಡ ಸಾಹಿತ್ಯದ ಪ್ರೇರಕ ಶಕ್ತಿಗಳಾಗಿರುವುದು ಕಂಡು ಬರುತ್ತದೆ. ಕನ್ನಡ ಸಾಹಿತ್ಯದ ಮಟ್ಟಿಗೆ ಜೈನರೇ ಸಾಹಿತ್ಯದಲ್ಲಿ ಸಮೃದ್ಧಿ ತಂದ ಮೊದಲಿಗರಾಗಿದ್ದು ತೀರ್ಥಂಕರರ ಚರಿತ್ರೆ, ಪ್ರಸಿದ್ಧ ಪುರುಷರ ಇತಿಹಾಸಗಳು, ಜೈನತತ್ವಗಳು ಇವೇ ಮುಂತಾದ ಜೈನ ಮತ ಸಂಬಂಧವಾದ ವಿಷಯಗಳನ್ನು ಪ್ರೌಢವಾದ ಹಳಗನ್ನಡ ಶೈಲಿಯಲ್ಲಿ ಚಂಪೂ ಗ್ರಂಥಗಳಲ್ಲಿ ವಿಸ್ತಾರವಾಗಿ ಬರೆದಿದ್ದಾರೆ. ಹಿಂದಿನ ಸಾಹಿತ್ಯದ 'ವಸ್ತು'ಗಳನ್ನು ಪಟ್ಟಿ ಮಾಡಿದರೆ, ಧರ್ಮ-ತತ್ವ-ನೀತಿ ಪ್ರಚಾರವನ್ನೇ ಮುಖ್ಯ ವಸ್ತುಗಳನ್ನಾಗಿ ಮಾಡಿಕೊಂಡ ಕೃತಿಗಳ ಸಂಖ್ಯೆಯೇ ಮಿಗಿಲಾಗಿದೆ. ಕಾವ್ಯದ ಉದ್ದೇಶವೇ ಧರ್ಮದ ಉದ್ದೇಶವೂ ಆದಾಗ, ಸಾಹಿತ್ಯ ಎನ್ನುವುದು ಧರ್ಮ ಪ್ರಸಾರದ ಹಾಗೂ ಧರ್ಮ ಪ್ರಚಾರದ ಮಾಧ್ಯಮವಾಗಿದ್ದೇ ಇದಕ್ಕೆ ಪ್ರಮುಖ ಕಾರಣ.

ಕವಿಗಳು ತಮ್ಮ ತಮ್ಮ ಕೃತಿಗಳಲ್ಲಿ ಸ್ವವಿಷಯಗಳನ್ನು ಹೇಳಿಕೊಳ್ಳುವಾಗ ತಾವು ಯಾವ ಮತ-ಧರ್ಮದವರು ಎಂದೂ, ಆಯಾ ಧರ್ಮಗಳ ಆಚಾರ ವಿಚಾರಗಳಲ್ಲಿ ತಮಗಿರುವ ಒಲವು ನಿಲುವುಗಳನ್ನು ಹೇಳಿಕೊಂಡಿದ್ದಾರೆ. ಒಟ್ಟಿನಲ್ಲಿ ಯಾವ ಕವಿಯೂ ತಾನು ಒಪ್ಪಿಕೊಂಡ ಮತ-ಧರ್ಮಗಳ ಪ್ರಭಾವದಿಂದ ಹೊರಗೆ ನಿಲ್ಲಲು ಸಾಧ್ಯವಾಗಿಲ್ಲ. ಹಾಗಾಗಿ ಪ್ರತಿಯೊಬ್ಬ ಕವಿಯೂ ತನ್ನ ಕಾವ್ಯ ಮುಖೇನ ತಾನು ಹುಟ್ಟಿ ಬೆಳೆದ ಮತ-ಧರ್ಮಕ್ಕೆ ಅಭಿವ್ಯಕ್ತಿಯನ್ನು ಕೊಡುವುದು ತನ್ನ ಕರ್ತವ್ಯ ಎಂದು ಭಾವಿಸಿದಂತೆ ತೋರುತ್ತದೆ.

ಧರ್ಮದಿಂದ ಪ್ರೇರಣೆಗೊಂಡು ರಚಿತವಾದ ಸಾಹಿತ್ಯವನ್ನು ನಾವು ಮೂರು ವಿಭಾಗಗಳಾಗಿ ಸ್ಥೂಲವಾಗಿ ವಿಂಗಡಿಸಬಹುದು. ಒಂದು ಧಾರ್ಮಿಕ ಸಾಹಿತ್ಯ, ಎರಡು ಭಕ್ತಿ ಸಾಹಿತ್ಯ, ಮೂರು ಅನುಭಾವ ಸಾಹಿತ್ಯ. ಈ ಮೂರು ಬಗೆಗಳನ್ನು ಜೈನ, ವೀರಶೈವ, ವೈಷ್ಣವ ಕವಿಗಳ ಕೃತಿಗಳಲ್ಲಿ ಕಾಣಬಹುದಾಗಿದೆ. ಹೀಗೆ ಮೂರು ಭಾಗಗಳನ್ನಾಗಿ ವಿಂಗಡಿಸಿಕೊಂಡರೂ ಕೂಡ ಈ ಮೂರು ಬಗೆಗಳೂ ಒಂದೇ ಕಾಲದ ಅಥವಾ ಒಂದೇ ಧರ್ಮದ ಸಾಹಿತ್ಯದಲ್ಲಿರಲಾರವೆಂದು ಅರ್ಥವಲ್ಲ. ಉದಾಹರಣೆಗೆ ಹೇಳುವುದಾದರೆ ವಚನ ಸಾಹಿತ್ಯದ ಕೆಲವು ಭಾಗಗಳು ಏಕಕಾಲಕ್ಕೆ ಧಾರ್ಮಿಕ ಸಾಹಿತ್ಯವೂ ಹೌದು, ಭಕ್ತಿಸಾಹಿತ್ಯವೂ ಹೌದು. ಹಾಗೆಯೇ ಅನುಭಾವ

ಸಾಹಿತ್ಯವೂ ಹೌದು.

ಸಾಹಿತ್ಯದ ಬೆಳವಣಿಗೆಯನ್ನು ಗಮನಿಸಿದರೆ ಅದು ಪ್ರಮುಖವಾಗಿ ಬೆಳೆದದ್ದು ಅನ್ಯರ ಆಶ್ರಯದಿಂದ. ಅಂದರೆ ಕವಿಯ ರಚನೆಯನ್ನು, ಆತನ ಪ್ರತಿಭೆಯನ್ನು ಗುರುತಿಸಿ ಕಾಪಾಡಿ, ಬೆಳೆಸುವ ಹೊಣೆ ಹೊತ್ತ ಹಲವಾರು ರಾಜರುಗಳು, ಸಾಮಂತರು ಹಾಗೂ ಇತರೆ ಕಲಾಸಕ್ತರು ಕಾವ್ಯ ಪರಂಪರೆಯ ಬೆಳವಣಿಗೆಗೆ ಕಾರಣಕರ್ತರಾಗಿದ್ದಾರೆ. ದೈವದತ್ತ ಪ್ರತಿಭೆಯಾದರೂ ಅನುಕೂಲ ವಾತವಾರಣವೂ ಸಕಾಲ ಕೃಷಿಯೂ ಇಲ್ಲದಿದ್ದರೆ ಸಂಪೂರ್ಣ ಕಳೆಯಿಂದ ಬೆಳಗಲಾರದು. ಕನ್ನಡ ಕವಿಗಳ ಸಹಜ ಪ್ರತಿಭೆಯ ಕೃಷಿಗೆ ಇಂತಹ ಒಂದು ಅನುಕೂಲ ವಾತಾವರಣವನ್ನು ಕಲ್ಪಿಸಿ ಸಮೃದ್ಧವಾದ ಸಾಹಿತ್ಯದ ಬೆಳೆಗೆ ಕಾರಣರಾದವರು ಕರ್ನಾಟಕದ ರಾಜಮನೆತನದವರು. ಕವಿಗಳಿಗೆ ತಮ್ಮ ಪ್ರತಿಭೆಯ ಪ್ರಕಾಶನಕ್ಕೆ ರಾಜಾಸ್ಥಾನಗಳು ಅತ್ಯಂತ ಅಗತ್ಯವಾಗಿದ್ದಂತೆಯೇ, ರಾಜರುಗಳಿಗೂ ತಮ್ಮ ಕೀರ್ತಿ ಪ್ರತಿಷ್ಠೆಯ ಪ್ರಕಾಶನಕ್ಕೆ ಕವಿಗಳೂ ಬೇಕಾಗಿದ್ದಂತೆ ತೋರುತ್ತದೆ. ಕರ್ನಾಟಕದ ಇತಿಹಾಸದಲ್ಲಿ ಪ್ರಮುಖವಾದ ರಾಜಮನೆತನಗಳಲ್ಲಿ ತಲಕಾಡಿನ ಗಂಗರು, ಮುಖ್ಯವಾಗಿ ಜೈನರು, ಕದಂಬರು, ರಾಷ್ಟ್ರಕೂಟರು, ವಿಜಯನಗರ ಹಾಗೂ ಮೈಸೂರು ಅರಸರು, ಶೈವರು ಮತ್ತು ವೈಷ್ಣವರು; ಅಂತೆಯೇ ಚಾಳುಕ್ಯರು, ಕಲಚೂರ್ಯರು, ಶೈವರು; ಹೊಯ್ಸಳರಲ್ಲಿ ಕೆಲವರು ವೈಷ್ಣವರು, ಕೆಲವರು ಜೈನರು, ವಿಜಯನಗರದ ಸಾಮಂತರಲ್ಲಿ ಕೆಲವರು ವೀರಶೈವರು ಪ್ರಮುಖರಾದವರು.

ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ಸಾಹಿತಿಗಳು ಯಾವ 'ಬದ್ಧ' ಸ್ಥಿತಿಗೂ ಒಳಗಾಗದೆ ಸಾಹಿತ್ಯವನ್ನು ರಚಿಸುವ ನಿರಾತಂಕ ಪರಿಸರದಲ್ಲಿದ್ದು, ತನ್ನ ಕಾವ್ಯ ಶಕ್ತಿಯನ್ನು ಯಾವ ಬಹಿರಂಗದ ಪ್ರಭುಶಕ್ತಿಗೂ ಅಧೀನವನ್ನಾಗಿಸದೇ ಬರೆಯಬಲ್ಲೆನೆಂಬ ಕೆಚ್ಚು ಇಂದಿನ ಕವಿಗಳಲ್ಲಿ ಪ್ರಕಟವಾಗಿದೆ. ಹಾಗೆಯೇ ಕನ್ನಡ ಸಾಹಿತ್ಯದ ರಚನೆ ಹನ್ನೆರಡನೆಯ ಶತಮಾನದ ವೇಳೆಗೆ ನಿಧಾನವಾಗಿ ಸಂಸ್ಕೃತದ ಪ್ರಭಾವದಿಂದ ಬಿಡಿಸಿಕೊಳ್ಳುತ್ತಾ, ವಸ್ತುವಿನಲ್ಲಿ ಹಾಗೂ ರೀತಿಯಲ್ಲಿ ತನ್ನದೇ ಆದ ಪ್ರಾದೇಶಿಕತೆ ಮತ್ತು ದೇಸೀಯತೆಯನ್ನು ಪಡೆದುಕೊಂಡದ್ದನ್ನು ನೋಡಿದರೆ, ಕನ್ನಡ ಸಾಹಿತ್ಯ ತನ್ನದೇ ಆದ ಸ್ವತಂತ್ರ ರೂಪಗಳಲ್ಲಿ ಪ್ರಕಟವಾಗಿರುವುದು ಕಾಣುತ್ತದೆ. ಕನ್ನಡ ಸಾಹಿತ್ಯ ಎರಡು ರೀತಿಯಲ್ಲಿ ಮುಕ್ತಿ ಪಡೆದಿರುವುದನ್ನು ಕಾಣಬಹುದಾಗಿದೆ.

ಸಂಸ್ಕೃತದಂತೆ, ಪ್ರಾಕೃತ ಭಾಷೆಯ ಸಾಹಿತ್ಯವೂ ಕನ್ನಡ ಕವಿಗಳಿಗೆ ಪ್ರೇರಣೆಯನ್ನು ನೀಡಿದೆ. ಕನ್ನಡದ ನಾಗಚಂದ್ರನು ಬರೆದ 'ಪಂಪ ರಾಮಾಯಣ'ಕ್ಕೆ ಇದೇ ಮೂಲಸ್ಫೂರ್ತಿ. ಹಾಗೆಯೇ ಕನ್ನಡ ಸಾಹಿತ್ಯದ ಮೇಲೆ ತಮಿಳು ಸಾಹಿತ್ಯದ ಪ್ರಭಾವವನ್ನು ಗುರುತಿಸಲು ಸಾಧ್ಯವಾಗುವುದು ವೀರಶೈವ ಸಾಹಿತ್ಯದಲ್ಲಿ. ಹೀಗೆ ಈ ಎಲ್ಲಾ ಹಿನ್ನೆಲೆಯನ್ನು ಒಳಗೊಂಡ ಹೊಸಗನ್ನಡ ಸಾಹಿತ್ಯ, ಹೊಸ ಹೊಸ ರೂಪಗಳನ್ನು

ತಾಳಿದ್ದಕ್ಕೆ ಕಾರಣ, ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಹಾಗೂ ಪ್ರೇರಣೆಗಳೇ ಎಂದು ಕೂಡ ಹೇಳಬಹುದು.

**ಹತ್ತನೇ ಶತಮಾನದ ಸಾಹಿತ್ಯ ಚರಿತ್ರೆ - ಚಂಪೂ ಪರಂಪರೆ**

'ಚಂಪೂ' ಎನ್ನುವುದು ವಿಶಿಷ್ಟವಾದ ಕಾವ್ಯ ಪ್ರಕಾರ. ಗದ್ಯ ಪದ್ಯಗಳೆರಡನ್ನು ಒಳಗೊಂಡ ದೀರ್ಘಕಾವ್ಯ. ಸಂಸ್ಕೃತದ ಅನೇಕ ಬಗೆಯ ವೃತ್ತಗಳಲ್ಲಿ ಕನ್ನಡ ಆರು ವೃತ್ತಗಳನ್ನು ಮುಖ್ಯವಾಗಿ ಬಳಸಿಕೊಂಡಿದೆ. ಹಿಂದಿನ ಕಾಲದಲ್ಲಿ ಕಾವ್ಯಗಳನ್ನು ವಾಚನ ಮಾಡುತ್ತಿದ್ದುದರಿಂದ ಒಂದೇ ಪದ್ಯ ಪ್ರಕಾರ ಬೇಸರ ತರಿಸುತ್ತದೆ ಎನ್ನುವ ಕಾರಣಕ್ಕಾಗಿ ಬೇರೆ ಬೇರೆ ವೃತ್ತಗಳನ್ನು ಬಳಸುತ್ತಿದ್ದರು.

ಚಂಪೂವಿನಲ್ಲಿ ಬರುವ ಗದ್ಯವು ಸಾಧಾರಣವಾದ ವಿಷಯಗಳನ್ನು ನಿರೂಪಿಸುವುದಕ್ಕೆ ಬಳಕೆಯಾಗುತ್ತದೆ. ಇದೊಂದು ದೀರ್ಘವಾದ ಕಾವ್ಯ, ಕತೆಯನ್ನು ವಿಸ್ತಾರಗೊಳಿಸಿ ವರ್ಣನೆಯೊಂದಿಗೆ ಹೇಳುವುದಕ್ಕೆ ಬಳಕೆಯಾಗುತ್ತಿದೆ. ಮಹಾಕಾವ್ಯದ ವಸ್ತುವನ್ನೇ ಬಳಸಿರುತ್ತಾರೆ. ಮತ, ಧರ್ಮ ಕತೆಗಳು, ತೀರ್ಥಂಕರರ ಕತೆಗಳು, ಭಾಗವತರ ಕಥೆಗಳು ಈ ಕಾವ್ಯದ ವಸ್ತುಗಳಾಗಿವೆ. ಶೃಂಗಾರ, ವೀರ, ಶಾಂತ ರಸಗಳನ್ನು ಪ್ರಮುಖವಾಗಿ ಬಳಸಿಕೊಂಡಿದ್ದಾರೆ.

ಅಷ್ಟಾದಶ (18) ವರ್ಣನೆಗಳು ಬರಬೇಕೆಂಬ ನಿಯಮವಿದೆ. ಪ್ರಾರಂಭದಲ್ಲಿ ಇಷ್ಟ ದೈವವನ್ನು ಪ್ರಾರ್ಥಿಸುವುದು ರೂಢಿ. ಇದನ್ನು ಮಂಗಳ ಪದ್ಯವೆಂದೂ ಕರೆಯುತ್ತಾರೆ. ಕಾವ್ಯದ ಕೊನೆಯಲ್ಲಿ ಸ್ವಂತ ವಿಷಯಗಳನ್ನು ಹೇಳಿಕೊಂಡಿರಬಹುದು. ಕಾವ್ಯ ಪ್ರಯೋಜನವನ್ನು ಹೇಳಿರುವ ಸಾಧ್ಯತೆಯಿದೆ. ಇದನ್ನು ಫಲಶ್ರುತಿ ಎನ್ನುತ್ತೇವೆ.

ಚಂಪೂಕಾವ್ಯಗಳು ಹಳಗನ್ನಡದಲ್ಲಿಯೇ ರಚಿತವಾಗಿವೆ. ಸಂಸ್ಕೃತ ಪದಗಳು ಹೆಚ್ಚಾಗಿವೆ. ಚಂಪೂವಿನ ಮೂಲವನ್ನು ಸಂಸ್ಕೃತದಲ್ಲಿ ಹುಡುಕುವ ಪ್ರಯತ್ನವನ್ನು ಕೆಲವು ವಿದ್ವಾಂಸರು ಮಾಡಿದ್ದಾರೆ. 'ಬೆನ್' ಕನ್ನಡ ಪದದಿಂದ ಬಂದಿದೆಯೆಂದು ಕೆಲವರು ಹೇಳುತ್ತಾರೆ. ವೇದಗಳಲ್ಲಿಯೇ ಗದ್ಯ ಪದ್ಯಗಳ ಮಿಶ್ರಣವಿರುವುದರಿಂದ ಚಂಪೂ ಮುಂದಿನ ಹಂತದಲ್ಲಿ ರೂಪುಗೊಂಡಿತು ಎನ್ನಬಹುದು. ಬ್ರಾಹ್ಮಣಕಗಳು, ಉಪನಿಷತ್ತುಗಳು, ಮಹಾಭಾರತ, ಭಾಗವತ, ವಿಷ್ಣು ಪುರಾಣಗಳಲ್ಲಿ ಗದ್ಯ-ಪದ್ಯ ಶೈಲಿಯನ್ನು ಕಾಣುತ್ತೇವೆ. ಪಂಚತಂತ್ರದ ಗದ್ಯದಲ್ಲಿ ಕತೆಯನ್ನು ಪದ್ಯದಲ್ಲಿ ನೀತಿಯನ್ನು ನಿರೂಪಿಸಲಾಗಿದೆ. ಬೌದ್ಧ ಜಾತಕ ಕತೆಗಳ ಸಂಸ್ಕೃತ ಅನುವಾದ 'ಆರ್ಯಶೂರ' ಕವಿಯ 'ಜಾತಕಮಾಲಾ' ಗದ್ಯ-ಪದ್ಯಗಳನ್ನು ಒಳಗೊಂಡಿದೆ.

ನಮಗೆ ದೊರಕುವ ಮೊದಲ ಚಂಪೂ ಗ್ರಂಥ 10ನೇ ಶತಮಾನ ತ್ರಿವಿಕ್ರಮಭಟ್ಟನ 'ನಳಚಂಪು' ನಂತರ ಸೋಮದೇವನ 'ಯಶಸ್ತಿಲಕ ಚಂಪು'. ಅಲ್ಲಿಂದ ಅನೇಕ ಕಾವ್ಯಗಳು ದೊರೆಯುತ್ತವೆ. ಕನ್ನಡದಲ್ಲಿ ದೊರಕುವ ಮೊದಲ

ಗ್ರಂಥ ಕ್ರಿ.ಶ.850 ರ ಕವಿರಾಜಮಾರ್ಗ. ಇದೊಂದು ಶಾಸ್ತ್ರಗ್ರಂಥ. ಮೊದಲನೆಯ ಪರಿಚ್ಛೇದದ 27ನೆಯ ಪದ್ಯದಲ್ಲಿ ಕನ್ನಡದಲ್ಲಿ ಗದ್ಯ-ಪದ್ಯ ಸಮ್ಮಿಶ್ರಿತವಾದ ಕಾವ್ಯಗಳಿದ್ದುವೆಂದು ಹೇಳಿದೆ. 'ನಳಚಂಪು', 'ಯಶಸ್ತಿಲಕ' ಚಂಪುಗಳನ್ನು ಬರೆದವರು ಕರ್ನಾಟಕದವರು.

ಕನ್ನಡದಲ್ಲಿ ಗುಣವರ್ಮನು 'ಹರಿವಂಶ', 'ಶೂದ್ರಕ' ಗಳನ್ನು ಬರೆಯುವುದರ ಮೂಲಕ ಚಂಪೂ ಪರಂಪರೆಯನ್ನು ಪ್ರಾರಂಭಿಸಿದನು. ಹರಿವಂಶ ನೇಮಿನಾಥ ತೀರ್ಥಂಕರನ ಬಗ್ಗೆ ಬರೆದ ಕಾವ್ಯದಂತೆ ಕಾಣುತ್ತದೆ. ಕ್ರಿ.ಶ.950 ರಲ್ಲಿ ಕಾವ್ಯ ರಚಿಸಿದ ಪೊನ್ನನು ತಾನು 'ಕನ್ನಡಗವಿತೆಯೊಳ್ ಅಸಗಂಗಂ ನೂರ್ಮಡಿ' ಎನ್ನುತ್ತಾನೆ. 'ಜಯಕೀರ್ತಿ' 'ಛಂದೋನುಶಾಸನ' ಗ್ರಂಥದಲ್ಲಿ ಅಸಗನು ಕನ್ನಡ ಕುಮಾರ ಸಂಭವವನ್ನು ಬರೆದಿರಬೇಕೆಂದು ಇವನು ಜೈನ ಕವಿಯಾಗಿದ್ದಿರಬೇಕೆಂದು ಅಭಿಪ್ರಾಯಪಡುತ್ತಾರೆ ವಿದ್ವಾಂಸರು.

### ಕವಿರಾಜಮಾರ್ಗ - ಶ್ರೀವಿಜಯ

ಈ ಕೃತಿ ನಮಗೆ ಲಭ್ಯವಿರುವ ಕನ್ನಡದ ಪ್ರಾಚೀನ ಗ್ರಂಥಗಳಲ್ಲಿ ಮೊದಲನೆಯದು. ಇದರ ರಚನಾಕಾರನ ಬಗ್ಗೆ ಅನೇಕ ಚರ್ಚೆಗಳು ನಡೆದಿವೆ. ಈ ಕೃತಿಯ ಒಳಗೆ ರಾಷ್ಟ್ರಕೂಟರ ದೊರೆ ನೃಪತುಂಗನ ಉಲ್ಲೇಖ ಬರುವುದರಿಂದ ಇದರ ಕಾಲವನ್ನು 1815-77 ಎಂದು ನಿರ್ಧರಿಸಲಾಗಿದ್ದು, ಈ ಕೃತಿ ಸುಮಾರು 9ನೇ ಶತಮಾನದ ಉತ್ತರಾರ್ಧದಲ್ಲಿ ರಚನೆಯಾಗಿದೆ ಎಂದು ಹೇಳುತ್ತಾರೆ. ಮುಖ್ಯವಾದವೆಂದರೆ ರಾಜ ನೃಪತುಂಗನೇ ಈ ಕೃತಿ ರಚಿಸಿದನೆಂದೂ ಅಥವಾ ಅವನ ಆಶ್ರಯದಲ್ಲಿದ್ದ ಯಾರೋ ರಚಿಸಿರಬೇಕೆಂದೂ, ಅವನು ಬಹುಶಃ ಕವೀಶ್ವರನೇ ಆಗಿರಬೇಕೆಂದೂ ಅವನೇ ಶ್ರೀವಿಜಯನೆಂದೂ ವಿವಿಧ ರೀತಿಯ ಅಭಿಪ್ರಾಯಗಳು ಬಂದಿವೆ. ಸದ್ಯಕ್ಕೆ ಶ್ರೀವಿಜಯನಿಂದ ರಚಿತವಾಯಿತೆಂದು ತಿಳಿಯಬಹುದು.

ಸದ್ಯಕ್ಕೆ ಕನ್ನಡ ಸಾಹಿತ್ಯದ ದೃಷ್ಟಿಯಿಂದ 'ಕವಿರಾಜಮಾರ್ಗ' ಗ್ರಂಥ ಕನ್ನಡದ ಆದ್ಯ ಗ್ರಂಥ ಎನ್ನುವುದರಲ್ಲಿ ಅನುಮಾನವಿಲ್ಲ. ಮೂರು ಪರಿಚ್ಛೇದಗಳಿಂದ ಕೂಡಿದ ಲಕ್ಷಣ ಶಾಸ್ತ್ರಗ್ರಂಥ, ಅಲಂಕಾರ ಗ್ರಂಥ. ಅಲ್ಲದೆ ವಿಚಾರ ಸಂಪತ್ತಿನಿಂದ ಕೂಡಿದ ಬೆಲೆಯುಳ್ಳ ಕೃತಿ ಎಂಬುದರಲ್ಲಿ ಅನುಮಾನವಿಲ್ಲ. ಇದರ ಮೂರು ಪರಿಚ್ಛೇದಗಳೆಂದರೆ ದೋಷಾನುವರ್ಣನ ನಿರ್ಣಯ, ಶಬ್ದಾಲಂಕಾರವರ್ಣನ ನಿರ್ಣಯ, ಅರ್ಥಾಲಂಕಾರ ವರ್ಣನ ನಿರ್ಣಯ ಎಂಬುವು. ಇದನ್ನೇ ಮುಗಳಿಯವರು ''ಅದರ ಬೆಲೆಯನ್ನು ಚಾರಿತ್ರಿಕ, ಲಾಕ್ಷಣಿಕ, ಇಲ್ಲವೆ ವಿಮರ್ಶ ವಿಷಯಕ ಹಾಗೂ ವಿವೇಕ ಪರ'' ಎಂದು ಮೂರು ಅಂಗದಲ್ಲಿ ತಿಳಿದುಕೊಳ್ಳಬಹುದೆಂದು ಹೇಳುತ್ತಾರೆ. ಈ ಕೃತಿಯನ್ನು ಚಾರಿತ್ರಿಕ ದೃಷ್ಟಿಯ

ಹಿನ್ನೆಲೆಯಲ್ಲಿ ನೋಡಿದರೆ ಅದರ ಒಳಗಡೆ ನೃಪತುಂಗನ ವ್ಯಕ್ತಿತ್ವ, ಮಹಿಮೆ, ಆ ಕಾಲದ ರಾಜಕೀಯ ಸ್ಥಿತಿಗಳು ಧ್ವನಿತವಾಗಿ ಪ್ರಕಟಗೊಂಡಿವೆ ಎನ್ನಬಹುದು. ಬಹಳ ಮುಖ್ಯವಾದ ಇನ್ನೊಂದು ವಿಷಯವೆಂದರೆ, ಬಹಳ ಅಭಿಮಾನದಿಂದ ಕನ್ನಡ ನಾಡು, ನುಡಿಗಳನ್ನು ವರ್ಣಿಸಿರುವುದು ವಿಶೇಷ. ಕವಿರಾಜಮಾರ್ಗಕಾರ ಕನ್ನಡಾಭಿಮಾನಿ ''ಕಾವೇರಿಯಿಂದಮಾ ಗೋದಾವರಿ ವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಲಯ ವಿಲೀನ ವಿಶದವಿಷಯಂ ವಿಶೇಷಂ'' ಎಂದು ಕನ್ನಡದ ಬಗ್ಗೆ ಅಪಾರ ಅಭಿಮಾನ ವ್ಯಕ್ತಪಡಿಸಿದ್ದಾನೆ. ಕರ್ನಾಟಕದ ಭೌಗೋಳಿಕ ವಿಸ್ತಾರ ಅದರೊಳಗಿನ ತಿರುಳ್ಗನ್ನಡದ ಸೀಮೆ ಗುರುತು ಮುಂತಾದ ಸಂಗತಿಗಳನ್ನು ಈ ಕೃತಿಯಲ್ಲಿ ಬಿಟ್ಟರೆ ಈ ಕಾಲಮಾನದಲ್ಲಿ ಮತ್ತೆಲ್ಲೂ ಲಭ್ಯವಾಗುವುದಿಲ್ಲ. ಅಷ್ಟೇ ಅಲ್ಲ ಕನ್ನಡ ನಾಡಿನ ಚರಿತ್ರೆಗೆ ಅನೇಕ ಹೊಸ ಸಂಗತಿಗಳನ್ನು ಒದಗಿಸಿಕೊಟ್ಟಿದೆ ಎಂದರೆ ತಪ್ಪಾಗಲಾರದು. ಇಲ್ಲಿಯ ಎಲ್ಲ ಸಂಗತಿಗಳನ್ನು ಚರಿತ್ರಾಕಾರರು ಪರಾಮರ್ಶಿಸಿ ಒಪ್ಪಿಕೊಂಡಿದ್ದಾರೆ.

ಕವಿರಾಜಮಾರ್ಗಕಾರನು ಉತ್ತರ ಮತ್ತು ದಕ್ಷಿಣ ಮಾರ್ಗ ಎಂಬ ಎರಡು ಕಾವ್ಯ ಪ್ರಕಾರಗಳನ್ನು ಹೆಸರಿಸಿದ್ದಾನೆ. ಬೆದಂಡೆ ಮತ್ತು ಚಿತ್ತಾಣ ರೀತಿಗಳನ್ನು ಹೇಳಿದ್ದಾನೆ. ದಂಡಿ, ಬಾಮಹರು ಈಗಾಗಲೇ ಹೇಳಿದ ಕಾವ್ಯ ಲಕ್ಷಣ 'ಶಬ್ದಾರ್ಥೌ ಸಹಿತೌ ಕಾವ್ಯ' ಎಂಬ ಹೇಳಿಕೆಯ ವಿಶಾಲತೆಯ ದೋಷವನ್ನು ಗಮನಿಸಿದ ಮಾರ್ಗಕಾರ ಅದಕ್ಕಿಂತ ಭಿನ್ನವಾಗಿ ಸರ್ವಮಾನ್ಯ ಹಾಗೂ ಸರ್ವಕಾಲೀನವಾದ ಕಾವ್ಯ ಲಕ್ಷಣವನ್ನು ಕೊಟ್ಟಿರುವುದು ಕಂಡು ಬರುತ್ತದೆ. ಹಾಗಾಗಿಯೆ ಮಾರ್ಗಕಾರ ದಂಡಿ ಬಾಮಹರನ್ನು ಇಂಥ ಸಂದರ್ಭಗಳಲ್ಲಿ ಮೀರಿ ನಿಲ್ಲುತ್ತಾನೆ ಎನಿಸುತ್ತದೆ. ಕನ್ನಡನಾಡಿನ ಜನರ ಕಾವ್ಯ ಪ್ರಯೋಗದ ಪರಿಣಿತಿಯನ್ನು ಕುರಿತು ಹೀಗೆ ಹೇಳುತ್ತಾನೆ -

ಪದನರಿದು ನುಡಿಯಲುಂ ನುಡಿ
ದುದನರಿದಾರಯಲುಮಾರ್ಪರಾ ನಾಡಾವರ್ಗಳ್
ಚದುರರ್ ನಿಜದಿಂ ಕುರಿತೋ
ದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್

ಎನ್ನುವ ಕಡೆ ಮಾರ್ಗಕಾರನಿಗಿರುವ ಕನ್ನಡ ಜನ, ಭಾಷೆ, ಸಂಸ್ಕೃತಿಯ ಮೇಲಿನ ಅಪಾರ ಅಭಿಮಾನ ವ್ಯಕ್ತವಾಗುತ್ತದೆ. ಕವಿರಾಜಮಾರ್ಗಕಾರ ತನ್ನ ಪ್ರತಿಭಾ ಶಕ್ತಿಯಿಂದ ಹಿಂದಿನವರ ಅನೇಕ ಗ್ರಂಥಗಳನ್ನು ವಿವೇಚಿಸಿ, ಮುಂದೆ ಬಂದ ಕನ್ನಡ ಕವಿಗಳಿಗೆ ರಾಜಮಾರ್ಗವನ್ನು ಹಾಕಿಕೊಟ್ಟಿದ್ದಾನೆ. 'ಕನ್ನಡಕ್ಕೆ ನಾಡವರ್ ಒವಜರ್' ಎಂದು ಹೇಳುತ್ತದೆ. ಸಂಸ್ಕೃತಿಯ ಸದ್ಗುಣಗಳನ್ನು ಸಮರ್ಪಕವಾಗಿ ಸಾರಾಂಶಗೊಳಿಸಿದಂತೆ ಹೇಳುವ ಈ ಪದ್ಯ ಅದ್ಭುತವಾದದ್ದು.

ಸುಭಟರ್ಕಳ್ ಕವಿಗಳ್ ಸು
ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್ ।
ಅಭಿಮಾನಿಗಳತ್ಯುಗ್ರರ್
ಗಂಭೀರ ಚಿತ್ತರ್ ವಿವೇಕಿಗಳ್ ನಾಡವರ್ಗಳ್ ॥

ಈ ಇಂತಹ ಮಾತುಗಳಿಂದಲೇ ಕವಿರಾಜಮಾರ್ಗ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ ಎನ್ನಬಹುದು.

ದಂಡಿ ಹಾಗೂ ಬಾಮಹ ರ 'ಗ್ರಂಥ'ದಿಂದ ಅನುವಾದಗೊಂಡಿದ್ದರೂ ಕೃತಿಯ ಸ್ವಾತಂತ್ರ್ಯಕ್ಕೆ ತೊಂದರೆ ಇಲ್ಲ. ಇರುವ ನಾಲ್ಕು ಪರಿಚ್ಛೇದದಲ್ಲಿ ಒಂದು ಮತ್ತು ಎರಡನೆ ಪರಿಚ್ಛೇದಗಳ ಸುಮಾರು ಪದ್ಯಗಳು ಮೂಲಕ್ಕಿಂತ ಭಿನ್ನವಾಗಿವೆ. ಹಾಗೆಯೇ ಮೂರನೇ ಪರಿಚ್ಛೇದದಲ್ಲಿ ಹೆಚ್ಚಾಗಿ ಕಾವ್ಯಾದರ್ಶದ ಅನುಸರಣೆ ಕಂಡು ಬರುತ್ತದೆ. ಸಾಹಿತ್ಯದ ಸ್ವರೂಪ, ಪ್ರಯೋಜನ, ತಾರತಮ್ಯ, ಸಾಹಿತ್ಯಕಾರನ ಸಾಧನೆ, ಶೈಲಿ ಮುಂತಾದ ಅಂಶಗಳನ್ನು ಕುರಿತು ಉತ್ಕೃಷ್ಠ ಮಾಹಿತಿಯನ್ನು ನೀಡಿದ್ದಾನೆ. ಬಹುಶಃ ಇವುಗಳಿಂದಲೇ ಗ್ರಂಥಕ್ಕೆ ಹೆಚ್ಚು ಬಂಧ ಮತ್ತು ಬೆಲೆ ಲಭ್ಯವಾಗಿರುವುದು ಎಂದರೆ ತಪ್ಪಾಗಲಾರದು. ಈ ಕಾರಣಗಳಿಂದಲೇ ಗ್ರಂಥಕಾರನಿಗೆ ಹಿರಿಯ ವಿಮರ್ಶಕನ ಪಟ್ಟ ಲಭ್ಯವಾಗಿದೆ. ಒಂದು ವೇಳೆ ಈ ಕೃತಿಯಲ್ಲಿ ಅಲಂಕಾರಶಾಸ್ತ್ರಕ್ಕೆ ಸಂಬಂಧಿಸಿದ ಭಾಗವಷ್ಟೇ ಇದ್ದಿದ್ದರೆ ಇಷ್ಟೊಂದು ಹೊಗಳಿಕೆಗೆ ಅವಕಾಶವಿರಲಿಲ್ಲ. ಉದಾ. ಪಸರಿಸಿದಾ ಬಗೆ ಮನದೊಳ್‌ಪೂಸತಾಗೆ ನೆಗಳ್ಚಿಲರಿಯನ್ ರಚನೆಯೊಳೇಂ ಬಸವಂ' ಎಂದು ಹೇಳುತ್ತಾ 'ಕಾವ್ಯಭಾವವು ಹೊಸತಾದ ರೂಪ ತಾಳುವ ಹಾಗೆ ಕೃತಿ ರಚಿಸಿದರೆ ಮಾತ್ರ ಕಾವ್ಯ' ಎನ್ನುವ ಅರ್ಥವನ್ನು ಧ್ವನಿಸುವ ಹಾಗೆ ಹೇಳುತ್ತಾನೆ.

ಶೈಲಿಯಲ್ಲಿ ಕನ್ನಡ ಸಂಸ್ಕೃತಗಳ ಮಿಶ್ರಣವು ಹೇಗಿರಬೇಕು ಎಂಬ ವಿಚಾರದಲ್ಲಿ ಸರ್ವಕಾಲಿಕ ಒಪ್ಪಿಗೆಯ ದೃಷ್ಟಿ ವ್ಯಕ್ತವಾಗುತ್ತದೆ. ಸತ್ಯದ ವಲಂ ಪಾಗದಮುಮದಕ್ಕುಂ ...... ಎಂದು ಹೇಳುತ್ತಾನೆ. ಕಾವ್ಯದಲ್ಲಿ ಉತ್ತಮ ಕನ್ನಡ ಶೈಲಿಯ ಆದರ್ಶ ಹೇಗಿರಬೇಕೆಂಬುದನ್ನು ಸ್ಪಷ್ಟವಾಗಿ ವಿವರಿಸುವ ಅನೇಕ ಪದ್ಯಗಳು ಇವೆ.

ಉದಾ.
ನುಡಿಗಳೊಡಂಬಡಲ್ ಬಗೆದೆವೋಲ್ ಬಗೆಯುಂ
ಮಿಗಲೀಯದೊಂದೆನಾ
ಣ್ಬುಡಿಯ ಬೆಡರಗೆ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್
ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಲುವೆತ್ತು ದಾಂ
ಗುಡಿವಿಡಿಪಂತೆ ನೀಳ್ಪನಿತು ಪೇಳ್ವೆದು ನೀತಿನಿರಂತರಕ್ರಮಂ ॥

ಎನ್ನುವ ಪದ್ಯ ಅತ್ಯಂತ ಸುಂದರ ಶೈಲಿಯ ವಿವರಣೆ ನೀಡುತ್ತದೆ. ಅಷ್ಟೇ

ಅಲ್ಲದೆ ದಂಡಿಯಲ್ಲಿ ಎಂಟು ರಸಗಳು ಪ್ರಸ್ತಾಪವಿದ್ದರೆ ಕನ್ನಡ ಕವಿಗಳೂ, ಲಾಕ್ಷಣಿಕರೂ ಕವಿರಾಜಮಾರ್ಗದ ಕಾಲದಿಂದಲೂ ಕಾವ್ಯದಲ್ಲಿ ನವರಸಗಳ ಉಲ್ಲೇಖ ಕಂಡು ಬರುತ್ತದೆ. 'ಧ್ವನಿಯೆಂಬುದಳಂಕಾರಂ' ........ ಎಂಬುದು ಸ್ವತಂತ್ರ ಪದ್ಯವಾಗಿದೆ. ಕವಿರಾಜಮಾರ್ಗ ಪ್ರಮುಖವಾಗಿ ಅಲಂಕಾರ ಗ್ರಂಥ. ಶಾಸ್ತ್ರ ಕೃತಿಯಾದರೂ ಸ್ವತಂತ್ರ ಭಾಗಗಳು, ಕವಿತ್ವದ ಅಂಶಗಳೂ ಅದರಲ್ಲಿ ಯಥೇಚ್ಛವಾಗಿ ಕಾಣುತ್ತವೆ. ಹಾಗಾಗಿಯೇ ಕನ್ನಡದ ಮೊದಲ ಗ್ರಂಥ ಎನ್ನುವುದರ ಜೊತೆಗೆ ಅದ್ಭುತ ಸಾಹಿತ್ಯ ಗ್ರಂಥ ಎಂದರೂ ತಪ್ಪಾಗಲಾರದು.

**ಪಂಪ**

ಕನ್ನಡದ ಆದಿ ಮತ್ತು ಅಗ್ರ ಕವಿ. ಇವನಿಗಿಂತ ಹಿಂದೆ ಅನೇಕ ಕನ್ನಡ ಕಾವ್ಯಗಳು ರಚನೆಯಾಗಿರುವುದಕ್ಕೆ ಉದಾಹರಣೆಯಿದೆ. ನಮಗೆ ಸಿಕ್ಕಿರುವ ಕನ್ನಡದ ಮೊದಲನೆಯ ಕಾವ್ಯ ಪಂಪನದು. ಆದ್ದರಿಂದ ಪಂಪ ಆದಿ ಮತ್ತು ಅಗ್ರ ಕವಿ.

ಕಾವ್ಯಗಳಲ್ಲಿ ಸ್ವಂತ ವಿಷಯವನ್ನು ಸಾಕಷ್ಟು ಹೇಳಿಕೊಂಡಿದ್ದಾನೆ. ಇವನಿಗೆ ಸಂಬಂಧಿಸಿದ ಶಿಲಾಶಾಸನ ಆಂಧ್ರದ 'ಗಂಗಾಧರಂ' ನಲ್ಲಿ ದೊರೆತಿದೆ. ಇವನ ಪೂರ್ವಿಕರು ವೆಂಗಿಮಂಡಲ ಪ್ರಾಂತ್ಯದ ವೆಂಗಿಪಳುವಿನವರು. ವೆಂಗಿಮಂಡಲ ಕೃಷ್ಣ ಗೋದಾವರಿ ನದಿಗಳ ನಡುವಿನ ವಿಸ್ತಾರವಾದ ನಾಡು. ಮಾಧವ ಸೋಮಯಾಜಿಯ ಮಗ ಅಭಿಮಾನ ಚಂದ್ರ ಇವನಿಗೆ ಮೇಮುಲವಾಡದ ಚಾಲುಕ್ಯರ ಆಶ್ರಯ ದೊರೆಯಿತು. ನಿಡುಗೊಂಡೆಯಲ್ಲಿ ನೆಲೆಸಿದ ಇವನ ಮಗ ಕೊಮರಯ್ಯ ಇವನ ಮಗನೇ ಭೀಮಪ್ಪಯ್ಯ. ಪಂಪನ ತಂದೆ. ಇವನಿಗೆ ಬೆಳೊಲ ನಾಡಿನ ಜೋಯಿಸ ಸಿಂಗನ ಜೋಯಿಸನ ಮೊಮ್ಮಗಳಾದ ಅಬ್ಬಣಬ್ಬೆಯೊಡನೆ ಮದುವೆಯಾಯಿತು. ಇವರ ಮಕ್ಕಳು ಪಂಪ ಮತ್ತು ಜಿನವಲ್ಲಭ. ಇವನ ತಂದೆ ವೈದಿಕ ಧರ್ಮವನ್ನು ಬಿಟ್ಟು ಜೈನಧರ್ಮವನ್ನು ಸ್ವೀಕರಿಸಿದ. ಪಂಪನೂ ತಂದೆಯ ಧರ್ಮದಲ್ಲಿಯೇ ನಡೆದನು.

ಪಂಪ 'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪಭಾರತ' ಕೃತಿಗಳನ್ನು ಬರೆದಿದ್ದಾನೆ. 'ಆದಿಪುರಾಣ' ಮೊದಲ ಕಾವ್ಯವಾದುದರಿಂದ ಸ್ವಂತ ವಿಷಯಗಳನ್ನು ಹೇಳಿಕೊಂಡಿದ್ದಾನೆ. ಇದರ ಪ್ರಕಾರ ಪಂಪನು ಹುಟ್ಟಿದುದು ದುಂದುಭಿ ಸಂವತ್ಸರದಲ್ಲಿ ಕ್ರಿ.ಶ. 902.

> ''ಕದಲೀ ಗರ್ಭಶ್ಯಾಮಂ
> ಮೃದು ಕುಟಿಲ ಶಿರೋರುಹಂ ಸರೋರುಹವದನಂ
> ಮೃದು ಮಧ್ಯಮ ತನು ಹಿತಮಿತ
> ಮೃದು ವಚನಂ ಲಲಿತ ಯಧುರ ಸುಂದರ ವೇಷಂ''
>
> (ಆದಿ ಪುರಾಣ 1-29)

ಇದರಂತೆ ದೇಹವು 'ಕದಲೀಗರ್ಭ' ಎಂದರೆ ಬಾಳೆಯ ದಿಂಡಿನಂತೆ ಎಣ್ಣೆಗೆಂಪು ಬಣ್ಣತಲೆಕೂದಲು. ಮೃದು ಹಾಗೂ ಗುಂಗುರಾಗಿ, ಮುಖ ಕಮಲದಂತೆ ಸುಂದರವಾಗಿ, ದಪ್ಪವೂ ಅಲ್ಲದ ತೆಳುವೂ ಅಲ್ಲದ ದೇಹ, ಹಿತಮಿತ, ಮೃದು ಮಾತು ಎಂದು ವಿವರಿಸಿಕೊಳ್ಳುತ್ತಾನೆ. ಇವನ ಗುರು ದೇವೇಂದ್ರ ಮುನಿ. ಜಯನಂದಿ ಎನ್ನುವ ಮತ್ತೊಬ್ಬ ಗುರುವಿದ್ದನೆಂದು ತಿಳಿಯುತ್ತದೆ.

ಪಂಪನು ಕವಿ ಹಾಗೂ ಕಲಿ. ಆಗ ವೇಮುಲವಾಡದಲ್ಲಿ ರಾಜನಾಗಿದ್ದವನು ಚಾಲುಕ್ಯ ಇಮ್ಮಡಿ ಅರಿಕೇಸರಿ. ರಾಷ್ಟ್ರಕೂಟರ ಸಾಮಂತ. ಪಂಪನನ್ನು ಆಸ್ಥಾನ ಕವಿಯಾಗಿ ಮಾಡಿಕೊಂಡನು. ಇಬ್ಬರೂ ಸ್ನೇಹಿತರಾದರು ರಾಜ ಮತ್ತು ಆಶ್ರಯ ಎನ್ನುವ ಬೇಧ ಭಾವಗಳು ಅಲ್ಲಿರಲಿಲ್ಲ. ಆ ಕಾರಣದಿಂದ 'ವಿಕ್ರಮಾರ್ಜುನ ವಿಜಯ'ದಲ್ಲಿ ಅರಿಕೇಸರಿಯನ್ನು ಮಹಾಭಾರತದ ಅರ್ಜುನನಿಗೆ ಹೋಲಿಸಿ ಆಶ್ರಯದಾತನನ್ನು ಹೊಗಳುತ್ತಾನೆ.

'ಆದಿಪುರಾಣ'ವನ್ನು ಕ್ರಿ.ಶ. 942ನೇ ಇಸವಿ ಅಕ್ಟೋಬರ್ 16ನೇ ತಾರೀಖಿಗೆ ಸರಿಹೊಂದುವ ಶಕವರ್ಷ 863ನೇ ಪ್ಲವ ಸಂವತ್ಸರದ ಕಾರ್ತೀಕ ಶುಕ್ಲಪಕ್ಷದ ಪಂಚಮಿ ಭಾನುವಾರದಂದು ಬರೆದು ಮುಗಿಸಿದಂತೆ ಹೇಳಿದ್ದಾನೆ. 'ಆದಿಪುರಾಣ'ವನ್ನು ಮೂರು ತಿಂಗಳಲ್ಲಿ 'ವಿಕ್ರಮಾರ್ಜುನ ವಿಜಯ'ವನ್ನು ಆರು ತಿಂಗಳಲ್ಲಿ ಬರೆದನಂತೆ. ಇದಕ್ಕಾಗಿ 'ಧರ್ಮಪುರ'ವನ್ನು ಬಳುವಳಿಯಾಗಿ ಪಡೆಯುತ್ತಾನೆ. ಅರಿಕೇಸರಿಗೆ ಗುಣಾರ್ಣನನೆಂಬ ಬಿರುದಿತ್ತು. ಆದ್ದರಿಂದ ಪಂಪನಿಗೆ ಕವಿತಾ ಗುಣಾರ್ಣವ ಬಿರುದನ್ನು ಕೊಟ್ಟನು.

'ಆದಿಪುರಾಣ' ಮೊದಲ ತೀರ್ಥಂಕರನಾದ ಪುರುದೇವನ ಚರಿತ್ರೆ. ಇದಕ್ಕೆ ಆಕರ ಜಿನಸೇನಾಚಾರ್ಯರ 'ಪೂರ್ವಪುರಾಣ'. ಮುಂದಿನ ಭಾಗವನ್ನು ಶಿಷ್ಯರಾದ ಗುಣಭದ್ರಾಚಾರ್ಯರು ಬರೆದರು. ಎರಡೂ ಸೇರಿ 'ಮಹಾಪುರಾಣ' ಎನ್ನಿಸಿಕೊಳ್ಳುತ್ತದೆ. ಜೈನರಿಗೆ ಪೂಜ್ಯರಾದ ತ್ರಿಷಷ್ಠಿಶಲಾಕಾಪುರುಷರ ಚರಿತ್ರೆಯನ್ನು ಒಳಗೊಂಡಿದೆ. 24 ಜನ ತೀರ್ಥಂಕರರು, 12 ಜನ ಚಕ್ರವರ್ತಿಗಳು, 9 ಜನ ಬಲದೇವರು, 9 ಜನ ವಾಸುದೇವರು, 9 ಜನ ಪ್ರತಿವಾಸುದೇವರುಗಳು ಸಂಸಾರದಲ್ಲಿ ಸಿಲುಕಿಕೊಂಡ ಜೀವವು 'ಸಮ್ಯಕ್ ಜ್ಞಾನ' 'ಸಮ್ಯಕ್ ಚಾರಿತ್ರ್ಯ', 'ಸಮ್ಯಕ್ ದರ್ಶನ' ಎಂಬ ರತ್ನತ್ರಯವನ್ನಾಶ್ರಯಿಸಿ ಸಂಸಾರವನ್ನು ದಾಟಿ ಮುಕ್ತಿ ಪಡೆಯುವುದು ತೀರ್ಥಂಕರರ ಜೀವನ ಚರಿತ್ರೆ. ಜೀವನ ವಿಕಾಸದ ಕೊನೆಯ ಮೆಟ್ಟಿಲು ತೀರ್ಥಂಕರತ್ವ.

ತೀರ್ಥಂಕರನಾಗುವ ಜೀವವು ಹಿಂದಿನ ಜನ್ಮಗಳಲ್ಲಿ ಪಾಪವನ್ನು ಕಡಿಮೆ ಮಾಡಿಕೊಳ್ಳುವುದನ್ನು ನಿರೂಪಿಸುವುದೇ ಭವಾವಳಿ. ಇವರ ಜೀವನವು

ಪುರಾಣಗಳಲ್ಲಿ ಐದು ಹಂತಗಳಲ್ಲಿ ವರ್ಣಿತವಾಗಿರುತ್ತದೆ. ಗರ್ಭಾವತರಣ ಕಲ್ಯಾಣ (ತಾಯಿಯ ಗರ್ಭ ಪ್ರವೇಶ), ಜನ್ಮಾಭಿಷೇಕ ಕಲ್ಯಾಣ (ಹುಟ್ಟುವುದು), ಪರಿನಿಷ್ಕ್ರಮಣ ಕಲ್ಯಾಣ (ವೈರಾಗ್ಯ), ಕೇವಲ ಜ್ಞಾನ ಕಲ್ಯಾಣ (ಶ್ರೇಷ್ಠ ಜ್ಞಾನ ಸಂಪಾದನೆ), ಪರಿನಿರ್ವಾಣ ಕಲ್ಯಾಣ (ಮೋಕ್ಷ ಪಡೆಯುವುದು).

ತೀರ್ಥಂಕರನ ಚರಿತ್ರೆಯ ಜೊತೆಯಲ್ಲಿ ಚಕ್ರವರ್ತಿಯ ಕತೆಯನ್ನು ಹೇಳುವುದು ರೂಢಿ. ಚಕ್ರರತ್ನವನ್ನು ಪಡೆದ ಚಕ್ರವರ್ತಿ ಭೂಮಂಡಲವನ್ನೆಲ್ಲ ಗೆದ್ದು, ಅಪಾರ ಸಂಪತ್ತು, ಕನ್ಯಾರತ್ನಗಳನ್ನು ಪಡೆದು ರಾಜಧಾನಿಗೆ ಹಿಂದಿರುಗುತ್ತಾನೆ. ಅಲ್ಲಿ ಚಕ್ರರತ್ನವನ್ನು ಪೂಜಿಸಿ ಜಿನಮಹಿಮೆಯನ್ನು ಹಾಡಿ ದೇವತೆಗಳು ಚಕ್ರವರ್ತಿಗೆ ಪಟ್ಟ ಕಟ್ಟುತ್ತಾರೆ. ಇದು ಜೈನ ಪುರಾಣಗಳ ಪರಂಪರೆ.

ಆದಿಪುರಾಣ 16 ಆಶ್ವಾಸಗಳುಳ್ಳ ಪುರಾಣ ಕಾವ್ಯ. ಆರು ಆಶ್ವಾಸಗಳಲ್ಲಿ ಹಿಂದಿನ ಒಂಬತ್ತು ಜನ್ಮಗಳ ಕತೆಯಿದೆ. ಏಳರಿಂದ ಹತ್ತನೇ ಆಶ್ವಾಸದವರೆಗೆ ಪುರುದೇವನ ಜೀವನ, ಬಾಲ್ಯ, ವಿದ್ಯಾಭ್ಯಾಸ, ವಿವಾಹ, ರಾಜ್ಯಭಾರ, ವೈರಾಗ್ಯ, ತಪಸ್ಸು, ಕೇವಲ ಜ್ಞಾನ, ಸಮವಸರಣ ಇವುಗಳ ವರ್ಣನೆಯಿದೆ. ಹನ್ನೊಂದರಿಂದ ಹದಿನಾರನೆಯ ಆಶ್ವಾಸದವರೆಗೆ ಭರತ ಚಕ್ರವರ್ತಿಯ ಕತೆಯು ನಿರೂಪಿತವಾಗಿದೆ. ಪುರುದೇವನ ಒಂಬತ್ತು ಜನ್ಮಗಳನ್ನು ಪಂಪ ಹೀಗೆ ಪಟ್ಟಿ ಮಾಡುತ್ತಾನೆ. ಜಯವರ್ಮ, ಮಹಾಬಲ ಲಲಿತಾಂಗ, ವಜ್ರಜಂಪ, ಆರ್ಯ ಶ್ರೀಧರದೇವ, ಸುವಿಧಿ, ಅಚ್ಯುತೇಂದ್ರ, ವಜ್ರನಾಭಿ ಅಹಮಿಂದ್ರ, ವಜ್ರಜಂಘನ ವರೆಗೆ ಭೋಗದ ಕತೆಯಿದ್ದರೆ, ನಂತರ ಭೋಗ ಕಡಿಮೆಯಾಗಿ ವೈರಾಗ್ಯದ ತುತ್ತ ತುದಿಯೇರುವ ಕತೆಯನ್ನು ಸುಲಲಿತವಾಗಿ ನಿರೂಪಿಸಿದ್ದಾನೆ.

ಲಲಿತಾಂಗ ಸ್ವಯಂಪ್ರಭೆಯರು ಪ್ರೇಮಿಗಳಾಗಿ ಸಂಪೂರ್ಣ ಭೋಗವನ್ನನುಭವಿಸದರೆ ಮುಂದಿನ ಜನ್ಮದಲ್ಲಿ ವಜ್ರಜಂಘ ಶ್ರೀಮತಿಯರಾಗಿ ಹುಟ್ಟುತ್ತಾರೆ. ಹಿಂದಿನ ಜನ್ಮದ ಪ್ರೇಮವನ್ನು ನೆನಪಿಸಿಕೊಂಡು ವ್ಯಥೆಪಡುತ್ತಾ ಒಬ್ಬರನ್ನೊಬ್ಬರು ಹುಡುಕುತ್ತಾರೆ. ಶ್ರೀಮತಿಯ ದಾದಿಯ ಪಟವನ್ನು ನೋಡಿ ವಜ್ರಜಂಘ ಶ್ರೀಮತಿಯನ್ನು ವಿವರಿಸುವುದು ಶ್ರೀಮತಿಯ ತಂದೆ ತಾಯಿಗಳು ಮದುವೆಯ ನಂತರ ಅವಳನ್ನು ಗಂಡನ ಮನೆಗೆ ಕಳಿಸುವ ಚಿತ್ರಣ ಶಾಕುಂತಲದಲ್ಲಿ ಕಣ್ವರು ದುಷ್ಯಂತನ ಮನೆಗೆ ಶಕುಂತಲೆಯನ್ನು ಕಳಿಸುವ ಚಿತ್ರಣದಂತಿದೆ. ಮುಂದಿನ ಸನ್ನಿವೇಶವನ್ನು ಪಂಪ ಮನಸಾರೆ ವರ್ಣಿಸುತ್ತಾನೆ. ಕರುಣ ರಸದ ಹೊನಲನ್ನೇ ಹರಿಸುತ್ತಾನೆ.

''ಪಡಮಡುವಪ್ಪಿಕೊಳ್ವ, ನೆನೆಯುತ್ತಿರಿಮೆಂಬ, ಸಮಸ್ತವಸ್ತುವಂ
ಕುಡುವ, ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ದಿವೇಪ್ವ ಕೈ
ಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣಣೀರ್ಗಳಂ
ಮಿಡಿವ ಬಹುಪ್ರಕಾರ ಜನ ಸಂಕಟಮೊಪ್ಪಿದುದಾ ಪ್ರಯಾಣದೊಳ್
(ಆಪು 4-75)

(ಹಿರಿಯರಿಗೆ ಕಿರಿಯರು ನಮಸ್ಕರಿಸಿದರೆ, ಮೇಲೆತ್ತಿ, ಅಪ್ಪಿಕೊಂಡು ಮರೆಯಬೇಡಿ ಎನ್ನುವ ತಂದೆ ತಾಯಿ, ಹಿರಿಯರು ಬುದ್ಧಿ ಹೇಳುವ ಇವಳು ನಿಮ್ಮ ವಸ್ತು ಒಪ್ಪಿಸಿದ್ದೇವೆನ್ನುವ ಪ್ರೀತಿಪಾತ್ರರ ಅಗಲಿಕೆಯಿಂದ ದುಃಖಿಸುವ ಚಿತ್ರಣ ಇಲ್ಲಿದೆ).

ವಜ್ರಜಂಘ ಶ್ರೀಮತಿಯರ ಸಾವಿನ ಚಿತ್ರಣವನ್ನು ಪಂಪ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಅವರಿಬ್ಬರೂ ಒಂದು ರಾತ್ರಿ ಏಕಾಂತದಲ್ಲಿ ಮಲಗಿರುವಾಗ ಆ ಕೋಣೆಯ ಗವಾಕ್ಷಿಯನ್ನು ತೆರೆಯಲು ಮರೆಯುತ್ತಾರೆ. ನಿದ್ದೆ ಹೋದಾಗ ಕಾಳಾಗರು ಧೂಪವು ಕೋಣೆಯನ್ನೆಲ್ಲಾ ತುಂಬಿಕೊಂಡು ಉಸಿರಾಡುವುದಕ್ಕೆ ಆಸ್ಪದವಿಲ್ಲದೆ ಸಾಯುತ್ತಾರೆ. ಕಾಳಾಗರು ಧೂಪಂ ...... ಕೊಂದುದು ಕೃಷ್ಣೋರಗಂ ಕೊಲ್ವವೋಲ್! ಕಪ್ಪಾದ ಅಗರಿನ ಹೊಗೆಯು ಕೃಷ್ಣೋಸರ್ಪದ ಹಾಗೆ ಕೊಂದಿತು ಎನ್ನುತ್ತಾನೆ. ಅನ್ಯೋನ್ಯವಾಗಿ ಜೀವಿಸಿ ಅನ್ಯೋನ್ಯವಾಗಿಯೇ ಸತ್ತರು. ಬೆಳಿಗ್ಗೆ ಜನ ಶವವನ್ನು ನೋಡಿದಾಗ ಅವರ ಅಪ್ಪುಗೆ ಹೇಗಿತ್ತು ಎನ್ನುವುದನ್ನು

''ಬಿಡದೆ ಪೊಗೆ ಸುತ್ತೆತೋಳಂ
ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನ್ ಆಂ
ದೊಡಗಳೆದರ್ ಓಪರೋಪರೊ
ಳೊಡಸಾಯಲ್ ಪಡೆದರ್ ಇನ್ನೀವೇಂ ಸಯ್ಪೊಳವೇ (ಆ.ಪು. 5-20)

ಎಂದು ಸುಂದರವಾಗಿ ವರ್ಣಿಸುತ್ತಾನೆ. ಆದಿಪುರಾಣದ ಸುಂದರವಾದ ಇನ್ನೊಂದು ಭಾಗ ನೀಲಾಂಜನೆಯು ನೃತ್ಯ, ಆದಿದೇವನ ಪರಿನಿಷ್ಕ್ರಮಣ. ಪುರುದೇವನು ಸಭೆಯಲ್ಲಿದ್ದಾಗ ಅವನನ್ನು ಸಂತೋಷಪಡಿಸಲು ಇಂದ್ರ ನೃತ್ಯ ಕಾರ್ಯಕ್ರಮವನ್ನು ಏರ್ಪಡಿಸುತ್ತಾನೆ. 'ನೀಲಾಂಜನೆ' ನಾಟ್ಯರಂಗಕ್ಕೆ ಬರುತ್ತಾಳೆ. ಅವಳು ಬಂದ ರೀತಿಯನ್ನು ನೋಡಿದಾಗ ಗೀತವಾದ್ಯ ನೃತ್ಯಗಳು ಇವಳಿಗಲ್ಲದೆ ಮತ್ತೊಬ್ಬರಿಗಲ್ಲ ಎನ್ನುವಂತಿರುತ್ತಾನೆ.

''ಎನಿಸಿದ ನೀಳಾಂಜನೆ ಕ
ರ್ಬಿನ ಬಿಲ್ಲಂ ಮಸೆದ ಮದನನಲರ್ಗಣೆ ಬರ್ದುಕಿ
ತ್ತೆನಿಸುತ್ತೊಳಪೊಕ್ಕಳ್ ಭೊಂ
ಕನೆ ನಿಖಿಳಜನಾಂತರಂಗಮಂ ರಂಗಮಂದಂ (ಆ.ಪು. 9-19)

ಕಬ್ಬಿನ ಬಿಲ್ಲಿಗೆ ಬಾಣವು ಸೇರಿ ಜೀವಂತ ಮೂರ್ತಿಯಾದಂತೆ ನೀಲಾಂಜನೆ ನೃತ್ಯ ನೋಡುವವರ ಅಂತರಂಗವನ್ನು ಪ್ರವೇಶಿಸಿದಳು. ತಾಳದ ಲಯಕ್ಕೆ ಸೀರೆಯ ನಿರಿ, ಕಪ್ಪು ಕೂದಲು, ಹಾರದ ಮುತ್ತುಗಳು ಮೂರೂ ಸೇರಿ ಕುಣಿದವು. ಅವಳು ನರ್ತಿಸುವ ರೀತಿಯು ಮನ್ಮಥನೆಂಬ ಮದ್ದಾನೆಯು ಜನರನ್ನು ಹಿಡಿದು ಈಡಾಡಿದ ಹಾಗೆ ಅಲುಗಾಡಿತು ಎನ್ನುತ್ತಾನೆ ಪಂಪ.

ಆದರೆ ಆ ನಾಟ್ಯ ದೀರ್ಘಕಾಲ ಮುಂದುವರೆಯಲಿಲ್ಲ. ರಂಗದಿಂದ ಮರೆಯಾಗುವ ಮೊದಲೇ ಅವಳ ಆಯಸ್ಸು ತೀರಿದ್ದರಿಂದ ರಂಗ ಮಧ್ಯದಲ್ಲಿ ಸಾವನ್ನಪ್ಪುತ್ತಾಳೆ. ರಸಕ್ಕೆ ಭಂಗಬಾರದೆಂದು ನಿರ್ಧರಿಸಿದ ಇಂದ್ರ ಅದೇ ರೂಪದ ಮತ್ತೊಬ್ಬಳನ್ನು ಸೃಷ್ಟಿಸಿ ನಾಟ್ಯ ಮುಂದುವರಿಸುತ್ತಾನೆ. ಸಭೆಯಲ್ಲಿದ್ದವರಾರಿಗೂ ವಿಷಯ ಗೊತ್ತಾಗುವುದಿಲ್ಲ. ಆದರೆ ಆದಿದೇವನಿಗೆ ಮಾತ್ರ ತಿಳಿಯುತ್ತದೆ. ಈ ದೇಹ ಎಷ್ಟು ಕ್ಷಣಿಕ ಎಂಬುದರ ಜೊತೆಗೆ ಸಂಸಾರದ ಬಗೆಗೂ ವೈರಾಗ್ಯ ತೀವ್ರವಾಯಿತು. ದೇಹ ಸೌಂದರ್ಯ, ವೈಭವ, ಹಣ, ಸಂಪತ್ತು, ಆಯಸ್ಸು ಮಿಂಚಿನ ಹೊಳಹಿನಂತೆ ಕಾಮನಬಿಲ್ಲು, ನೀರಿನ ಗುಳ್ಳೆಗಳಷ್ಟೇ ಕ್ಷಣಿಕವಾದವುಗಳು. ಇದೇ ಆದಿನಾಥನ ವೈರಾಗ್ಯಕ್ಕೆ ಕಾರಣವಾಯಿತು.

ಆದಿನಾಥನ ಭವಾವಳಿಗಳಲ್ಲಿ ಕವಿಯು ಭೋಗದ ನಿಶ್ಫಲತೆಯನ್ನು ಚಿತ್ರಿಸಿದ್ದರೆ ಭರತ ಚಕ್ರವರ್ತಿಯ ಕತೆಯಲ್ಲಿ ವೈಭವದ ನಿಶ್ಫಲತೆಯನ್ನು ಚಿತ್ರಿಸಿದ್ದಾರೆ. ಆದಿನಾಥನ ಹಿರಿಯ ಮಗನಾದ ಭರತ ಚಕ್ರರತ್ನದ ಸಹಾಯದಿಂದ ಭೂಮಂಡಲವನ್ನೆಲ್ಲ ಗೆಲ್ಲುತ್ತಾನೆ. ವಿರೋಧಿಸಿದವರೆಲ್ಲರೂ ಸಾಮಂತರಾಗುತ್ತಾರೆ. ತನ್ನ ಗೆಲುವನ್ನು ಶಾಸನವಾಗಿಸಲು ಬಂಡೆಯಲ್ಲಿ ಜಾಗವೇ ಇಲ್ಲ. ಹಿಂದಿನ ರಾಜರುಗಳ ಪ್ರತಾಪದ ವರ್ಣನೆಯನ್ನು ನೋಡಿ ''ಸೋರ್ದುದು ಕೊಳಗೊಂಡ ಗರ್ವರಸಂ'' ಆದರೂ ಒಂದು ಬರಹವನ್ನು ಅಳಿಸಿ ತನ್ನ ಹಿರಿಮೆಯನ್ನು ಬರೆಸುತ್ತಾನೆ.

ಜಗತ್ತನ್ನೇ ಗೆದ್ದು ಬಂದ ಭರತನಿಗೆ ತನ್ನ ತಮ್ಮಂದಿರಾದ ಬಾಹುಬಲಿ ಮೊದಲಾದವರು ತಲೆಬಾಗಲಿಲ್ಲ. ಅವರನ್ನೆಲ್ಲ ತನ್ನ ಹಿಡಿತಕ್ಕೆ ತರಬೇಕೆಂಬುದು ಇವನ ಚಪಲ. ಇದರಿಂದ ಬಾಹುಬಲಿ ಮಿಕ್ಕ ಉಳಿದವರು ತಪಸ್ಸಿಗೆ ಹೋಗುತ್ತಾರೆ. ಆದಿಪುರಾಣದ ರಸಸಂಧಿ ಎಂದರೆ ಭರತ-ಬಾಹುಬಲಿಯರ ಯುದ್ಧ, ಬಾಹುಬಲಿ ತಪಸ್ಸಿಗೆ ತೆರಳುವುದು.

''ಪಿರಿಯಣ್ಣಂ ಗುರು ತಂದೆಯೆಂದೆರಗುವಂ ಮುನ್ನೆಲ್ಲಮಿಂತೀಗಳಾ
ಳರಸೆಂಬೊಂದು ವಿಭೇದಮಾದೊಡೆಯಕಂ ಚಿಃ ಕಷ್ಟಮತ್ತಿವಸುಂ
ಧರೊಯ್ಯಂ ದಯೆಗೆಯ್ಯೆ ಮುನ್ ಪಡೆದುದರ್ಕೆ
ಇಂತೀತನೊಳ್ ತೊಟ್ಟಕಿಂ
ಕರಭಾವಂ ನಮಗಕ್ಕಿಗೊಟ್ಟುಮಡಗೂಮಿಣ್ಬಂದಮಂ ಪೋಲದೇ''

(ಆ.ಪು. 13-32)

ಹಿರಿಯಣ್ಣಗುರು, ತಂದೆಗೆ ಸಮಾನ. ಅವನಿಗೆ ತಲೆಬಾಗುವುದು ನ್ಯಾಯ. ಆದರೆ ನಾನು ಅರಸ, ನೀವು ಆಳುಗಳೆಂದು ಭೇದ ಮಾಡುವುದಾದರೆ ನಮಸ್ಕರಿಸಲಾಗದು. ತಂದೆ ದಯೆಯಿಂದ ರಾಜ್ಯವನ್ನು ಕೊಟ್ಟಿದ್ದಾನೆ. ಆದರೂ ಅಣ್ಣನಿಗೆ ಸೇವಕರಂತಿರುವುದು ನಮ್ಮ ಮನೆಯ ಅಕ್ಕಿಯನ್ನು ಕೊಟ್ಟು ಎಂಜಲನ್ನು ತಿಂದಂತೆ ಎನ್ನುವುದು ಇಲ್ಲಿನ ಅರ್ಥ. ಹೀಗೆ ಆಲೋಚಿಸಿ ಉಳಿದವರು ತಪಸ್ಸಿಗೆ ಹೋದರೆ ಬಾಹುಬಲಿ ಭರತನ ದಿಗ್ವಿಜಯಗಳನ್ನು ಕೇಳಿ ಅಪಹಾಸ್ಯ ಮಾಡುತ್ತಾನೆ.

ಎರಡೂ ಕಡೆ ಹಠವೇ ಮೇಲುಗೈಯಾಗಿ ಯುದ್ಧ ಅನಿವಾರ್ಯವಾಗುತ್ತದೆ. ಆದರೆ ಉಭಯ ಪಕ್ಷದವರೂ ಭರತ-ಬಾಹುಬಲಿಗಳು ಚರಮ ದೇಹಧಾರಿಗಳಾದ್ದರಿಂದ ಅತಿ ಕ್ರೂರ ಕಾದಾಟವಾಗುತ್ತದೆ. ಅಪಾರ ಜನರ ಸಾವು ನೋವಾಗುತ್ತದೆ. ಆದ್ದರಿಂದ ಇಬ್ಬರಲ್ಲಿಯೇ ಧರ್ಮಯುದ್ಧವಾಗಲಿ ಎನ್ನುತ್ತಾರೆ. ಅಣ್ಣತಮ್ಮಂದಿರಿಗೆ ಮೂರು ರೀತಿಯ ಯುದ್ಧಗಳಾಗುತ್ತವೆ. ದೃಷ್ಠಿ ಯುದ್ಧ, ಜಲಯುದ್ಧ, ಮಲ್ಲಯುದ್ಧ. ಬಾಹುಬಲಿ ಎತ್ತರದ ವ್ಯಕ್ತಿ, ಭರತ ಕುಳ್ಳ. ಮೂರರಲ್ಲಿಯೂ ಬಾಹುಬಲಿಯೇ ಗೆಲ್ಲುತ್ತಾನೆ. ಆದರೆ ಭರತನಲ್ಲಿ ಅಪಮಾನ ಸೇಡಾಗಿ ಪರಿಣಮಿಸುತ್ತದೆ. ಚಕ್ರರತ್ನಕ್ಕೆ ಆಜ್ಞೆ ಮಾಡುತ್ತಾನೆ. ಆದರೆ ಚಕ್ರರತ್ನ ಬಾಹುಬಲಿಯನ್ನು ಬಲಿತೆಗೆದುಕೊಳ್ಳದೆ ಪಕ್ಕದಲ್ಲಿ ಪ್ರದಕ್ಷಿಣೆ ಹಾಕಿ ನಿಲ್ಲುತ್ತದೆ. ಜನರು ಭರತ ಇಂತಹ ಕೀಳುಮಟ್ಟಕ್ಕಿಳಿಯಬಾರದಿತ್ತೆಂದು ಆಡಿಕೊಳ್ಳುತ್ತಾರೆ. ಇದನ್ನು ಕೇಳಿದ ಭರತ ನಾಚುತ್ತಾನೆ. ರಾಜ್ಯ ವ್ಯಾಮೋಹದ ತೀವ್ರತೆಯನ್ನು ನಾವಿಲ್ಲಿ ಕಾಣುತ್ತೇವೆ.

''ಸೋದರರೊಳ್, ಸೋದರರಂ
ಕಾದಿಸುವುದು, ಸುತನ ತಂದೆಯೆಡೆಯೊಳ್ ಬಿಡ
ದುತ್ಪಾದಿಸುವುದು ಕೋಪಮನ್ ಅಳ
ವೀದೊರೆತೆನೆ ತೊಡರ್ವುದೆಂತು ರಾಜ್ಯಶ್ರೀಯೊಳ್''

(ಆ.ಪು. 14-122)

ರಾಜ್ಯ ಸಂಪತ್ತು ಸೋದರರಲ್ಲಿ ಸೋದರರನ್ನು, ಮಗನನ್ನು ತಂದೆಯ ಮೇಲೆ ಎತ್ತಿ ಕಟ್ಟುತ್ತದೆ. ಹೀಗಿರುವಾಗ ಇಂಥ ರಾಜ್ಯಶ್ರೀ ದೊರೆತಾಗ

ಒಪ್ಪಿಕೊಳ್ಳುವುದಾದರೂ ಹೇಗೆ ? ಬಾಹುಬಲಿ ನಶ್ವರವಾದ ರಾಜ್ಯವನ್ನು ಬಿಸುಟು ಶಾಶ್ವತವಾದ ಮೋಕ್ಷವನ್ನು ಸಂಪಾದಿಸುತ್ತೇನೆ ಎಂದು ನಿರ್ಧರಿಸುತ್ತಾನೆ. ತಲೆತಗ್ಗಿಸಿ ನಿಂತಿದ್ದ ಭರತನನ್ನು ಕುರಿತು ಹೀಗೆ ಹೇಳುತ್ತಾರೆ.

> ''ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳಮೀ ಭಟ ಖಡ್ಗ ಮಂಡಲೋ
> ತ್ಪಲವನ ವಿಭ್ರಮಧ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ
> ವಲಯಮನಯ್ಯನಿತ್ತುದುಮನಾಂ ನಿನಗಿತ್ತೆನ್ ಇದೇವುದಣ್ಣ ನೀ
> ನೊಲಿದ ಲತಾಂಗಿನಂ ಧರೆಗಮಾಟಿಸಿದಂದು ನೆಗಳ್ತೆ ಮಾಸದೇ''
>
> (ಆ.ಪು. 14-130)

ವೀರರ ಖಡ್ಗಗಳ ಸಮೂಹವೆಂಬ ಕನ್ನೈದಿಲೆಯ ವನಗಳಲ್ಲಿ ಚಂಚಲವಾದ ದುಂಬಿಯಂತೆ ವಿಹರಿಸುವ ಈ ಸುಂದರವಾದ ರಾಜ್ಯಲಕ್ಷ್ಮಿ ನಿನ್ನ ಎದೆಯಲ್ಲಿ ನಿಶ್ಚಲವಾಗಿ ನೆಲೆಸಲಿ. ನಮ್ಮ ತಂದೆಯಾದ ಆದಿನಾಥನು ಕೊಟ್ಟ ರಾಜ್ಯವನ್ನು ನಿನಗೊಪ್ಪಿಸುತ್ತಿದ್ದೇನೆ. ನೀನು ಪ್ರೀತಿಸಿದ ಹೆಣ್ಣಿಗೆ ಹಾಗೂ ರಾಜ್ಯಕ್ಕೆ ಆಸೆಪಟ್ಟರೆ ನನ್ನ ಕೀರ್ತಿಗೆ ಕಳಂಕವಲ್ಲವೆ ಎಂದು ಹೇಳಿ ರಾಜ್ಯವನ್ನು ಭರತನಿಗೆ ಕೊಡುತ್ತಾನೆ.

ಈ ಪ್ರಸಂಗ ಪಂಪನ ಪ್ರತಿಭೆಯ ಧ್ಯೋತಕ. ಇಬ್ಬರ ಪಾತ್ರವನ್ನು ಅತ್ಯಂತ ಅಚ್ಚುಕಟ್ಟಾಗಿ ನಿರ್ವಹಿಸಿದ್ದಾನೆ. ಮೂಲ ಆದಿಪುರಾಣದ ಲಕ್ಷಣಗಳನ್ನು ಅಲ್ಲಲ್ಲಿ ಉತ್ತಮ ಕಾವ್ಯ ಗುಣಗಳಿಂದ ಕೂಡಿದೆ. ಕಾವ್ಯಧರ್ಮವನ್ನು ಅರಿಯುವುದರಲ್ಲಿ ಸಫಲನಾಗಿದ್ದಾನೆ. ಆದಿಪುರಾಣ ರಚನೆಯು ಪಂಪನು ''ಕೈಕಟ್ಟಿಸಿಕೊಂಡು ಪಟ್ಟುಗಳನ್ನುತೋರಿಸುವ ಗರಡಿಯಾಳಿನಂತೆ ಕಾಣಿಸುತ್ತಾನೆ''. ಆದರೂ ಪಂಪ ಇಲ್ಲಿ ಜೈನ ಧರ್ಮದ ತಿರುಳನ್ನು ರಮ್ಯವಾಗಿ ನಿರೂಪಿಸಿದ್ದಾನೆ.

**ಪಂಪಭಾರತ**

ಪಂಪನಿಗಿಂತ ಮೊದಲೇ ಮಹಾಭಾರತದ ಕತೆಗಳು ರಚಿತವಾಗಿದ್ದಂತೆ ಕಂಡು ಬರುತ್ತದೆ. ಆದರೆ ಯಾವೊಂದು ಕೃತಿಗಳೂ ದೊರಕಿಲ್ಲ. ವ್ಯಾಸಭಾರತದ ಒಟ್ಟು ಕತೆಯ ಸ್ವರೂಪವನ್ನು ಹೇಳುವ ಕವಿತೆಗಳೂ ದೊರಕಿಲ್ಲ. ಅಂತಹ ಕೃತಿಯನ್ನು ಪಂಪನೇ ರಚಿಸಬೇಕೆಂದು ಪಂಡಿತರು ಹೇಳಿದ್ದರಿಂದ ಬರೆದೆ ಎನ್ನುತ್ತಾನೆ. 'ಹರಿವಂಶ' 'ನೇಮತೀರ್ಥಂಕರ' ಕತೆಯಲ್ಲಿ ಮಹಾಭಾರತದ ಕತೆಯಿದ್ದರೂ, ವ್ಯಾಸನನ್ನೇ ಅನುಸರಿಸುತ್ತಾನೆ. ಲೌಕಿಕಕಾವ್ಯ ಅರ್ಜುನನೊಡನೆ ಆಶ್ರಯದಾತನಾದ ಅರಿಕೇಸರಿಯನ್ನು ಸಮೀಕರಿಸುವುದು. ಆದ್ದರಿಂದ ಸಮಸ್ತ ಭಾರತ ಎಂದು ಕರೆದುಕೊಳ್ಳುತ್ತಾನೆ.

'ವ್ಯಾಸ ಮುನೀಂದ್ರ, ರುಂದ್ರ, ವಚನಾಮೃತವಾರ್ಧಿಯನೀಸುವೆಂ

ಕವಿವ್ಯಾಸನೆನ್ ಎಂಬ ಗರ್ವಮೆನಗಿಲ್ಲ' ಎಂದು ವಿನಯದಿಂದ ಹೇಳಿಕೊಳ್ಳುತ್ತಾನೆ. ತನ್ನ ಕಥಾ ಸರಣಿಯಲ್ಲಿ ಕೆಲವೊಂದು ವ್ಯತ್ಯಾಸಗಳನ್ನು ಮಾಡಿಕೊಳ್ಳುತ್ತಾನೆ.

★ ಕಥಾನಾಯಕ ಅರ್ಜುನ, ಪಟ್ಟಾಭಿಷೇಕ ಅರ್ಜುನ ಸುಭದ್ರೆಯರಿಗೆ.

★ ಅರ್ಜುನ ಸುಭದ್ರೆಯನ್ನು ಮದುವೆಯಾಗುವುದು ಅನುರಾಗದಿಂದ, ಕೃಷ್ಣನ ಸಹಾಯದಿಂದ.

★ ಕೃಷ್ಣ ಶಿಶುಪಾಲನನ್ನು ಕೊಲ್ಲುವುದು ಚಕ್ರದಿಂದಲ್ಲ, ತಟ್ಟೆಯಿಂದ.

★ ದುರ್ಯೋಧನ ವೈಶಂಪಾಯನ ಸರೋವರದಲ್ಲಿ ಅಡಗಿ ಕುಳಿತದ್ದು ಭಯದಿಂದಲ್ಲ, ಭೀಷ್ಮರ ಸಲಹೆಯಂತೆ, ಹೀಗೆ ಹಲವು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ.

''ಇದರೊಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ
ಪುದಿದಳ್ಕಾಡಿತ್ತು ಅಡಂಗಿದಯೊಳ್ ಕುರುರಾಜಾನ್ವಯಂ;
ಮತ್ ಪ್ರತಾಪ
ಕ್ಕಿದವೆಂದಂ ಮೋಡಗುರ್ವುರ್ವಿದುದು; ಇದುಬೆ
ಮಹಾಭಾರತಕ್ಕಾದಿಯಾಯ್ತು
ಬ್ಜದಳಾಕ್ಷ್ಮಿ ಪೇರಿ ಸಾಮಾನ್ಯಮೇ ಬಗೆಯೆ ಭವತ್ಕೇಶ ಪಾಶಪ್ರಪಂಚಂ''

ನಿನ್ನ ತಲೆಯ ಕೂದಲು ಸಾಮಾನ್ಯವಾದುದಲ್ಲ. ಇದರಲ್ಲಿ ಸಮಸ್ತ ಭೂಮಂಡಲವನ್ನೆಲ್ಲ ವ್ಯಾಪಿಸಿರುವ ಸಾಮ್ರಾಜ್ಯ ನಾಶವಾಯ್ತು. ಕುರುವಂಶವೇ ಅಡಗಿದೆ. ಇದರಿಂದ ಮಹಾಭಾರತ ಯುದ್ಧಕ್ಕೆ ಕಾರಣವಾಯ್ತು ಎನ್ನುವುದರ ಮೂಲಕ ಮಹಾಭಾರತಕ್ಕೆ ದ್ರೌಪದಿಯೇ ಕಾರಣ. ಸುಭದ್ರೆ ಅರ್ಜುನನೊಂದಿಗೆ ಪಟ್ಟಾಭಿಷಕ್ತಳಾದರೂ ದ್ರೌಪದಿಯೇ ಹಲವು ಕಷ್ಟಗಳಿಗೆ ಈಡಾಗುತ್ತಾಳೆ. ಅರ್ಜುನ-ಅರಿಕೇಸರಿಗಳ ಸಮೀಕರಣದಿಂದ ಪಂಪ 'ವಿರ್ಕಮಾರ್ಜುನ ವಿಜಯ' ಎಂದು ಕರೆಯುತ್ತಾನೆ.

ವಿಕ್ರಮಾರ್ಜುನ ವಿಜಯ ಹದಿನಾಲ್ಕು ಆಶ್ವಾಸಗಳಲ್ಲಿ ಸಾಗುತ್ತದೆ. ಅರ್ಜುನನ ಜನನ, ಪಾಂಡವರು ವಾರಣಾತಕ್ಕೆ ಹೊರಡುವುದು, ಅರಗಿನ ಮನೆಯನ್ನುಸುಡುವುದು, ಹಿಡಿಂಬ ವಧೆ, ಬಕಾಸುರ ವಧೆ, ದ್ರೌಪದೀ ಸ್ವಯಂವರ, ವಿವಾಹ, ಯುಧಿಷ್ಠಿರನ ಪಟ್ಟಬಂಧ, ಇಂದ್ರಪ್ರಸ್ಥಕ್ಕೆ ಬರುವುದು, ಅರ್ಜುನನ ದಿಗ್ವಿಜಯ, ದ್ವಾರಾವತಿ ಪ್ರವೇಶ, ಸುಭದ್ರಾಪಹರಣ, ಅರ್ಜುನನ ವಿವಾಹ, ಖಾಂಡವವನ ದಹನ, ಮಯದರ್ಶನ, ನಾರದಾಗಮನ, ಜರಾಸಂಧ ವಧೆ, ರಾಜಸೂಯ ಯಾಗ, ಶಿಶುಪಾಲ ವಧೆ, ದ್ಯೂತ, ದ್ರೌಪದಿಯ ಮಾನಭಂಗ, ವನಪ್ರವೇಶ, ಕಿಮ್ಮೀರ ವಧೆ, ಕಾಮ್ಯಾಕವನ ಪ್ರವೇಶ, ಸೈಂಧವನ ಸೆರೆ,

ಚಿತ್ರಾಂಗದನೊಡನೆ ಯುದ್ಧ, ಕಿರಾತ ದೂತನ ಆಗಮನ, ದ್ರೌಪದೀ ವಾಕ್ಯ, ಇಂದ್ರನಿಂದ ದಿವ್ಯಾಸ್ತ್ರಗಳನ್ನು ಪಡೆದದ್ದು, ಈಶ್ವರಾರ್ಜುನ ಯುದ್ಧ ಕೀಚಕ ವಧೆ, ಉತ್ತರ ಗೋಗ್ರಹಣ, ಅಭಿಮನ್ಯು ವಿವಾಹ, ದೂತ ಕಾರ್ಯ ಭೀಷ್ಮ ಕರ್ಣರ ವಿವಾದ, ದ್ರೋಣಾಭಿಷೇಕ, ಸೈಂಧವ ವಧೆ, ದ್ರೋಣನ ಸಾವು, ಕರ್ಣನ ಸಾವು, ಶಲ್ಯನ ಸಾವು, ಗದಾಯುದ್ಧ, ಸ್ತ್ರೀ ಪರ್ವ, ಅರ್ಜುನ ಪಟ್ಟಾಭಿಷೇಕ ಹೀಗೆ, ಹಂತ ಹಂತವಾಗಿ ಬೆಳೆಯುತ್ತಾ ಸಾಗುವುದನ್ನು ಕಾಣುತ್ತೇವೆ.

ಪಂಪ ಎಲ್ಲ ಪ್ರಸಂಗಗಳನ್ನು ಸಂಕ್ಷೇಪವಾಗಿಯಾದರೂ, ಶ್ರೇಷ್ಠವಾಗಿ ಹೇಳಿದ್ದಾನೆ. ತೀ.ನಂ.ಶ್ರೀ ಹೇಳುವಂತೆ, ''ವಿಕ್ರಮಾರ್ಜುನ ವಿಜಯವು ಕನ್ನಡದ ಕನ್ನಡಿಯಲ್ಲಿ ಚಿಕ್ಕದಾಗಿ ಬಿದ್ದ ವ್ಯಾಸಭಾರತದ ನೆರಳಲ್ಲ. ಅಲ್ಲಿಯ ಚಿನ್ನವನ್ನು ಶೋಧಿಸಿ ತಂದು ಹೊಸದಾಗಿ ಎರಕಹೊಯ್ದು ಒಪ್ಪವಿಟ್ಟು, ನಿಲ್ಲಿಸಿದ ನೂತನ ಪುತ್ಥಳಿ''.

ಸಂಗ್ರಹವಾಗಿ ಹೇಳುವುದರ ಜೊತೆಗೆ ಸಂದರ್ಭಗಳಿಗೆ ತಕ್ಕಂತೆ ಹೊಸದಾಗಿ ಸೇರಿಸಿ ಸ್ವಂತಿಕೆಯನ್ನು ಮೆರೆದಿದ್ದಾನೆ. ಯುದ್ಧದ ಸಂದರ್ಭದಲ್ಲಿ ಕನ್ನಡಿಗರ ಯುದ್ಧವನ್ನು ಆಸ್ಥಾನ ವರ್ಣನೆಯಲ್ಲಿ ಕನ್ನಡ ರಾಜರ ಆಸ್ಥಾನವನ್ನು ವರ್ಣಿಸುವುದನ್ನು ಕಾಣುತ್ತೇವೆ. ಕನಕಸ್ವಾಮಿ ಮತ್ತು ಕೀರ್ತಿಗೆಯ ಪ್ರಸಂಗ ಪಂಪನ ಸ್ವಂತ ಸೃಷ್ಠಿ.

> ''ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
> ಳ್ಗಾರಮಾದ ಮಾನಸರೆ ಮಾನಸರ್। ತೀರದೊಡಂ ಮಣಿದುಂಬಿಯಾಗಿ
> -ಮೇಣ್,
> ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿ ದೇಶದೊಳ್''.

ಇಲ್ಲಿ ಪಂಪ ಕನ್ನಡದ ಬನವಾಸಿಯನ್ನು ನೆನಪಿಸಿಕೊಳ್ಳುವುದರ ಮೂಲಕ ಇಲ್ಲಿನ ಜನಜೀವನವನ್ನು, ಸುಖ-ಸಂತೋಷಗಳನ್ನು, ಮನದುಂಬಿ ವರ್ಣಿಸುತ್ತಾನೆ. ಪಂಪ ರಸಿಕ. ಕೆಲವೊಮ್ಮೆ ಜಾತಿಕುಲಗಳನ್ನು ಕಿತ್ತೊಗೆಯಬಲ್ಲ. ಕರ್ಣನ ಬಾಯಿಂದ ಕುಲದ ಬಗ್ಗೆ ಉಪದೇಶವನ್ನೇ ಮಾಡಿಸುತ್ತಾನೆ. ಛಲ, ಗುಣ, ಸ್ವಾಭಿಮಾನ, ಪರಾಕ್ರಮಗಳೇ ನಿಜವಾದ ಕುಲಗಳು ಎಂದು ಹೇಳುತ್ತಾನೆ. ಕರ್ಣದುರ್ಯೋಧನರ ಸ್ನೇಹವನ್ನು ವರ್ಣಿಸುವಾಗ ಕವಿ ಮೈ ಮರೆಯುತ್ತಾನೆ.

ಪಂಪ ವ್ಯತ್ಯಾಸ ಮಾಡಿಕೊಂಡು ನಿರೂಪಿಸಿರುವ ಪ್ರಸಂಗಗಳಲ್ಲಿ ಶಿಶುಪಾಲ ವಧೆಯ ಪ್ರಸಂಗವೂ ಒಂದು. ರಾಜಸೂಯ ಯಾಗದಲ್ಲಿ ಕೃಷ್ಣನಿಗೆ ಅಗ್ರಪೂಜೆಯನ್ನು ಪಾಂಡವರು ನೀಡ ಬಯಸಿದಾಗ ಶಿಶುಪಾಲ ವಿರೋಧಿಸುತ್ತಾನೆ, ಬಯ್ಯುತ್ತಾನೆ, ಜರೆಯುತ್ತಾನೆ. ಕೊನೆಗೆ ಕೃಷ್ಣ ಅರ್ಘ್ಯದ ತಟ್ಟೆಯನ್ನು ಬೀಸಿದಾಗ ತಲೆ ಹರಿದು ಬೀಳುತ್ತದೆ . ಅರ್ಜುನನ್ನು ನಾಯಕನನ್ನಾಗಿ ಮಾಡಿಕೊಂಡಿದ್ದರಿಂದ

ಕರ್ಣನನ್ನು ಪ್ರತಿ ನಾಯಕನಾಗಿ ಚಿತ್ರಿಸಿದ್ದಾನೆ. ಕರ್ಣನ ಮನಸ್ಸು ಪಂಪನನ್ನು ಸಂಪೂರ್ಣ ಸೆರೆಹಿಡಿದಿದೆ. ಲೌಕಿಕ ಧಾರ್ಮಿಕ ಕಾವ್ಯಗಳನ್ನು ರಚಿಸಿ ಲೌಕಿಕ ಕಾವ್ಯದಲ್ಲಿ ಆಶ್ರಯದಾತನನ್ನು ಹೊಗಳುವುದು ಪಂಪನು ಮಾರ್ಗದರ್ಶಕನೆನ್ನುವುದನ್ನು ತೋರುತ್ತದೆ. ಸ್ವಾಮಿನಿಷ್ಠೆ, ಸ್ನೇಹ, ವಿಶ್ವಾಸಗಳನ್ನು ಕಾವ್ಯರೂಪದಲ್ಲಿ ಸುಂದರವಾಗಿ ಚಿತ್ರಿಸಿ ಆದರ್ಶಪ್ರಾಯವಾದವನು.

## ರನ್ನ

ಪಂಪನ ನಂತರ ಚಂಪೂ ಪ್ರಕಾರವನ್ನು ಬೆಳೆಸಿದವರಲ್ಲಿ ಒಬ್ಬ. ಕವಿ ಚಕ್ರವರ್ತಿ. ರತ್ನತ್ರಯರುಗಳಲ್ಲಿ ಇವನ ಹೆಸರು ಅಚ್ಚಳಿಯದೆ ಉಳಿದಿದೆ. ಚಾಲುಕ್ಯ ಚಕ್ರವರ್ತಿಯಾದ ತೈಲಪ ಮತ್ತು ಅವನ ಮಗ ಸತ್ಯಾಶ್ರಯ ಇರಿವ ಬೆಡಂಗನಲ್ಲಿ ಆಸ್ಥಾನ ಕವಿಯಾಗಿದ್ದವನು. ತೈಲಪನಿಂದ ಕವಿ ಚಕ್ರವರ್ತಿ ಬಿರುದನ್ನು ಪಡೆದನು. ಎರಡು ಕೃತಿಗಳನ್ನು ಬರೆದಿದ್ದಾನೆ. 'ಅಜಿತನಾಥ ಪುರಾಣ' ಮತ್ತು 'ಸಾಹಸಭೀಮ ವಿಜಯ'. ಆದರೆ ಉಪಲಬ್ಧಕೃತಿಗಳಾದ ಪರಶುರಾಮ ಚರಿತ, ಚಕ್ರೇಶ್ವರ ಚರಿತಗಳು ತನ್ನ ಕಾವ್ಯ ವಿಮರ್ಶೆಯನ್ನು ತಾನೇ ಮಾಡಿಕೊಂಡಂತೆ ಕಾಣುತ್ತದೆ.

''ರತ್ನ ಪರೀಕ್ಷಕನಾಂ ಕೃತಿ
ರತ್ನ ಪರೀಕ್ಷಕನೆನೆಂದು ಫಣಿಪತಿಯ ಫಣಾ
ರತ್ನಮುದುಂ ರನ್ನನ ಕೃತಿ
ರತ್ನಮುದುಂ ಪೇಳ್ ಪರೀಕ್ಷಿಪಂಗೆಂಟೆರ್ದೆಯೇ

ಪಂಪನು ತೋರಿಸಿಕೊಟ್ಟ ಮಾರ್ಗದಲ್ಲಿ ನಡೆದವನು. ಅಜಿತನಾಥ ಪುರಾಣ ಎರಡನೆಯ ತೀರ್ಥಂಕರನಾದ ಅಜಿತಸ್ವಾಮಿಯ ಕಥೆಯನ್ನು ಹನ್ನೆರಡು ಆಶ್ವಾಸಗಳಲ್ಲಿ ವಿಸ್ತರಿಸಲಾಗಿದೆ. ಅತ್ತಿಮಬ್ಬೆ ಈ ಕಾವ್ಯವನ್ನು ಬರೆಸಿದಳು. ಪ್ರಾರಂಭದಲ್ಲಿ ಅತ್ತಿಮಬ್ಬೆಯ ಚರಿತ್ರೆಯನ್ನು ಹೇಳಲಾಗಿದೆ. ಪುರಾಣ ಕಾವ್ಯವಾದರೂ ಸುಂದರ ಸನ್ನಿವೇಶಗಳನ್ನು ಚಿತ್ರಿಸಿದ್ದಾನೆ. ಚಕ್ರವರ್ತಿಯ ಕಥೆಯನ್ನು ಸುಂದರವಾಗಿ ನಿರೂಪಿಸಿದ್ದಾನೆ. ತ್ರಿಷಷ್ಠಿ ಶಲಾಕಾ ಪುರುಷರಲ್ಲಿ ಎರಡನೆಯ ಚಕ್ರವರ್ತಿ. ಅವನ ಹಿಂದಿನ ಮೂರು ಜನ್ಮಗಳ ಕಥೆ ಇಲ್ಲಿದೆ. ತೊಂಬತ್ತಾರು ಸಾವಿರ ಮಂದಿ ಹೆಂಡತಿಯರು, ಅರವತ್ತು ಸಾವಿರ ಜನ ಮಕ್ಕಳೊಂದಿಗೆ ಸಗರ ಚಕ್ರವರ್ತಿ ಕಾಲಕಳೆಯುತ್ತಿದ್ದ. ಪ್ರಾಪ್ತವಯಸ್ಕರಾದ ಮಕ್ಕಳು ಕೆಲಸಕೊಡುವಂತೆ ಬೇಡುತ್ತಾರೆ. ಕೊನೆಗೆ ಕೈಲಾಸ ಪರ್ವತದಲ್ಲಿ ಭರತ ಚಕ್ರವರ್ತಿ ನಿರ್ಮಿಸಿದ ಜಿನಪ್ರತಿಗಳು ಭೂಮಿಗೆ ಕಾಣದಂತೆ ರಕ್ಷಣೆ ಮಾಡಿ ಎನ್ನುತ್ತಾರೆ. ಆ ವೇಳೆಗೆ ಸಗರನ ಹಿಂದಿನ ಜನ್ಮದ ವೈರಿ ಮಣಿಕೇತು ವಿಷದೃಷ್ಠಿಯಿಂದ ಸರ್ಪವಾಗಿ ಬಂದು ಸಗರನ ಮಕ್ಕಳನ್ನು ಸುಟ್ಟು ಬೂದಿ ಮಾಡುತ್ತಾನೆ. ಭಗೀರಥನೊಬ್ಬನು ಮಾತ್ರ ಉಳಿದಿರುತ್ತಾನೆ. ನಂತರ ಮಣಿಕೇತು

ಮುದಿ ಬ್ರಾಹ್ಮಣನ ವೇಷದಲ್ಲಿ ಸಗರನಲ್ಲಿಗೆ ಬಂದು ತನ್ನ ಮಗನೊಬ್ಬ ವಿವಾಹ ಕಾಲದಲ್ಲಿ ಸತ್ತನೆಂದೂ ನನ್ನ ಮಗನನ್ನು ಯಮ ಪುರದಿಂದ ಮರಳಿಕೊಡಿಸು ಎಂದು ಪ್ರಾರ್ಥಿಸುತ್ತಾನೆ. ಪ್ರಜೆಯೊಬ್ಬನ ದುಃಖವನ್ನು ನಿವಾರಿಸಲಾಗಲಿಲ್ಲ ಎಂದು ಚಿಂತಿಸಿದ ಸಗರ ಬುದ್ಧಿಸಾಗರನೆಂಬುವನ ಉಪಾಯವನ್ನು ಆಲೋಚಿಸಿ ಯಾರೂ ಸಾಯಲಾರದ ಮನೆಯಲ್ಲಿ ಹುಲ್ಲು ಬೆಂಕಿಯನ್ನು ತಂದರೆ ಅವನ ಮಗನನ್ನು ಬದುಕಿಸಬಹುದೆಂದು ಸೂಚಿಸುತ್ತಾನೆ. ಸಾಧ್ಯವಾಗದೆ ಪುರೋಹಿತ ಸಾವಿನ ಅನಿವಾರ್ಯತೆಯನ್ನು ಒಪ್ಪಿಕೊಳ್ಳುತ್ತಾನೆ. ಭಗೀರಥನಿಂದ ಮಕ್ಕಳ ಸಾವನ್ನು ತಿಳಿದಾಗ ಸಗರ ಸ್ವಲ್ಪವೂ ದುಃಖಿಸುವುದಿಲ್ಲ. ಬುದ್ಧಿಸಾಗರ ಬಿಳಿಯ ಸಾಸಿವೆಯನ್ನು ಹಿಡಿ ತುಂಬ ಮೇಲೆ ಹಾಕಿದಾಗ ಭಿಳಿಭಿಟಿಲ್ ಎಂದು ದಿಕ್ಕುದಿಕ್ಕಾಗಿ ಹಾರುತ್ತವೆ.

ರನ್ನನ ಮತ್ತೊಂದು ಕಾವ್ಯ ಗದಾಯುದ್ಧ. ರನ್ನನ ಕೀರ್ತಿಯನ್ನು ಅಜರಾಮರಗೊಳಿಸಿರುವುದು ಈ ಕೃತಿಯೇ. ಪಂಪಭಾರತದ ಹದಿಮೂರನೇ ಅಶ್ವಾಸದಲ್ಲಿ ಬರುವ ಗದಾಯುದ್ಧ ಪ್ರಸಂಗವನ್ನು ಇಟ್ಟುಕೊಂಡು ರನ್ನ ಅತ್ಯುತ್ತಮ ಕಾವ್ಯವನ್ನು ರಚಿಸಿದ್ದಾನೆ. ಪಂಪನಂತೆ ಆಶ್ರಯದಾತನನ್ನು ಕಥಾನಾಯಕನೊಡನೆ ಹೋಲಿಸಿದ್ದಾನೆ. ಇಲ್ಲಿ ಯುದ್ಧವಾದ ಮೇಲೆ ಪಟ್ಟವಾಗುವುದು ಭೀಮನಿಗೆ. ಸಂಸ್ಕೃತ ನಾಟಕಗಳಾದ 'ಊರುಭಂಗ' (ಭಾಸ) ವೇಣೀಸಂಹಾರ (ಭಟ್ಟನಾರಾಯಣ) ಗಳ ಪ್ರಭಾವವಿದೆ. ಬಿ.ಎಂ.ಶ್ರೀ. ಅತ್ಯಲ್ಪ ವ್ಯತ್ಯಾಸ ಮಾಡಿಕೊಂಡು ಗದಾಯುದ್ಧ ನಾಟಕವನ್ನು ರಚಿಸಿರುವರು. ಗದಾಯುದ್ಧ ಕಾವ್ಯದಲ್ಲಿ ಭಾರತವನ್ನೆಲ್ಲ ಸಿಂಹಾವಲೋಕನ ಕ್ರಮದಲ್ಲಿ ಹೇಳಿರುವುದಾಗಿ ರನ್ನ ಹೇಳಿಕೊಂಡಿದ್ದಾನೆ. ಕುವೆಂಪು ಆ ಕಾರಣಕ್ಕಾಗಿಯೇ 'ಶಕ್ತಿಕವಿ' ಎಂದು ಕರೆಯುತ್ತಾರೆ.

ಪ್ರತಿನಾಯಕನಾದ ದುರ್ಯೋಧನನ ವ್ಯಕ್ತಿತ್ವ ದುರಂತವಾದರೆ, ಪಂಪನಲ್ಲಿ ಕರ್ಣ ದುರಂತ ನಾಯಕನಾಗುತ್ತಾನೆ. ರನ್ನ ದುರ್ಯೋಧನನನ್ನು 'ಮಹಾನುಭಾವ' ನೆಂದು ಕರೆದಿದ್ದಾನೆ. ಖಳನಾಯಕನಂತೆ ಎಲ್ಲಿಯೂ ನೋಡಿಲ್ಲ. ಕರ್ಣ ಮತ್ತು ದುರ್ಯೋಧನರ ಗೆಳೆತನವನ್ನು ಕುರಿತು ಕರ್ಣ ಯುದ್ಧಭೂಮಿಯಲ್ಲಿ ಮಡಿದಾಗ ಕೆಳಗಿನಂತೆ ಪ್ರಲಾಪಿಸುತ್ತಾನೆ.

''ನೀನುಳ್ಳೊಡುಂಬು ರಾಜ್ಯಂ
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟಯ್
ನೀನುಳ್ಳೊಡುಂಬು ಪೀಳ್ಗೆ
ನೀನಿಲ್ಲದೆವೆಲ್ಲಮೊಳವೆ ಅಂಗಾಧಿಪತೀ'' (ಗದಾ. 5-20)

ಕರ್ಣ ಸತ್ತಿದ್ದರೂ ಅವನ ರೂಪ ಹೃದಯದಲ್ಲಿ ಶಾಶ್ವತವಾಗಿದೆ ಎನ್ನುತ್ತಾನೆ. ಸ್ನೇಹಿತನಿಗೆ ಒಳಿತನ್ನು ಮಾಡಲಿಲ್ಲ ಎಂದು ಕೊರಗುತ್ತಾನೆ. ಗದಾಯುದ್ಧ ಪ್ರಸಂಗದ ವೇಳೆಗೆ ಓದುಗರಿಗೆ ದುರ್ಯೋಧನನ ಬಗ್ಗೆ ಗೌರವವುಂಟಾಗುವಂತೆ

ಮಾಡಿರುವುದು ರನ್ನನ ಹೆಗ್ಗಳಿಕೆ. ಭೀಮ ಮತ್ತು ದುರ್ಯೋಧನರ ನಡುವಿನ ಗದಾಯುದ್ಧ ಪ್ರಸಂಗ ಕಾವ್ಯದ ರಸಘಟ್ಟ. ನೀರೊಳಿದ್ದ ದುರ್ಯೋಧನ ಬೆವೆತು ಹೊರಬರುತ್ತಾನೆ. ಸಾಮಾನ್ಯ ಕವಿಗೆ ಈ ಕಲ್ಪನೆ ಸಾಧ್ಯವೇ ? ಭೀಮ ಮೂರ್ಛೆ ಹೋದಾಗ ಗದೆಯಿಂದಲೇ ಗಾಳಿ ಬೀಸಿ ಎಚ್ಚರಿಸುತ್ತಾನೆ. ಆದರೆ ಭೀಮ ತೊಡೆಮುರಿದು ಬಿದ್ದಾಗ ಕಾಲಿನಿಂದ ಅವನ ತಲೆಯನ್ನು ಒದೆಯುತ್ತಾನೆ. ಕವಿಗೆ ದುರ್ಯೋಧನನ ಬಗೆಗಿರುವ ಗೌರವವನ್ನು ನಮ್ಮಲ್ಲಿಯೂ ತರಿಸುವ ಪ್ರಯತ್ನ ಮಾಡಿದ್ದಾನೆ. ಪಂಪನೇನಾದರೂ ಗದಾಯುದ್ಧದ ಮಹಾನುಭಾವನನ್ನು ನೋಡಿದ್ದರೆ ''ಶಿಷ್ಯಾದಿಚ್ಛೇತ್ ಪರಾಜಯಂ' ಎಂದು ಆನಂದಪಡುತ್ತಿದ್ದನು ಎಂದು ಬಿ.ಎಂ.ಶ್ರೀ. ಹೇಳುವುದನ್ನು ಗಮನಿಸಿದರೆ ರನ್ನನ ಕೃತಿಯ ಶ್ರೇಷ್ಠತೆಯ ಅರಿವಾಗುತ್ತದೆ.

**ನಯಸೇನ**

ನಯಸೇನ ಧಾರವಾಡ ಜಿಲ್ಲೆಯ ಮುಳುಗುಂದ ಎಂಬ ಗ್ರಾಮದವನು. 'ಧರ್ಮಾಮೃತ'ವೆಂಬ (1112) ಚಂಪೂ ಕಾವ್ಯವನ್ನು ಬರೆದು ಸನ್ಯಾಸಿಯಾದಂತೆ ತೋರುತ್ತದೆ. ಪದ್ಯಕ್ಕಿಂತ ಹೆಚ್ಚು ಗದ್ಯವನ್ನು ಬಳಸಿಕೊಂಡು ಹೊಸ ರೀತಿಯ ಪ್ರಯೋಗಕ್ಕಿಳಿದನು. ಜನಭಾಷೆಯನ್ನು ಕಾವ್ಯಭಾಷೆಯನ್ನಾಗಿಸಿದವನು.

''ಪೊಸಕನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ
ತಿಸಿ ಕೂಡಲಾಳದಕ್ಕವ
ಮಿಸುಕದ ಸಕ್ಕದ ಮನಿಕ್ಕುವವನುಂ ಕವಿಯೇ ?''

ಹೊಸ ಕನ್ನಡದಲ್ಲಿ ಕಾವ್ಯ ರಚಿಸುವೆನೆಂದು ಹೇಳಿಕೊಂಡು ಸಂಸ್ಕೃತವನ್ನು ಬಳಸುವವನು ಕವಿಯೇ ಎಂದು ಪ್ರಶ್ನಿಸುತ್ತಾನೆ.

''ಸಕ್ಕದಮಂ ಪೇಳ್ವೊಡೆ ನೆಱೆ
ಸಕ್ಕದಮಂ ಪೇಳ್ಗೆ ಸುದ್ಧಗನ್ನಡದೊಳ್ ಕಂ
ಡಿಕ್ಕುವುದೆ ಸಕ್ಕದಮಂ
ತಕ್ಕದೆ ಬೆರಸಲ್ಕೆ ಘೃತಮುಮಂ ತೆರಲಮಯಂ''

ಇವನ ಧರ್ಮಾಮೃತ ಯಾವುದೇ ಆಧಾರ ಗ್ರಂಥದಿಂದ ರಚಿತವಾಗಿಲ್ಲ. ಕಾವ್ಯದಲ್ಲಿ ಹದಿನಾಲ್ಕು ಬೇರೆ ಬೇರೆ ಕತೆಗಳನ್ನು ಹೇಳಿದ್ದಾನೆ. ಇಲ್ಲಿನ ಕತೆಗಳು ಜೈನದರ್ಶನ, ನಿಶ್ಯಂಕೆ, ನಿಷ್ಕಾಂಕ್ಷೆ, ನಿರ್ದಿಚಿಕಿತ್ಸೆ, ಅಮಾಂಧ ದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಧರ್ಮ ಪ್ರಭಾವನೆ ಎಂಬ ಒಂಬತ್ತು ಅಂಗಗಳು ಹಾಗೂ ಅಹಿಂಸೆ, ಸತ್ಯ, ಆಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಐದು ಅಣುವ್ರತಗಳು ಹೀಗೆ ಹದಿನಾಲ್ಕು ವಿಷಯಗಳ ಮಹಿಮೆಯನ್ನು ಸಾರುತ್ತದೆ. ಇಲ್ಲಿನ ಹದಿನಾಲ್ಕು

ಕತೆಗಳು ಹದಿನಾಲ್ಕು ಆಶ್ವಾಸಗಳಾಗಿ ಬಂದಿವೆ. ವಿಪುಲಗಿರಿಯಲ್ಲಿ ವರ್ಧಮಾನ ಸ್ವಾಮಿಗಳ ಸಮವಸರಣವು ಒಂದು ನೆಲೆಸಿದೆ ಎಂಬ ವಿಷಯ ತಿಳಿದ ಶ್ರೇಣಿಕ ಮಹಾರಾಜ, ಚೇಳಿನೀ ದೇವಿ ಅಲ್ಲಿಗೆ ಬಂದು ಹುಟ್ಟುಸಾವುಗಳ ಚಕ್ರದಿಂದ ಬಿಡುಗಡೆಮಾಡುವುದಾವುದೆಂದು ಕೇಳಿ ತಮಗೆ ಮುಕ್ತಿಯ ಮಾರ್ಗದರ್ಶನ ಮಾಡಬೇಕೆಂದು ಕೇಳಿದಾಗ ಹೇಳಿದ ಹದಿನಾಲ್ಕು ಕತೆಗಳೇ ಇಲ್ಲಿ ಆಶ್ವಾಸಗಳಾಗಿವೆ.

ಮೇರು ಪರ್ವತದ ಮಧ್ಯೆ ಸೌರಾಷ್ಟ್ರವೆಂಬ ನಾಡಿನಲ್ಲಿ ಗಿರಿನಗರವೆಂಬ ನಗರ. ದಯಾಮಿತ್ರ, ಶೆಟ್ಟಿ ವ್ಯಾಪಾರಿ. ವ್ಯಾಪಾರಕ್ಕೆ ಹೊರಟ ಸಮಯದಲ್ಲಿ ವಸುಭೂತಿಯೆಂಬ ಬ್ರಾಹ್ಮಣ ಗಂಗಾಸ್ನಾನಕ್ಕೆ ಹೊರಟಿರುವುದಾಗಿ ನಿಮ್ಮ ಜೊತೆ ಬರುತ್ತೇನೆಂದಾಗ ಶೆಟ್ಟಿ ಒಪ್ಪಿಗೆ ಕೊಡುತ್ತಾನೆ. ದಯಾಮಿತ್ರ ಪ್ರತಿದಿನ ಮೂರು ಗಳಿಗೆ ಧರ್ಮ ಶ್ರವಣವಿಲ್ಲದೆ ಊಟ ಮಾಡುತ್ತಿರಲಿಲ್ಲ. ವಸುಭೂತಿಗೆ ಇದು ಅಸಹ್ಯವೆನಿಸುತ್ತದೆ. ಸೆಟ್ಟಿಗೆ ಸರಿಯಾದ ಧರ್ಮವನ್ನು ಹೇಳಬೇಕೆಂದು ಸವಣರು ಹೊಟ್ಟೆಪಾಡಿಗಾಗಿ ನಾಟಕವಾಡುತ್ತಾರೆ. ಅವರ ಕಾಯಕ್ಲೇಶವು ಎಳ್ಳಷ್ಟು ಸವಣರಿಗಿರುವುದಿಲ್ಲ ಎಂದು ಹಾಸ್ಯ ಮಾಡುತ್ತಾನೆ. ಆಗ ಸೆಟ್ಟಿ ಇವನಿಗೆ ಬುದ್ಧಿ ಕಲಿಸಲು ಮತ್ತೊಂದು ವ್ರತವನ್ನು ಹೇಳುತ್ತಾನೆ.

ವಸುಭೂತಿಯನ್ನು ಕರೆದು ನಮ್ಮಲ್ಲಿ ಹಿಂದಿನಿಂದ ಬಂದ ಕುಲವ್ರತ ಹೊಂದಿದೆ. ಜಿನೇಶ್ವರ ಸಾಕ್ಷಿಯಾಗಿ ಮಹರ್ಷಿಗಳಿಂದ ವ್ರತವನ್ನು ಮಾಡಿಸಿ ಅವರಿಗೆ ಭೂರಿ ದಕ್ಷಿಣೆಯನ್ನು ನೀಡಬೇಕು. ಆ ಕಾಲ ಸಮೀಪಿಸುತ್ತಿದೆ. ನೀವು ಆ ವ್ರತವನ್ನು ಮುಗಿಸಿಕೊಟ್ಟರೆ ಕೇಳಿದಷ್ಟು ಹೊನ್ನು ಕೊಡುತ್ತೇನೆ ಎನ್ನುತ್ತಾನೆ. ತುಪ್ಪ, ಮೃಷ್ಟಾನ್ನವನ್ನು ಕೆಳಗೆ ಹಾಕಿಸಿಕೊಂಡು ಊಟ ಮಾಡಬೇಕು. ಅನ್ನ, ನೀರು, ತಾಂಬೂಲಾದಿಗಳನ್ನು ತೆಗೆದುಕೊಳ್ಳದೆ ಧ್ಯಾನದಲ್ಲಿರಬೇಕು. ಮನೆಯಿಂದ ಹೊರಗೆ ಹೋಗಬಾರದು. ಸ್ನಾನ ಮಾಡಬಾರದು. ನೆಲದ ಮೇಲೆ ಮಲಗಬೇಕು. ತಲೆಯ ಕೂದಲನ್ನು ಕೀಳಿಸಿಕೊಳ್ಳಬೇಕೆಂದಾಗ ವಸುಭೂತಿ ಒಪ್ಪುತ್ತಾನೆ.

ತಲೆಕೂದಲನ್ನು ಚಿಮ್ಮಟದಿಂದ ಕೀಳಿಸಿಕೊಳ್ಳುವಾಗ ನೋವಾದರೂ ಸಹಿಸುತ್ತಾನೆ. ಆದರೆ ನೀರನ್ನು ಕುಡಿಯದ ವ್ರತ, ಸ್ನಾನ ಮಾಡಬಾರದ ವ್ರತದಿಂದ ಸಹಿಸಲಾಗದೆ ಸೆಟ್ಟಿಯನ್ನು ಬೇಡಿಕೊಳ್ಳುತ್ತಾನೆ. ಈ ಸಂಕಟ ನಿಜವಾದ ಸವಣರು ಮಾಡಲು ಸಾಧ್ಯ ಎಂದು ಒಪ್ಪುತ್ತಾನೆ. ಹೀಗೆ ಜೈನಧರ್ಮದ ತತ್ವಗಳನ್ನು ಸೆಟ್ಟಿ ವಸುಭೂತಿಗೆ ಹೇಳುತ್ತಾನೆ. ಇಂತಹವೇ ಹದಿನಾಲ್ಕು ಕತೆಗಳನ್ನು ಹೇಳಲಾಗಿದೆ.

ಇವನ ಕಾಲಕ್ಕಾಗಲೇ ಜೈನಧರ್ಮದ ಜನಪ್ರಿಯತೆ ಇಳಿಮುಖವಾಗಿತ್ತು. ಜನಸಾಮಾನ್ಯರಲ್ಲಿ ಆಸಕ್ತಿ ಮೂಡಿಸಲು ಕಥಾಮಾರ್ಗವನ್ನು ಅನುಸರಿಸುತ್ತಾನೆ. ಗಾದೆ, ನಾಣ್ಣುಡಿಗಳನ್ನು ಬಳಸುತ್ತಾನೆ. 'ಸುಂಟಿ ತಿಂದ ಬಾಯೊಳ್ ಬಿಸಿನೀರಂ ಕುಡಿದರಂತೆ' 'ಪೊನ್ನೆಡೆಯೊಳ್ ನಾಯನಪ್ಪೊಡಂ ನಂಬಲಾಗದು', 'ಕೋಡಗಮಂ ಪುಲ್ಲೊಳ್

ಮುಚ್ಚಿಸಿಡಿಮಿಡಿಗೊಂಬಂತೆ', 'ಬೆಕ್ಕು ಪಾಲು ಕಾಣ್ಬುದಲ್ಲದೆ ಬೇಗೆ ಬಂದಡಸುವ ಬಡಿಗೆಯಂ ಕಾಣದಂತೆ', 'ಪಣ್ಣಂಗಿಟ್ಟೊಡೆ ಕಾರ್ಯ್ಯ ಬಿರ್ದುದು ಬೆಟ್ಟಮಂ ಗುಂಗುರು ಕಾಡಿತ್ತೆಂಬ ಮಾತಿನಂತೆ' ಹೀಗೆ ನೂರಾರು ಮಾತುಗಳಿವೆ. ಮಾಲೋಪಮೆ ಇವನ ವೈಶಿಷ್ಟ್ಯ. ರಂಜಕವಾಗಿ ಕತೆ ಹೇಳುವ ಪ್ರವೃತ್ತಿ. ಭಾಷೆಯ ದೃಷ್ಟಿಯಿಂದ ಹೊಸರೂಪವನ್ನು ನೀಡಿದ. ಜನಸಾಮಾನ್ಯರಿಗೆ ಪ್ರಯೋಜನವಾಗುವ ಕಾವ್ಯಮಾರ್ಗವನ್ನು ರೂಪುಗೊಳಿಸಿದ.

## ಹರಿಹರ

ವೀರಶೈವ ಚಂಪೂ ಕವಿಗಳಲ್ಲಿ ಹರಿಹರ ಮಹತ್ವದ ಕವಿ. ರಗಳೆ ಕವಿ ಎಂದು ಪ್ರಸಿದ್ಧನಾದರೂ, 'ಗಿರಿಜಾ ಕಲ್ಯಾಣ'ವನ್ನು ಬರೆಯುವುದರ ಮೂಲಕ ಚಂಪೂ ಕವಿಯಾಗಿ ಗುರ್ತಿಸಿಕೊಂಡನು. ವಚನಕಾರರು ಹಾಕಿಕೊಟ್ಟ ಹೊಸ ಮೌಲ್ಯಗಳನ್ನು ಅರಗಿಸಿಕೊಂಡು ಕಾವ್ಯ ರಚಿಸಿದವನು. ಕ್ರಾಂತಿ ಕವಿ ಎಂದೂ ಕರೆಯುತ್ತಾರೆ. ಸಾಹಿತ್ಯದಲ್ಲಿ ರಗಳೆಯನ್ನು ಗುರ್ತಿಸಿದ್ದು, ಭಾಷೆಯ ದೃಷ್ಠಿಯಿಂದ ಳ, ೞ ಗಳು ಳ ಆಗಿಯೇ ಉಳಿದದ್ದು, ಇವನ ಕಾಲದಲ್ಲಿ ಉಚ್ಚಾರಣೆಯಲ್ಲಿ ವ್ಯತ್ಯಾಸವಿಲ್ಲದ್ದರಿಂದ ಆ ನಿಯಮವನ್ನು ಪಾಲಿಸುವುದಿಲ್ಲವೆಂದು ಸಾರಿದ. ನಡುಗನ್ನಡ ಭಾಷೆಯಲ್ಲಿ ಕೃತಿ ರಚಿಸಿದ್ದರಿಂದ ಜನಸಾಮಾನ್ಯರ ಭಾಷೆಗೆ ಮಹತ್ವ ಬಂದಿತು. ಸಾಂಪ್ರದಾಯಿಕ ಹದಿನೆಂಟು ವರ್ಣನೆಗಳಲ್ಲಿ ಯಾವುದು ಬೇಕೋ ಅಂತಹವುಗಳನ್ನು ಮಾತ್ರ ಬಳಸಿದ.

ಇವನು ರಚಿಸಿದ ಚಂಪೂ ಕೃತಿ 'ಗಿರಿಜಾ ಕಲ್ಯಾಣ' ಹತ್ತು ಆಶ್ವಾಸಗಳಿರುವ ಕಾವ್ಯ. ಇದರಲ್ಲಿ ಕಂದ ಪದ್ಯಗಳೇ ಇವೆ. ಈ ಕೃತಿಯನ್ನು ಬರೆದುದಕ್ಕೆ ವೀರಶೈವ ಪುರಾಣಗಳಲ್ಲಿ ಕತೆಯಿದೆ. 'ರಗಳೆಯ ಕವಿ' ಎಂದು ಲೇವಡಿ ಮಾಡಿದ್ದರಿಂದ ಚಂಪೂ ಕಾವ್ಯವನ್ನು ಬರೆದನಂತೆ. ಕಾವ್ಯ ರಚನಾ ರೀತಿಯನ್ನು ನೋಡಿದರೆ 'ಗಿರಿಜಾ ಕಲ್ಯಾಣ'ವನ್ನು ಬರೆದ ನಂತರ ರಗಳೆಗಳನ್ನು ಬರೆದಂತೆ ತಿಳಿದು ಬರುತ್ತದೆ. ತಮಿಳುನಾಡಿನ ಶಿವಭಕ್ತರ ರಗಳೆಗಳನ್ನು ಪುರಾತನರ ರಗಳೆಗಳೆಂದು ಕರೆಯುತ್ತಾರೆ.

ಗಿರಿಜೆಯ ಹುಟ್ಟನಿಂದ ಆಕೆಯ ವಿವಾಹದವರೆಗಿನ ಕತೆಯನ್ನು ನಿರೂಪಿಸುತ್ತದೆ. ಕಾಳಿದಾಸನ ಕುಮಾರಸಂಭವದ ಪ್ರಭಾವವಿರುವುದು ಕಾಣುತ್ತದೆ. ಪ್ರಭಾವಕ್ಕೊಳಗಾಗಿಯೂ ಸ್ವಂತಿಕೆಯನ್ನು ಮೆರೆದಿದ್ದಾನೆ. ಪಾರ್ವತಿಯ ಪಾತ್ರವು ನಿರ್ಮಲವಾದ ಭಕ್ತಿ ಹಾಗೂ ಪಾವಿತ್ರ್ಯಗಳ ಪ್ರತೀಕವಾಗಿದೆ. ವಟುವಿನ ವೇಷದ ಶಿವನು, ಶಿವನನ್ನೇ ತೆಗಳಿದಾಗ ಕೋಪದಿಂದ ಶಿವನನ್ನು ವಿಭೂತಿಯಿಂದ ಹೊಡೆಯುವುದು, ಶಿವ ಪ್ರತ್ಯಕ್ಷನಾಗುವುದು, ಕಾಮನನ್ನು ಶಿವನು ಸುಟ್ಟು ಹಾಕುವುದು ಮುಂತಾದ ಪ್ರಸಂಗಗಳ ನಿರ್ವಹಣೆಯಲ್ಲಿ ಶ್ರೇಷ್ಠ ರಚನಾ

ಕೌಶಲ್ಯವನ್ನು ಕಾಣಬಹುದು. ಅಷ್ಟಾದಶ ವರ್ಣನೆಗಳ ಸಂಪ್ರದಾಯಕ್ಕೆ ಕಟ್ಟುಬಿದ್ದು ಸೂಳೆಗೇರಿಯ ವರ್ಣನೆ ಮಾಡುವಾಗ ನಾರದನನ್ನು ಕರೆತರುವಂತಹ ಅನೌಚಿತ್ಯವನ್ನು ಮಾಡಿದ್ದಾನೆ. ಅವನ ವರ್ಣನೆಗಳು ಅತಿರೇಕಕ್ಕೇರದೆ, ಹಿತಮಿತವಾಗಿಯೇ ಇವೆ. ತಡೆಯಿಲ್ಲದ ಭಾಷೆಯ ಬಳಕೆ, ಕತೆ ಹೇಳುವ ಧಾಟಿಗಳು, ಅವನಿಗೇ ವಿಶಿಷ್ಟವಾದವು.

ಗಿರಿಜಾ ಕಲ್ಯಾಣ ಸುಂದರ ಕಾವ್ಯ. ಪಂಡಿತರಿಗೂ ಪ್ರಿಯವಾಗಬಲ್ಲ ಕಾವ್ಯ ಬರೆಯುವನೆಂಬುದಕ್ಕೆ ಸಾಕ್ಷಿ. ಚಮತ್ಕಾರಗಳಿಲ್ಲದೆ ಸುಂದರ ಸನ್ನಿವೇಶಗಳನ್ನು ರಚಿಸಿದ್ದಾನೆ. ಶಿವನನ್ನು ವಿಭೂತಿಯಿಂದ ಹೊಡೆಯುವುದು ಹರಿಹರನ ಸ್ವಂತ ಕಲ್ಪನೆ. ಆದರೆ ಹರಿಹರನ ಕೀರ್ತಿ ಮಹತ್ವ, ಸ್ವಂತಿಕೆಗಳೆಲ್ಲ ಅವನ ರಗಳೆಗಳಿಂದಲೇ ಬಂದವು.

### ಜನ್ನ

ಕನ್ನಡ ಚಂಪೂ ಕವಿಗಳಲ್ಲಿ ಪ್ರಮುಖನಾದವನು. 'ಯಶೋಧರ ಚರಿತೆ'ಯನ್ನು 1209 ರಲ್ಲಿ 'ಅನಂತನಾಥ ಪುರಾಣ'ವನ್ನು 1230 ರಲ್ಲಿ ಬರೆದನು. ಕಾವ್ಯ ರಚನೆಯ ದೃಷ್ಟಿಯಿಂದ ಹನ್ನೆರಡನೆಯ ಶತಮಾನದ ಕೊನೆ ಹದಿಮೂರನೆ ಶತಮಾನದ ಪ್ರಾರಂಭ. ಸುಮನೋಬಾಣ ಬಿರುದಿನ ಶಂಕರ ತಂದೆ, ಗಂಗಾದೇವಿ ತಾಯಿ. ಶಂಕರ ಹೊಯ್ಸಳ ನರಸಿಂಹನಲ್ಲಿ ಕಟದೋಪಾಧ್ಯಾಯ. ಜನ್ನನ ಹೆಂಡತಿ ಲಕುಮಾದೇವಿ. ಸೂಕ್ತಿ ಸುದಾರ್ಣವದ ಮಲ್ಲಿಕಾರ್ಜುನ ಭಾವ. ಹೊಯ್ಸಳ ವೀರಬಲ್ಲಾಳನಲ್ಲಿ ಆಸ್ಥಾನ ಕವಿಯಾದನು. ಕೆಲವು ಶಾಸನ ಕವಿತೆಗಳನ್ನು ರಚಿಸಿದ್ದಾನೆ. 'ಜಗದೊಳ್ ತಾನಿತ್ತ ಕೈಯಲ್ಲಿದೆ ಒಡ್ಡಿದ ಕೈಯಲ್ಲದ ಪೆಂಪು' ಎಂದು ಹೇಳಿಕೊಂಡಿದ್ದಾನೆ.

ಯಶೋಧರ ಚರಿತೆ ಚಂಪೂಕಾವ್ಯವೇ ಅಲ್ಲ. ಗದ್ಯವೇ ಇಲ್ಲದ 311 ಕಂದಪದ್ಯಗಳ ಕಾವ್ಯ. ಸಂಸ್ಕೃತದ ವಾದಿರಾಜನ 'ಯಶೋಧರ ಚರಿತ'ದ ಅನುವಾದವಾಗಿದೆ. ಜೀವದಯಾಷ್ಟಮಿಯೆಂಬ ಅಹಿಂಸಾವ್ರತವನ್ನು ಆಚರಿಸಿದ ಜೈನರು ಪಾರಣೆಯ ದಿನದಂದು ಕೇಳುವುದಕ್ಕಾಗಿ ಈ ಕಾವ್ಯವನ್ನು ಬರೆದಂತೆ ಹೇಳಿಕೊಂಡಿದ್ದಾನೆ.

ಅಯೋಧ್ಯಾದೇಶದ ರಾಜಧಾನಿ ರಾಜಪುರ. ಅದರ ರಾಜ ಮಾರಿದತ್ತ. ದೇವತೆ ಚಂಡಮಾರಿ ಚೈತ್ರ. ಆಶ್ವಯುಜ ಮಾಸಗಳಲ್ಲಿ ಜಾತ್ರೆ ನಡೆಯುವುದು ವಾಡಿಕೆ. ಅಗ್ರ ನರಬಲಿ, ಪಶುಬಲಿಗಳನ್ನು ಯಥೇಚ್ಛವಾಗಿ ಕೊಡಬೇಕು. ಇಲ್ಲದಿದ್ದರೆ ದೇವತೆ ಮುನಿಯುತ್ತಾಳೆ. ಇದು ಜನರ ನಂಬಿಕೆ. ಬಲಿ ಕೊಡಲು, ಅಭಯರುಚಿ, ಅಭಯಮತಿಯನ್ನು ಚಂಡಕರ್ಮ ಹಿಡಿತರುತ್ತಾನೆ. ರಾಜನನ್ನು ಧೈರ್ಯದಿಂದ ಅರಸಿದಾಗ ಮಾರಿದತ್ತ ಬೆರಗಾಗಿ ಅವರ ಪೂರ್ವಾಪರಗಳನ್ನು ಕೇಳುತ್ತಾನೆ. ಆಗ

ಯಶೋಧರ, ಅಮೃತಮತಿ, ಚಂದ್ರಮತಿಯರ ಕಥೆ, ಅಮೃತಮತಿ ಬದಗನ ಸಂಬಂಧ, ಯಶೋಧರ ಚಂದ್ರಮತಿಯರಿಂದ ಹಿಟ್ಟಿನ ಕೋಳಿಯ ಬಲಿ, ಯಶೋಧರ, ಚಂದ್ರಮತಿಯರಿಗೆ ವಿಷಪ್ರಾಸನ, ಸತ್ತು ಏಳು ಜನ್ಮಗಳಲ್ಲಿ ಪ್ರಾಣಿಗಳಾಗಿ ಹುಟ್ಟಿ, ಕೊನೆಯ ಜನ್ಮದಲ್ಲಿ ಅಭಯರುಚಿ, ಅಭಯಮತಿಯಾಗಿ ಹುಟ್ಟಿ ಸುದತ್ತಾಚಾರ್ಯರಲ್ಲಿ ಜೈನದೀಕ್ಷೆ ಕೈಗೊಳ್ಳುತ್ತಾರೆ. ಆಗ ಚಂಡಕರ್ಮನಿಂದ ಹಿಡಿತರಲ್ಪಟ್ಟು ಧರ್ಮ ಬೋಧೆ ಮಾಡುತ್ತಾರೆ. ಗಾದೆ ಮಾತುಗಳನ್ನು ಹೇರಳವಾಗಿ ಬೆಳೆಸುತ್ತಾನೆ. ಜೀವಂ ಮೆಚ್ಚಿದ ಕಾಗೆಗೆ ಮಾವಳಿದಪ್ಪಿಂತೆ, ಪೊಲ್ಲಮೆಯೆ ಲೇಸು ನಲ್ಲರ ಮಯ್ಯೊಳ್.

ಯಶೋಧರ ಚರಿತೆ ತುಂಬ ಸರಳವೂ ಸ್ವಾರಸ್ಯವೂ ಆದ ಕಾವ್ಯ. ಜನರ ಮನಸ್ಸಿಗೆ ತಟ್ಟುವ ರೀತಿಯಲ್ಲಿ ಜನ್ನ ಕಾವ್ಯ ರಚಿಸಿದ್ದಾನೆ. ಮನಸ್ಸಿನಲ್ಲಿ ಹಿಂಸೆಯನ್ನು ಒಪ್ಪಿಕೊಂಡುದಕ್ಕಾಗಿ ಯಶೋಧರ ಚಂದ್ರಮತಿಯರು ಹಲವು ಜನ್ಮಗಳಲ್ಲಿ ತೊಳಲಿದ್ದನ್ನು ಕೇಳಿದಾಗ ಮನಸ್ಸಿನ ಪರಿಣಾಮವುಂಟಾಗುತ್ತದೆ. ಅಮೃತಮತಿಯ ಪಾತ್ರ ನಿಕೃಷ್ಟವಲ್ಲ. ಯಶೋಧರನಂತ ಪತಿಯನ್ನು ಬಿಟ್ಟು ಅಷ್ಟಾವಂಕನಲ್ಲಿ ಉಂಟಾದ ಪ್ರೀತಿಯ ಬಗ್ಗೆ ತಾತ್ಸಾರ ಉಂಟಾಗುವುದರಲ್ಲಿ ಅನುಮಾನವಿಲ್ಲ. ರೋಗದಿಂದ ಮೈಯೆಲ್ಲ ಕೊಳೆತಾಗಲೂ ಅವನ ಬಗ್ಗೆ ಪ್ರೀತಿಯಿಟ್ಟುಕೊಳ್ಳುತ್ತಾಳೆ. ವೈಭವವನ್ನು ಬಿಟ್ಟು ಜನ ನಿಂದೆಗೆ ಪಾತ್ರಳಾಗುತ್ತಾಳೆ, ರೋಗಿಷ್ಟಳಾಗುತ್ತಾಳೆ. ಯಶೋಧರ ಚರಿತೆ ಅಪರೂಪದ ಕಾವ್ಯ ಎನ್ನುವುದರಲ್ಲಿ ಎರಡು ಮಾತಿಲ್ಲ.

ಅನಂತನಾಥ ಪುರಾಣ ಹದಿನಾಲ್ಕನೆಯ ಜಿನನಾದ ಅನಂತನಾಥನ ಕತೆಯಿಂದ ಕೂಡಿದೆ. ಸುಪ್ರಭ, ಪುರುಷೋತ್ತಮರೆಂಬ ಬಲದೇವ, ವಾಸುದೇವರ ಚರಿತ್ರೆಯೂ ಮಧುಕೈಟಭನ ಚರಿತ್ರೆಯೂ ಬಂದಿದೆ. ಅರಿಷ್ಟಪುರದ ಪದ್ಮರಥ ಲಕ್ಷ್ಮೀಮತಿಯರಿಗೆ ವೇಘರಥ ಮಗನಾಗಿ ಹುಟ್ಟುತ್ತಾನೆ. ಒಮ್ಮೆ ಉಲ್ಕಾಪಾತವನ್ನು ಕಂಡು ವೈರಾಗ್ಯ ಹೊಂದಿ ದೀಕ್ಷೆ ಪಡೆದು ತಪಸ್ಸಿನ ನಂತರ ದೇಹ ತ್ಯಜಿಸಿ ಅಚ್ಯುತ ಕಲ್ಪದಲ್ಲಿ ದೇವನಾಗಿ ಹುಟ್ಟುತ್ತಾನೆ. ಸಿಂಹಸೇನ ಜಯಶ್ಯಾಮ ದೇವಿಯರಲ್ಲಿ ಅನಂತನಾಥನೆಂಬ ಹದಿನಾಲ್ಕನೆಯ ಜಿನನಾಗಿ ಹುಟ್ಟುತ್ತಾನೆ. ಇಲ್ಲಿ ಭವಾವಳಿಗಳ ಗೊಂದಲವಿಲ್ಲ.

ಕಾವ್ಯದ ಹಿನ್ನೆಲೆಗೆ ಹೊಂದಿಕೊಂಡಂತೆ ವಸುಷೇಣ, ಸುನಂದೆ ಮತ್ತು ಚಂಡಶಾಸನರ ಕತೆ ಬರುತ್ತದೆ. ಯಶೋಧರ ಚರಿತೆಯಲ್ಲಿ ಗಂಡನಿಂದ ದೂರಾದ ಪತ್ನಿಯ ಪ್ರೇಮವಿದ್ದರೆ ಅನಂತನಾಥ ಪುರಾಣದಲ್ಲಿ ಗಂಡನಿಗಾಗಿ ಪ್ರಾಣ ನೀಡುವ ಹೆಣ್ಣಿನ ಕತೆಯನ್ನು ಹೇಳಿದ್ದಾನೆ. ಚಂಡಶಾಸನನ ದುಷ್ಕಾರ್ಯ, ಸುನಂದೆಯ ಪತಿಪ್ರೇಮವನ್ನು ಜನ್ನ ಅದ್ಭುತವಾಗಿಯೇ ಚಿತ್ರಿಸಿದ್ದಾನೆ. ಚಂಡಶಾಸನ ಸ್ನೇಹಿತನ ಪತ್ನಿಯನ್ನು ಮೋಹಿಸಿದ್ದು ಸರಿಯಲ್ಲವಾದರೂ ಅವಳಿಗಾಗಿ ಪ್ರಾಣ ನೀಡುವಷ್ಟು

ಪ್ರೀತಿ ಅವನದು. ಅವನ ವರ್ತನೆ ಬರೀ ಮೋಹ ಎಂದು ತೀರ್ಮಾನಿಸಲಾಗದು. ಮನುಷ್ಯ ಜೀವನದ ಮೂಲವಾದ ಕಾಮವನ್ನು ಅದರ ಭಾವನಾರೂಪದ ಪ್ರೇಮವನ್ನು ಜನ್ನ ಚಿತ್ರಿಸಿರುವುದರಲ್ಲಿ ಅದ್ವಿತೀಯ. ಅಮೃತಮತಿ, ಚಂಡಶಾಸನರ ಪಾತ್ರಗಳಲ್ಲಿ ಕಾಮ ಮೋಹಗಳ ಚಿತ್ರಗಳನ್ನು ತದೇಕತೆಯಿಂದ ನಿರೂಪಿಸಿದ್ದಾನೆ.

**ಆಂಡಯ್ಯ**

ಆಂಡಯ್ಯ ಕನ್ನಡ ಭಾಷೆಯನ್ನು ಕಾವ್ಯದಲ್ಲಿ ಬಳಸುವುದರ ಬಗ್ಗೆ ತನ್ನದೇ ಆಲೋಚನೆಯನ್ನು ತಳೆದು ಅದಕ್ಕೊಂದು ಕಾವ್ಯದಲ್ಲಿ ರೂಪುವನ್ನು ಕೊಟ್ಟು ಮಹತ್ವದ ಪ್ರಸಿದ್ಧಿ ಗಳಿಸಿದವನು. ಕ್ರಿ.ಶ. 1217 ರಲ್ಲಿ ಜೀವಿಸಿದ್ದ ಜೈನ ಕವಿಯಾದ ಅಂಡಯ್ಯ ಕನ್ನಡ ನಾಡಿನ ಸೌಂದರ್ಯದ ಬಗ್ಗೆ ಹೆಮ್ಮೆಯನ್ನಿಟ್ಟುಕೊಂಡಿದ್ದವನು. ಕದಂಬರ ರಾಜ ಕಾಮದೇವನ ಆಶ್ರಯದಲ್ಲಿದ್ದವನು. ಕಾಮದೇವನ ವೀರ ಪರಾಕ್ರಮಗಳನ್ನು ತನ್ನ ಕೃತಿಯಲ್ಲಿ ವರ್ಣಿಸಿದ್ದಾನೆ. ಕಾವ್ಯಕ್ಕೆ ಮೊದಲಿದ್ದ ಹೆಸರು 'ಕಾವನ ಗೆಲ್ಲ' ಎಂದು. ನಂತರ 'ಮದನ ವಿಜಯ'ವಾಗಿ ಆನಂತರ 'ಸೊಬಗಿನ ಸುಗ್ಗಿ' ಯಾಗಿ ಪ್ರತಿಕಾರರ ಪ್ರಮಾದದಿಂದ 'ಕಬ್ಬಿಗರ ಕಾವ್ಯ' ಹೆಸರು ಬಂದಿದೆಯೆನ್ನುತ್ತಾರೆ. ಶಿವನು ಕಾಮನನ್ನು ಸುಟ್ಟ ಪೌರಾಣಿಕ ಕತೆ. ಶಿವ ಮುಂದೆ ಗಿರಿಜೆಯನ್ನು ಮದುವೆಯಾದ. ಇದರ ಪ್ರೇರಣೆಯಿಂದ ಕಾವ್ಯ ರಚನೆಯಾಗಿದೆ. ಶಿವನು ಮದನನಿಂದ ಸೋತಂತೆ, ಮನ್ಮಥ ಸೋತದ್ದು ಜಿನನಿಗಾಗಿ ಎಂದು ಹೇಳಿ ಧರ್ಮ ಪ್ರೇಮವನ್ನು ತೋರಿಸುತ್ತಾನೆ.

ತನ್ನ ಕಾವ್ಯದಲ್ಲಿ ಸಂಸ್ಕೃತ ಪದಗಳನ್ನು ಬಳಸದೇ ಕನ್ನಡ ಶಬ್ದಗಳಿಂದಲೇ ರಚಿಸುವ ಪಣತೊಟ್ಟು ಯಶಸ್ವಿಯಾದವನು. ತದ್ಭವ ಪದಗಳನ್ನು ಹೇರಳವಾಗಿ ಬಳಸಿದ್ದಾನೆ. ಇದರಿಂದಾಗಿ ಭಾಷಾ ಬಳಕೆಯ ಮಡಿವಂತಿಕೆಯನ್ನು ಕಾಣುತ್ತೇವೆ.

ಕಬ್ಬಿಗರ ಕಾವ, ಪುರಾಣದ ಕತೆಯನ್ನು ಜಿನಧರ್ಮದ ನೆಲೆಯಲ್ಲಿ ಕಾಣುತ್ತೇವೆ. ಶಿವನ ತಪಸ್ಸನ್ನು ಕೆಡಿಸಲು ಬಂದ ಮನ್ಮಥ ಶಿವನಿಂದ ಹತನಾದ, ಆದರೆ ಜಿನ ಕಾಮನನ್ನು ಗೆದ್ದ ಎನ್ನುವಂತೆ ಬದಲಾಯಿಸಿಕೊಳ್ಳುತ್ತಾನೆ.

ಹೂವಿನ ನಗರದ ರಾಜ ನೆನೆಯಂಬ. ಅವನಿಗೆ ವಸಂತ ಋತುವಿನ ಒಂದು ದಿನ ಕನಸು ಬೀಳುತ್ತದೆ. ಆ ಕನಸನ್ನು ತನ್ನ ಮೇಳದ ಗೆಳೆಯನಿಗೆ (ನಗೆಗಾರ) ಹೇಳುತ್ತಾನೆ. ಈ ಕನಸು ನನಸಾಗುತ್ತದೆಂದು ನಗೆಗಾರ ಹೇಳುತ್ತಾನೆ. ಒಂದು ದಿನ ದೊರೆ ಉದ್ಯಾನವನದಲ್ಲಿ ಸಂಚರಿಸುತ್ತಿರುವಾಗ ಸುಂದರಿಯೊಬ್ಬಳು ಮರದಡಿಯಲ್ಲಿ ವನದೇವತೆಯಂತೆ ನಿಂತಿರುತ್ತಾಳೆ. ನೆನೆಯಂಬನಿಗೆ ಆ ಹೆಣ್ಣು ಭೂಮಿಯವಳಾಗಿರದೆ ಸ್ವರ್ಗದವಳಿರಬೇಕು ಎಂದುಕೊಳ್ಳುತ್ತಾನೆ. ನಂತರ ಅವಳ ವಿಚಾರವನ್ನು ತಿಳಿಸಬೇಕೆಂದಾಗ ತನ್ನ ಪೂರ್ವಕತೆಯನ್ನು ತಿಳಿಸುತ್ತಾಳೆ.

ಕಂಪಿನ ಪೊಳಲು ಎಂಬ ನಾಡಲ್ಲಿ ಕರ್ವುರವಿಲ ರಾಜ, ಇಚ್ಛೆಗಾರ್ತಿ ಅವನ ಹೆಂಡತಿ. ಅವಳು ಅತ್ಯಂತ ಸುಂದರಿ. ಅವಳ ಮುಖಕಾಂತಿಯನ್ನು ನೋಡಿ ಚಂದ್ರನೇ ತನ್ನಲ್ಲಿ ಕಪ್ಪು ಕಲೆಯನ್ನಿಟ್ಟುಕೊಂಡನೆಂದ ಮೇಲೆ ಉಳಿದವರು ಅವಳ ಮುಖವನ್ನು ವರ್ಣಿಸಲು ಸಾಧ್ಯವೇ ಎನ್ನುವಂತಿತ್ತು. ಅವರಿಬ್ಬರೂ ಅತ್ಯಂತ ಅನ್ಯೋನ್ಯತೆಯಿಂದ ಬಾಳುತ್ತಿರುತ್ತಾರೆ. ಒಂದು ದಿನ ಆಸ್ಥಾನಕ್ಕೆ ತಂಬೆಲರು ಜೊನ್ನಮನುಣ್ಬ ಹಕ್ಕಿಯೆಂಬ ದೂತಿಯೊಬ್ಬಳನ್ನು ಕರೆತರುತ್ತಾನೆ. ಅವಳು ರಾಜನನ್ನು ಕುರಿತು ಕೆಳಗಿನಂತೆ ಹೇಳುತ್ತಾಳೆ.

ನಿನಗೆಂದು ತಲೆವಾಗದ
ನಿನಗಳ್ಕದ ನಿನ್ನ ವೇಳೆಗಾಯದ ಪಿರಿದುಂ
ನಿನಗೆ ಬೆಸಕಯ್ದು ಬಾವಿದ
ನಿನಗೋಡದ ಪಗೆದರೆಂಬರಿಲ್ಲಿಂದುವರಂ (ಕ.ಕಾ. 114)

ನಿನಗೆ ತಲೆಬಾಗದ ಹೆದರದ ಸೇವಕರಾಗದ ನಿನ್ನ ಅಪ್ಪಣೆಯನ್ನು ಪಾಲಿಸದ ನಿನ್ನನ್ನು ಕಂಡರೆ ಹೆದರದ ಶತ್ರುಗಳೇ ಇದುವರೆಗೆ ನಿನಗಿರಲಿಲ್ಲ. ಆದರೆ ಈಗ ಶಿವನೆಂಬ ಗೊರವನು ಮಂಜುಬೆಟ್ಟವನ್ನೇ ಆವಾಸವನ್ನಾಗಿ ಮಾಡಿಕೊಂಡು ಸನ್ಯಾಸಿಗಳನ್ನು, ಪ್ರೇತಗಳನ್ನು ಪರಿವಾರವನ್ನಾಗಿ ಮಾಡಿಕೊಂಡು ನಿಮ್ಮನ್ನ ಗಮನಿಸದೆ ಮೆರೆಯುತ್ತಿದ್ದಾನೆ. ಹಿಂದಿನ ರಾತ್ರಿ ಯುದ್ಧ ಮಾಡಿ ಚಂದ್ರನನ್ನು ಸಜೀವವಾಗಿ ಸೆರೆಹಿಡಿದಿದ್ದಾನೆ ಎಂದು ಹೇಳುತ್ತಾಳೆ.

ಇದನ್ನು ಕೇಳಿದ ರಾಜನಿಗೆ ಕೋಪ ಬಂದು ನನ್ನನ್ನು ಮಾರಿಯನ್ನು ಎದುರಿಸುವವರಾರಿದ್ದಾರೆ ? ಈಗಲೇ ಹೋಗಿ ಈಶ್ವರನನ್ನು ಇಕ್ಕಿಮೆಟ್ಟಿ, ಅವನ ಜಡೆಯನ್ನು ಕಿತ್ತು ಚಂದ್ರನನ್ನು ಕರೆ ತರುತ್ತೇನೆ ಎಂದು ಹೊರಡುತ್ತಾನೆ. ಆದರೆ ವಸಂತನು ಬಂದು ಮೊದಲು ಶಿವನ ಹತ್ತಿರ ಸಂಧಾನಕ್ಕಾಗಿ ದೂತನನ್ನು ಕಳಿಸಬೇಕೆಂದಾಗ ತಂಗಾಳಿಯನ್ನು ಆ ಕಾರ್ಯಕ್ಕೆ ನೇಮಿಸುತ್ತಾನೆ. ತಂಗಾಳಿ ಶಿವನ ಹತ್ತಿರ ಬಂದು ಜಗತ್ತಿನಲ್ಲಿ ವೀರರಾದವರು ಅವನನ್ನು ಬಿಟ್ಟರೆ ಮತ್ತ್ಯಾರು ಇಲ್ಲ. ನೀವು ಅವನೊಂದಿಗೆ ಗೆಳೆತನ ಬಯಸುವುದು ಪುಣ್ಯ. ಚಂದ್ರನನ್ನು ಸೆರೆಯಿಂದ ಬಿಡಿಸಿ ಎಂದು ಹೇಳುತ್ತಾನೆ. ಶಿವ ಕೋಪಗೊಂಡರೂ ತೋರಿಸುವುದಿಲ್ಲ. ಮನ್ಮಥನನ್ನು ಜರೆಯುತ್ತಾನೆ. ಅವನನ್ನು ಯುದ್ಧಕ್ಕೆ ಆಹ್ವಾನಿಸುತ್ತಾನೆ. ಯುದ್ಧಕ್ಕೆ ಸಾಗುವಾಗ ಜೈನ ಸನ್ಯಾಸಿ ವಿಚಲಿತನಾಗದ್ದನ್ನು ಕಂಡು ಕೋಪಗೊಳ್ಳುತ್ತಾನೆ. ಆದರೆ ವಸಂತನ ಬುದ್ಧಿಮಾತಿನಿಂದ ಅವರಿಗೆ ನಮಸ್ಕರಿಸಿ ಶಿವನನ್ನು ಗೆಲ್ಲಲು ಮುಂದು ಹೋಗುತ್ತಾನೆ. ಶಿವನ ಸೃಷ್ಟಿಸಿದ ಸೈನಿಕರನ್ನು ಅಂಡಯ್ಯ ಕೆಳಗಿನಂತೆ ವರ್ಣಿಸುತ್ತಾನೆ.

ಕೆಲಬರ್ ಬಟ್ಟೆಯ ಬೆಟ್ಟನಾರ್ದೊಡೆದು ಸೆಂಡಾಡುತ್ತಾಂ ಎಕ್ಕೆಕ್ಕೆಯಿಂ
ಕೆಲಬರ್ ಸಿಂಗಮನೊತ್ತಿ ಪಲ್ಲಣಿಸಿ ಬಲ್ಪಿಂದೇಮಿತುಂ ಬೇಗದಿಂ
ಕೆಲಬರ್ ಪೆರ್ಚಿದ ನೇಸರಂ ನೊಣೆಯುತುಂ ಕೈನೀಡಿ ಮುನ್ನೀರ್ಗಳಂ
ಕೆಲಬರ್ ಪೀರ್ದರೆ ಮಾಡುತಂ ನಡೆದೆತ್ತಂ ಬೀರರಾ ಪಾಡಿಯೊಳ್.

ಬೆಟ್ಟವನ್ನೇ ಚೆಂಡಾಗಿಸಿಕೊಂಡು, ಸಿಂಹಕ್ಕೆ ಹಲ್ಲಣ ಹಾಕಿ ಸವಾರಿ ಮಾಡುತ್ತ ಕೆಲವರು ಸೂರ್ಯನನ್ನೇ ನುಂಗುತ್ತ ಸಮುದ್ರವನ್ನೇ ಕುಡಿಯುತ್ತಿದ್ದರು. ನನೆಯಂಬ ವೀರಭದ್ರನನ್ನು ಸೋಲಿಸಿ ಮಂಜುಬೆಟ್ಟವನ್ನು ಮುತ್ತುತ್ತಾನೆ. ಹೂಬಾಣಗಳನ್ನು ಬಿಡುತ್ತಾನೆ. ರಾಕ್ಷಸರು ಧೈರ್ಯಗೆಟ್ಟರು, ಸಗ್ಗಿಗರು ನೆಲವನ್ನು ಸೇರಿದರು. ಆಗ ಕಾಮಬಾಣಗಳು ನಾಟಿ ಶಿವನು ಅರೆವಣ್ಣಾಗುತ್ತಾನೆ. ಇದರಿಂದ ಕೋಪಗೊಂಡ ಶಿವ ಶಾಪ ನೀಡುತ್ತಾನೆ. ನೀನು ನಿನ್ನ ಮನಃಪ್ರಿಯೆಯನ್ನು ಸೇರದೆ ಇತರರಿಗೆ ತಿಳಿಯದಂತೆ ಎಲ್ಲಿಯಾದರೂ ಮರೆಯಾಗಿರು ಎಂದು. ಈ ಶಾಪ ವಸಂತನಿಂದ ಇಚ್ಛೆಗಾರ್ತಿಗೆ ತಿಳಿದು ಮೂರ್ಛೆ ಹೋಗುತ್ತಾಳೆ. ಗಿಳಿ, ದುಂಬಿ, ಕೋಗಿಲೆ, ಹಂಸಗಳನ್ನು ತನ್ನ ಪತಿಯನ್ನು ತೋರಿಸುವಂತೆ ಬೇಡಿಕೊಳ್ಳುತ್ತಾಳೆ. ಇದನ್ನು ಕೇಳಿದ ಅಪ್ಸರ ಸ್ತ್ರೀಯೊಬ್ಬಳು ಕಾಮನೇ ನೆನೆಯಂಬ ಎಂದು ಹೇಳಿ, ಇದರಿಂದ ಶಾಪ ಪರಿಹಾರವಾಯಿತೆನ್ನುತ್ತಾಳೆ. ಇದನ್ನು ಕೇಳಿದ ಗಿಳಿ ವಸಂತನಿಗೆ ವಿಷಯವನ್ನು ತಿಳಿಸುತ್ತದೆ. ವಸಂತನಿಂದ ಇಚ್ಛೆಗಾರ್ತಿಗೆ ವಿಷಯ ತಿಳಿದು ಪುಳಕಗೊಳ್ಳುತ್ತಾಳೆ. ಇಡೀ ಊರಿನ ಜನ ಅವನನ್ನು ಸ್ವಾಗತಿಸಿ ಸಂಭ್ರಮಗೊಳ್ಳುತ್ತಾರೆ.

270 ಪದ್ಯಗಳಲ್ಲಿ ಸರಳ ಕತೆಯನ್ನು ನೇರವಾಗಿ ಹೇಳುವ ಖಂಡಕಾವ್ಯ, ಮಹಾಕಾವ್ಯಕ್ಕಿರುವ ವಸ್ತುವಾಗಲೀ, ವಿಸ್ತಾರವಾಗಲೀ, ಗತ್ತಾಗಲೀ ಇಲ್ಲ. ಹೊರನೋಟಕ್ಕೆ ವೀರರಸವಿರುವಂತೆ ಕಂಡರೂ ಕಾಮದ ಬಲ್ಮೆಯನ್ನು ಸೂಚಿಸುತ್ತದೆ. ದೇಹಬಲವನ್ನಲ್ಲ. ಇದೊಂದು ಲಲಿತಕಾವ್ಯ. ಅರ್ಧನಾರೀಶ್ವರನ ಕಲ್ಪನೆಯಲ್ಲಿ ಕಾಮದ ಅದಮ್ಯ ಶಕ್ತಿಯನ್ನು ಕಂಡುಕೊಂಡಿದ್ದಾನೆ. ಜೈನ ಪುರಾಣದಲ್ಲಿ ಕಾಮನಿಗೆ ಶ್ರೇಷ್ಠ ಸ್ಥಾನವಿರುವುದರಿಂದ ಅವನ ಶ್ರೇಷ್ಠತೆಯನ್ನು ಸೂಚಿಸುವುದು ಅವನನ್ನು ಗೆದ್ದ ಜಿನ ಪಾರಮ್ಯವನ್ನು ಸೂಚಿಸುವುದು ಇಲ್ಲಿಯ ವಿಶೇಷತೆ.

ಇವನ ಶೈಲಿ ಸರಳ, ಸುಲಲಿತ, ಅಚ್ಚಗನ್ನಡದ ವ್ರತವನ್ನು ಕೈಗೊಂಡು ಆಶ್ರಯದಾತನ ಕತೆಯೊಂದಿಗೆ ಸ್ವತಂತ್ರ ಕತೆಯನ್ನು ಪೌರಾಣಿಕ ಹಿನ್ನೆಲೆಯಲ್ಲಿ ಸೃಷ್ಟಿಸಿಕೊಂಡದ್ದು ಈ ಕವಿಯ ಸ್ವಂತಿಕೆಗೆ ಸಾಕ್ಷಿ. ಭಾಷೆ ಮತ್ತು ನಾಡಿನ ಬಗ್ಗೆ ವಿಶೇಷವಾದ ಅಭಿಮಾನ ಇದೊಂದು ಚೊಕ್ಕದಾದ ಕಾವ್ಯ. ಆ ಕಾಲದ ಅತಿರೇಕದ ಸಂಸ್ಕೃತ ವ್ಯಾಮೋಹಕ್ಕೆ ಪ್ರತಿಭಟನೆಯಾಗಿ ಬಂದು ವಾಸ್ತವತೆಯೆಡೆಗೆ ಜನರ ಗಮನವನ್ನು ಸೆಳೆಯಲು ಸಹಾಯ ಮಾಡಿದೆ. ಮುಂದಿನ ಕವಿಗಳ ಭಾಷಾ ಧೋರಣೆಯ ಬಗ್ಗೆಯೂ ಪ್ರಭಾವ ಬೀರಿದ್ದಾನೆ. ಸಂಸ್ಕೃತ ಶಬ್ದಗಳಿಗೂ ತದ್ಭವಗಳನ್ನು

ಬಳಸಿದುದರಿಂದ ಎಷ್ಟೋ ವೇಳೆ ವಿಚಿತ್ರವಾಗಿ ತೋರಿದರೂ, ಓದುಗರನ್ನು ಗೊಂದಲದಲ್ಲಿ ಕೆಡವಿದರೂ ಒಂದು ಅಪೂರ್ವ ಕೃತಿ.

### 1ನೇ ನಾಗವರ್ಮ

ನಾಗವರ್ಮ ಕ್ರಿ.ಶ. 990 ರಲ್ಲಿ ಜನಿಸಿದನೆಂದೂ, ಸುಮಾರು 10ನೇ ಶತಮಾನ ಎಂದೂ ವಾದಗಳಿವೆ. ಇವನ ಕಾಲ ಮತ್ತು ದೇಶಗಳ ವಿಚಾರದಲ್ಲಿ ನಿರ್ಣಾಯಕವಾದ ಯಾವ ಆಧಾರವೂ ಸಿಕ್ಕಿಲ್ಲ. ಅಲ್ಲದೆ ನಾಗವರ್ಮನೆಂಬ ಹೆಸರಿನ ಕವಿಗಳು ಮೂರು ಜನರಿದ್ದಾರೆ ಎಂಬ ವಿಚಾರವೂ ಚರ್ಚೆ ನಡೆದಿದೆ. ಇವರಲ್ಲಿ 1ನೇ ನಾಗವರ್ಮ ಎಂಬ ಹೆಸರಿನ ಕವಿ 'ಕರ್ಣಾಟಕ ಕಾದಂಬರಿ' ಎಂಬ ಚಂಪೂ ಕಾವ್ಯವನ್ನೂ 'ಕರ್ನಾಟಕ ಛಂದೋಂಬುದಿ' ಎಂಬ ಛಂದಶಾಸ್ತ್ರ ಗ್ರಂಥವನ್ನು ಬರೆದಿದ್ದಾನೆ. 2ನೇ ನಾಗವರ್ಮ ವರ್ಧಮಾನ ಪುರಾಣ, ವಸ್ತುಕೋಶ, ಕಾವ್ಯಾವಲೋಕನ, ಭಾಷಾ ಭೂಷಣ ಗ್ರಂಥಗಳನ್ನು ರಚಿಸಿದ್ದಾನೆ. 3ನೇ ನಾಗವರ್ಮ 'ಚೂಡಾಮಣಿ' ಶತಕವನ್ನು ರಚಿಸಿದ್ದಾನೆ. 1ನೇ ನಾಗವರ್ಮ ಛಂದೋಂಬುದಿಯಲ್ಲಿ ತನ್ನ ಸ್ವವಿಷಯವನ್ನು ಹೇಳಿಕೊಂಡಿರುವುದರ ಹಿನ್ನೆಲೆಯಲ್ಲಿ ಅವನ ವಂಶಾವಳಿ ಈ ರೀತಿ ಇದೆ.

ವೆಂಗಿಪಳು ಗ್ರಾಮ
↓
ಕೌಂಡಿನ್ಯ ಗೋತ್ರ
ವೆಣ್ಣಮಯ್ಯ + ಕೌಂಡಿಮಬ್ಬೆ
(ವಿದ್ವಾಂಸ) ↓
ದಾಮಯ್ಯ + ಕುಂದಬ್ಬೆ
↓
ವೆಣ್ಣಮಯ್ಯ + ಪೋವಿಕಬ್ಬೆ
(ಪಂಡಿತ) ↓
1ನೇ ನಾಗವರ್ಮ

ಇವನು ಪಂಪ, ರನ್ನ, ಪೊನ್ನರಂತೆಯೇ ವ್ಯಕ್ತಿತ್ವ ಹೊಂದಿದವನಾದರೂ ಗ್ರಂಥ ವಿಷಯದಲ್ಲಿ ಬೇರೆಯಾಗಿದ್ದಾನೆ. ಆದ್ದರಿಂದ ಒಂದು ಛಂದಃಶಾಸ್ತ್ರ ಇನ್ನೊಂದು ಅನುವಾದ ಗ್ರಂಥವನ್ನು ರಚಿಸಿದ್ದಾನೆ. ಧಾರ್ಮಿಕ ವಿಷಯವನ್ನು ಆರಿಸಿ ಕನ್ನಡದಲ್ಲಿ ಗ್ರಂಥ ಬರೆಯಲು ಅವನ ಮನಸ್ಸು ಒಪ್ಪದ ಕಾರಣ ಲೌಕಿಕ ವಿಷಯಕ್ಕೆ ಹಾರಿರಬೇಕು. ಇವನು ಬ್ರಾಹ್ಮಣ. ಇವನ ಪೂರ್ವಿಕರು ಬ್ರಾಹ್ಮಣರು ಎಂಬುದು 'ಛಂದೋಂಬುದಿ' ಗ್ರಂಥದಲ್ಲಿ ಕಂಡು ಬರುತ್ತವೆ. ವೆಂಗಿಪಳು ಇವನ ಊರು.

ಗೋವಿಂದ ಪೈ ಅವರು 1ನೇ ನಾಗವರ್ಮನಿಗೂ 2ನೇ ನಾಗಮರ್ವನಿಗೂ ಸುಮಾರು 70 ವರ್ಷಗಳ ಅಂತರವಿದೆ ಎಂದು ಹೇಳುತ್ತಾರೆ. ಸದ್ಯಕ್ಕೆ ಇದನ್ನೇ ವಿದ್ವಾಂಸರು ಒಪ್ಪಿದ್ದಾರೆ.

## ಛಂದೋಂಬುದಿ

ಸುಮಾರು 980 ರಲ್ಲಿ ಅಂದರೆ ಗಂಗ ರಾಚರ ಮಲ್ಲನ ಕಾಲದಲ್ಲಿ ರಚನೆಯಾದ ಕೃತಿ ಛಂದೋಂಬುದಿ. ನಾಗವರ್ಮನ ಯೌವ್ವನದ ಕಾಲದಲ್ಲಿ ಈ ಕೃತಿ ರೂಪು ಪಡೆಯಿತು. ಕನ್ನಡದ ಮೊಟ್ಟಮೊದಲ ಛಂದಶಾಸ್ತ್ರಪರವಾದ ಗ್ರಂಥ ಇದು. ತಮಿಳು ಕವಿಯೊಬ್ಬ 'ಗುಣಗಾಂಕೆಯಂ' ಮೊದಲನೆಯದು ಎಂದು ಉಲ್ಲೇಖಿಸಿದ್ದಾನೆ. ಆದರೆ ಕವಿಚರಿತಕಾರರು ಅದನ್ನು 9ನೇ ಶತಮಾನದ್ದೆಂದು ಹೇಳುತ್ತಾರೆ. ಅದು ನಿಜವಾದರೆ ಅದಕ್ಕೂ ಮೊದಲಿನ ಛಂದೋಗ್ರಂಥ ಇದಾಗುತ್ತದೆ. ಛಂದೋಂಬುದಿ ಯಲ್ಲಿ ನಾಗವರ್ಮನು 'ಕರ್ಣಾಟಕ ವಿಷಯ ಜಾತಿ' ಎಂಬುದನ್ನು ಪ್ರತ್ಯೇಕ ವಿಭಾಗವಾಗಿ ನಿರೂಪಿಸಿದ್ದಾನೆ. ಸಂಸ್ಕೃತ ಛಂದಸ್ಸಿನ ವಿಷಯದಲ್ಲಿ ಪಿಂಗಳನನ್ನು ಅನುಸರಿಸಿದಂತೆ ಕನ್ನಡ ಛಂದಸ್ಸಿನಲ್ಲಿ ಅವನೂ ಪೂರ್ವಿಕರನ್ನು ಅನುಸರಿಸಿರಬಹುದು. 11ನೇ ಶತಮಾನದಲ್ಲಿ ದೊರೆತ ಜಯಕೀರ್ತಿಯ 'ಛಂದೋನುಶಾಸನ'ವೂ ಸಹ ಇಂಥ ಪೂರ್ವ ಪರಂಪರೆಯನ್ನು ಹೇಳುತ್ತದೆ. ಒಟ್ಟಿನಲ್ಲಿ 'ಛಂದೋಂಬುದಿ' ಉಪಲಬ್ಧವಿರುವ ಮೊದಲನೇ ಕನ್ನಡ ಛಂದೋಗ್ರಂಥ ಎನ್ನುವುದರಲ್ಲಿ ಅನುಮಾನವಿಲ್ಲ.

'ಛಂದೋಂಬುದಿ' ಯಲ್ಲಿ ಆತ್ಮವರ್ಣನೆಯ ಪದ್ಯಗಳೂ ಇದ್ದು ನಾಗವರ್ಮ ಬರಿ ಶಾಸ್ತ್ರಕಾರನಲ್ಲದೆ ಸತ್ಕವಿಯೂ ಆಗಿದ್ದನೆಂದು ತಿಳಿಸುತ್ತವೆ. ಇಂಥ ವಿಷಯಗಳ ಅಡಕಗಳಿಂದಲೇ ಬಹುಶಃ ಅವನನ್ನು 'ಕವಿರಾಜ ಹಂಸ' ನೆಂದು ಗುರ್ತಿಸಿಕೊಳ್ಳಲು ಸಾಧ್ಯವಾಗಿದೆ. ಶಾಸ್ತ್ರಕ್ಕೆ ಕಾವ್ಯದ ಸೊಗಸನ್ನು ತರುವುದಕ್ಕಾಗಿ ಅವನು ಛಂದಸ್ಸನ್ನು ತನ್ನ ಸತಿಗೆ ಬಣ್ಣಿಸಿ ನಿರೂಪಿಸಿದ್ದಾನೆ. ಇದನ್ನು ಶಾಸ್ತ್ರದೃಷ್ಟಿಯಿಂದ ಅವಲೋಕಿಸಿದಾಗ ಸರ್ವ ವಿಷಯ ಭಾಷಾ ಜಾತಿ ಮತ್ತು ಕರ್ನಾಟಕ ವಿಷಯ ಜಾತಿ ಹಾಗೂ ಕನ್ನಡ ಛಂದಸ್ಸಿನ ಸ್ವರೂಪ, ಪ್ರಭೇದಗಳ ವಿವರಣೆ ಸಂಕ್ಷಿಪ್ತವಾಗಿದೆ. ಹೀಗಿದ್ದರೂ ಅಧ್ಯಯನ ಯೋಗ್ಯ ಗ್ರಂಥ.

## ಕರ್ನಾಟಕ ಕಾದಂಬರಿ

ಬಾಣ ಮಹಾಕವಿ ರಚಿಸಿದ್ದ ಸಂಸ್ಕೃತ ಗದ್ಯಕೃತಿ ಕಾದಂಬರಿ. ಇದನ್ನು 1ನೇ ನಾಗವರ್ಮನು ಚಂಪೂ ಶೈಲಿಯಲ್ಲಿ ರಚಿಸಿದ್ದಾನೆ. ಅಸಗ ಕವಿಯ ಅನುಪಲಬ್ಧ 'ಕರ್ನಾಟ ಕುಮಾರ ಸಂಭವ ಕಾವ್ಯ' ವನ್ನು ಬಿಟ್ಟರೆ ಇದೇ ಪ್ರಾಚೀನ ಸಂಸ್ಕೃತ ಕಾವ್ಯದ

ಪ್ರಥಮ ಕನ್ನಡ ಅನುವಾದ. ಸಂಸ್ಕೃತದಲ್ಲಿರುವ ಉತ್ತಮ ಸಾಹಿತ್ಯ ಗ್ರಂಥವನ್ನು ಅನ್ಯ ರೀತಿಯಲ್ಲಿ ಕನ್ನಡಿಸಬೇಕೆಂಬ ಆಸೆ ನಾಗವರ್ಮನನ್ನು ಈ ಕೆಲಸಕ್ಕೆ ಎಳೆದಿರಬಹುದು ಮತ್ತು ಪಂಪನ ಲೌಕಿಕ ಗ್ರಂಥ ಸರಣಿಯನ್ನು ಇವನೂ ಅನುಸರಿಸಿದ್ದಾನೆ. ನರಪತಿಯಾದ ಚಂದ್ರನ ವರ್ಣನೆಯನ್ನು ಚಂದ್ರಾಪೀಡ ಸಾದೃಶ್ಯದಿಂದ ಮಾಡುವುದು ಅವನಿಗೆ ಇಷ್ಟವಿದ್ದಂತೆ ತೋರುತ್ತದೆ. ಪಂಪಯುಗದಲ್ಲಿ ಕಾದಂಬರಿಯಂತಹ ಒಂದು ಶೃಂಗಾರ ಕಾವ್ಯ ಮೂಡಿ ಬಂದಿರುವುದೇ ಒಂದು ಆಶ್ಚರ್ಯದ ಸಂಗತಿ.

ಕಾದಂಬರಿಯ ನಿರೂಪಣಾ ಶೈಲಿಯೇ ಭಿನ್ನವಾದುದು. ಕಥೆಯ ಸಂವಿಧಾನ ವಿಚಿತ್ರವಾದುದಾಗಿದೆ. ಇದರಲ್ಲಿಯ ಕಥೆ ಒಂದು ಪಾತ್ರದ ಬಾಯಿಂದ ಮತ್ತೊಂದು ಪಾತ್ರಕ್ಕೆ, ಅಲ್ಲಿಂದ ಇನ್ನೊಂದು ಪಾತ್ರದ ಬಾಯಿಗೆ ಹರಿದು ಹೋಗುತ್ತಿರುತ್ತದೆ. ಹಾಗೆಯೇ ಕಥೆಯೊಳಗೆ ಕತೆ. ಅದರೊಳಗೆ ಮತ್ತೊಂದು ಕತೆಯನ್ನು ಅಡಕ ಮಾಡಿ ಹೇಳುವ ತಂತ್ರ ಅದ್ಭುತವಾದದ್ದು. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಮೂಲದಿಂದ ದೂರ ಹೋಗದೆ ಹಾಗೂ ಭಾಷಾಂತರದಿಂದ ತೀರ ಹತ್ತಿರಕ್ಕೂ ಹೋಗದೆ ನಾಗವರ್ಮ ಒಂದು ನಡುದಾರಿಯನ್ನು ನಿರ್ಮಿಸಿಕೊಂಡಿದ್ದಾನೆ. ಮೂಲದ ಕಥಾನಕ ಸಾರ, ಪಾತ್ರಗಳ ಜೀವಾಳ, ವರ್ಣನೆಗಳ ಸ್ವಾರಸ್ಯ ಮುಂತಾದವುಗಳಿಗೆ ಕುಂದು ಬಾರದಂತೆ, ಅದನ್ನು ಮನಸ್ಸಿನಲ್ಲಿಟ್ಟುಕೊಂಡು ತಾನೇ ಸ್ವತಂತ್ರವಾಗಿ ರಚಿಸಿದಂತೆ ಸರಳ ಲಲಿತವಾಗಿ ಬರೆದಿದ್ದಾನೆ.

ಕಾದಂಬರಿ ಎಂಬ ಕಾವ್ಯದ ಹೆಸರು ಇಲ್ಲಿಯ ಕಥಾನಾಯಕಿಯ ಹೆಸರು. ಈ ಕಾದಂಬರಿಗೂ ಚಂದ್ರಾಪೀಡನೆಂಬ ರಾಜಕುಮಾರನಿಗೂ ನಡೆದ ಪ್ರಣಯ ವ್ಯಾಪಾರವೇ ಈ ಕಾವ್ಯದ ವಸ್ತು. ಈ ಮುಖ್ಯ ಕಥೆಯೊಡನೆ ಪುಂಡರೀಕನೆಂಬ ಋಷಿಕುಮಾರ ಹಾಗೂ ಮಹಾಶ್ವೇತೆಯೆಂಬ ಅಪ್ಸರ ಕನ್ಯೆಯ ಪ್ರಣಯ ಕಥೆಯೂ ಸೇರಿಕೊಂಡು ಕಥಾಹಂದರ ಸುವಿಸ್ತಾರವಾಗುತ್ತದೆ. ಪುಂಡರೀಕನು ಮಹಾಶ್ವೇತೆಯನ್ನು ಮೋಹಿಸಿ, ಆ ಮೋಹದ ವಿರಹ ವೇದನೆಯನ್ನು ತಾಳಲಾರದೆ ಅದರ ಉಲ್ಬಣಕ್ಕೆ ಕಾರಣನಾದ ಚಂದ್ರನನ್ನು ಶಪಿಸುತ್ತಾನೆ. ಅಂದರೆ ಅವನಿಗೆ ಮೂರು ಜನ್ಮಗಳಲ್ಲಿ ಮಾನವನಾಗಿ ಹುಟ್ಟುವಂತೆ ಶಾಪಕೊಡುತ್ತಾನೆ. ಅದಕ್ಕೆ ಪ್ರತಿಯಾಗಿ ಚಂದ್ರನೂ ಶಾಪ ಕೊಡುತ್ತಾನೆ.

ಹೀಗೆ ಪುಂಡರೀಕನ ಶಾಪದಿಂದ ಚಂದ್ರಾಪೀಡನಾಗಿ ಹುಟ್ಟಿದ ಚಂದ್ರನು ಕಾದಂಬರಿ ಎನ್ನುವ ಕನ್ಯೆಯನ್ನು ಮೋಹಿಸಿ ಅವಳನ್ನು ವಿವಾಹವಾಗುವ ಮುನ್ನವೇ ಅವನ ಪ್ರೀತಿಯ ಸ್ನೇಹಿತನಾದ ವೈಶಂಪಾಯನನ ಮರಣ ವಾರ್ತೆಯನ್ನು ಕೇಳಿ ದೇಹ ತ್ಯಾಗ ಮಾಡುತ್ತಾನೆ. ಹೀಗೆ ದೇಹ ತ್ಯಾಗ ಮಾಡಿದ ಚಂದ್ರಾಪೀಡನು ಮತ್ತೆ

ರಾಜಕುಮಾರನಾಗಿ ಹುಟ್ಟುತ್ತಾನೆ. ಹೀಗೆ ತನ್ನ ಶಾಪ ವಿಮೋಚನೆಯಾದ ನಂತರ ತನ್ನ ಮೂಲದ ಚಂದ್ರಾಪೀಡನ ದೇಹವನ್ನು ಹೊಕ್ಕು ಕಾದಂಬರಿಯನ್ನು ಪಡೆಯುತ್ತಾನೆ. ಇತ್ತ ಶಾಪಗ್ರಸ್ತ ಪುಂಡರೀಕ ಚಂದ್ರಾಪೀಡನ ಗೆಳೆಯನಾದ ವೈಶಂಪಾಯನನಾಗಿ ಹುಟ್ಟಿ, ಹಿಂದಿನ ಜನ್ಮದ ಸ್ಮರಣೆಯಿಂದ ಮಹಾಶ್ವೇತೆಯನ್ನು ಮತ್ತೆ ಮೋಹಿಸುತ್ತಾನೆ. ಈ ವೇಳೆಗೆ ಮಹಾಶ್ವೇತೆ ತನ್ನ ಪ್ರಿಯಕರನನ್ನು ಮರೆತು ತಪಸ್ಸಿನಲ್ಲಿ ನಿರತಳಾಗಿರುತ್ತಾಳೆ. ಅಲ್ಲಿಗೆ ಬಂದ ವೈಶಂಪಾಯನನ್ನು ಪರಪುರುಷನೆಂದು ತಿಳಿದು ಗಿಳಿಯಾಗಿ ಹುಟ್ಟುವಂತೆ ಶಪಿಸುತ್ತಾಳೆ. ಗಿಳಿಯಾಗಿ ಹುಟ್ಟಿದ ನಂತರ ಶಾಪವಿಮುಕ್ತನಾಗಿ ಪುಂಡರೀಕನ ದೇಹವನ್ನು ಹೊಕ್ಕು ಮತ್ತೆ ಮಹಾಶ್ವೇತೆಯನ್ನು ವಿವಾಹವಾಗುತ್ತಾನೆ.

ಹೀಗೆ ನಾಗವರ್ಮನು ಬಾನು ಭೂಮಿಗೆ ಒಂದು ರಸಸೂತ್ರವನ್ನು ನಿರ್ಮಿಸಿದನೆಂದು ಹೇಳಬಹುದು. ಕಾದಂಬರಿಯು ಗಂಡು ಹೆಣ್ಣಿನ ಪ್ರಣಯ ವ್ಯಾಪಾರವನ್ನು ಮನೋಹರವಾಗಿ ಚಿತ್ರಿಸಿದೆ. ಸಂಸ್ಕೃತದಲ್ಲಿ ಸಮಾಸ ಭೂಯಿಷ್ಠವಾದ ಗದ್ಯ ಕೃತಿಯೊಂದನ್ನು ಕನ್ನಡದಲ್ಲಿ ಮೇರು ಶೃಂಗಾರ ಕಾವ್ಯವನ್ನಾಗಿ ಮಾಡಿದ ಕೀರ್ತಿ ನಾಗವರ್ಮನ ಪ್ರತಿಭೆಗೆ ಹಿಡಿದ ಕನ್ನಡಿ. ''ಬಾಣನ ವಾಣಿ ಧೋ ಧೋ ಎಂದು ಸುರಿಯುವ ಮೋಡವಾದರೆ, ನಾಗವರ್ಮನ ಕಲೆ ಆ ಮೋಡ ಸುರಿದ ಮಳೆ ನೀರನ್ನು ಕೆರೆಯಲ್ಲಿ ಹಿಡಿದು ಕಂದ, ವೃತ್ತವಚನಗಳ ಮಡುಗಳಲ್ಲಿ ಹರಿದು ಬಿಡುವ ತೋಟಿಗನ ಕೈವಾಡವಾಗಿದೆ' ಎಂದು ರಂ.ಶ್ರೀ. ಮುಗಳಿ ಹೇಳುತ್ತಾರೆ. ಒಟ್ಟಾರೆ ನಾಗವರ್ಮನ ಕಾದಂಬರಿ ಅನುವಾದವಾದರೂ ಸ್ವತಂತ್ರ ಕೃತಿಯ ಸತ್ವವುಳ್ಳದ್ದಾಗಿ ಕನ್ನಡ ಸಾಹಿತ್ಯದ ಅವಸಾನವಿಲ್ಲದ ಮೌಲ್ಯಗ್ರಂಥಗಳಲ್ಲಿ ಒಂದಾಗಿದೆ.

**ಷಡಕ್ಷರದೇವ**

ಹದಿನೇಳನೆಯ ಶತಮಾನದಲ್ಲಿ ಚಂಪೂಕಾವ್ಯ ರಚನೆಯ ಮೂಲಕ ಉತ್ತಮ ಕವಿಯೆನಿಸಿಕೊಂಡವನು. ಇವನ ಕೃತಿ ರಚನೆಯ ಹಿನ್ನೆಲೆಯಲ್ಲಿ ಹದಿನೇಳನೆಯ ಶತಮಾನವೆಂದು ಗುರುತಿಸುತ್ತಾರೆ. ಮೈಸೂರು ಜಿಲ್ಲೆಯ ಚಾಮರಾಜನಗರ ತಾಲ್ಲೂಕಿನ ಎಳಂದೂರು ಇವನ ಜನ್ಮಸ್ಥಳ. ಸಂಸ್ಕೃತ ಕನ್ನಡಗಳಲ್ಲಿ ಉದ್ದಾಮ ಪಂಡಿತ. ಕನ್ನಡದಲ್ಲಿ ರಾಜಶೇಖರ ವಿಳಾಸ, ಬಸವರಾಜ ವಿಜಯ, ಶಬರಶಂಕರ ವಿಳಾಸಗಳೆಂಬ ಚಂಪೂಕಾವ್ಯಗಳನ್ನು ರಚಿಸಿದ್ದಾನೆ. ಸಂಸ್ಕೃತದಲ್ಲಿ 'ಕವಿ ಕರ್ಣ ರಸಾಯನ'ವೆಂಬ ಕೃತಿಯನ್ನು ರಚಿಸಿದ ಕೀರ್ತಿ ಇವನದು. ಶಿವ ಮತ್ತು ಶಿವಶರಣರ ಹೊಗಳಿಕೆಯು ಮಾತ್ರವೇ ಶ್ರೇಷ್ಠವಾದುದೆಂದು ನಂಬಿದವನು.

'ರಸೆಯೊಳ್ ರಸವತ್ ಕವಿತೆಯನ್
ಸಿರಲ್ಪಡೆದಸಮನಯನನಂ ಪೊಗಳದೆಮಾ
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸಮನಾಂತವೊಲಕ್ಕುಂ'.

ಒಳ್ಳೆಯ ಕಾವ್ಯವನ್ನು ಬರೆಯುವ ಶಕ್ತಿಯಿರುವವನು ಶಿವನನ್ನು ಕಾವ್ಯದ ಮೂಲಕ ಹೊಗಳದೆ ಮನುಷ್ಯರನ್ನೋ, ದೇವತೆಗಳನ್ನೋ ಹೊಗಳುವುದು ಅಮೂಲ್ಯವಾದ ಚಿನ್ನವನ್ನು ಬಿಸುಟು ಕಸವನ್ನು ತೆಗೆದುಕೊಂಡಂತೆ. ಇವನ ಪ್ರಕಾರ ಕಾವ್ಯ ರಚನೆ ದೈವದತ್ತವಾದುದು, ಶಾಸ್ತ್ರದಲ್ಲಿ ಪರಿಣಿತಿಯನ್ನು ಯಾರಾದರೂ ಗಳಿಸಬಹುದು. ಕವಿತೆಯಲ್ಲಲ್ಲ. ಕಲಿತು ಬರುವಂತಹುದಲ್ಲ, ಸಹಜವಾಗಿ ಬರುವಂತಹುದು. ವೃತ್ತಗಳು ಮತ್ತು ಶ್ಲೇಷಾಲಂಕಾರಗಳ ಚಮತ್ಕಾರವನ್ನು ಹೇರಳವಾಗಿ ಬಳಸಿದ್ದಾನೆ.

'ರಾಜಶೇಖರ ವಿಳಾಸ' ಷಡಕ್ಷರದೇವನ ಮೊದಲ ಕಾವ್ಯ. ಚಿಕ್ಕ ವಯಸ್ಸಿನಲ್ಲಿಯೇ ರಚಿಸಿರಬೇಕೆನ್ನುತ್ತಾರೆ ವಿದ್ವಾಂಸರು. ಶೃಂಗಾರ ರಸ ಹೊನಲಾಗಿ ಹರಿದಿದೆ. ಕಾವ್ಯದಲ್ಲಿ ಅವಕಾಶವಿಲ್ಲದಿದ್ದರೂ ಹೆಚ್ಚಾಗಿ ಅದನ್ನು ಬಳಸಿದ್ದಾನೆ. ನೇಮಿಚಂದ್ರನ ಲೀಲಾವತಿಗಿಂತ ಸುಂದರವಾಗಿದೆ ಎನ್ನುವ ಕಾರಣಕ್ಕೆ ದಂತಕತೆಯೊಂದು ಹುಟ್ಟಿಕೊಂಡಿದೆ. 'ಲೀಲಾವತಿ ಪ್ರಬಂಧ'ವನ್ನು ಜೈನರು ಆನೆಯ ಮೇಲಿಟ್ಟು ಮೆರವಣಿಗೆ ಮಾಡುವಾಗ ರಸವು ನೆಲಕ್ಕೆ ಬೀಳಬಾರದೆಂದು ಬೆಳ್ಳಿಯ ತೊಟ್ಟಿಲನ್ನು ಕಟ್ಟಿದರಂತೆ. ಆದ್ದರಿಂದ ಅದಕ್ಕಿಂತ ಸುಂದರವಾದ ಕಾವ್ಯ ರಚಿಸಲು ನಿರ್ಧರಿಸಿ ಈ ಕೃತಿಯನ್ನು ಬರೆದನೆನ್ನುತ್ತಾರೆ.

ಈ ಕೃತಿಯಲ್ಲಿ ಪಂಚಾಕ್ಷರಿಯ ಮಹಿಮೆಯನ್ನು ತಿಳಿಸುವ ವಸ್ತುವಿದೆ. ತಮಿಳುನಾಡಿನ ಸತ್ಯೇಂದ್ರ ಚೋಳನ ಶಿವಭಕ್ತಿಯ ಆಧಿಕ್ಯವನ್ನು ತೋರಿಸುವಂಥದು. 1530 ರಲ್ಲಿದ್ದ ಗುಬ್ಬಿಯ ಮಲ್ಲಣಾರ್ಯನು ಭಾವಚಿಂತಾರತ್ನವೆಂಬ ಹೆಸರಿನಿಂದ ಈ ಕತೆಯನ್ನು ವಿಸ್ತರಿಸಿದ್ದಾನೆ. ಷಡಕ್ಷರಿ ಹದಿನಾಲ್ಕು ಆಶ್ವಾಸಗಳ 1850 ಪದ್ಯಗಳಿಂದ ಕೂಡಿದ ದೀರ್ಘವಾದ ಕಾವ್ಯವನ್ನಾಗಿ ರಚಿಸಿದ. ಕತೆಗಿಂತ ವರ್ಣನೆಯೇ ಪ್ರಧಾನ.

ಮೇರುಗಿರಿಗೆ ದಕ್ಷಿಣದಲ್ಲಿ ಭೂಕಾಂತೆಯ ಕಿರೀಟದಂತೆ ಚೋಳಮಂಡಲ. ಧರ್ಮವತಿ ಪುರ ರಾಜಧಾನಿ. ಶಿವಭಕ್ತನಾದ ಸತ್ಯೇಂದ್ರ ಚೋಳ ರಾಜ. ಹೆಂಡತಿ ಅಮೃತಮತಿ. ಮಂತ್ರಿ ಪತಿಮೋಹಿ. ವೈಭವ ಸಂಪತ್ತುಗಳಿದ್ದರೂ ಮಕ್ಕಳಿಲ್ಲ. ಗುರುವಿನ ಆಶೀರ್ವಾದದ ಬಲದಿಂದ ಶಿವಮಂತ್ರವನ್ನು ಉಪದೇಶ ಬಲದಿಂದ ಮಗನೊಬ್ಬ ಜನಿಸುತ್ತಾನೆ. ಆ ಮಗುವಿಗೆ ರಾಜಶೇಖರನೆಂದು ನಾಮಕರಣ ಮಾಡುತ್ತಾರೆ. ಇವನ ಓರಗೆಯವನು ಮಂತ್ರಿಯ ಮಗ ಮಿತವಚನ. ಅನ್ಯೋನ್ಯ ಸ್ನೇಹಿತರು. ಪರಿವಾರ ಸಮೇತ ರಾಜಶೇಖರ ಬೇಟೆಗೆ ಹೋದಾಗ

ಸಿಂಹವನ್ನು ಕೊಲ್ಲುತ್ತಾನೆ. ಅದರ ತಲೆಯಲ್ಲಿ ಅಮೂಲ್ಯ ರತ್ನವಿರುವುದನ್ನು ಕಂಡು ಆಶ್ಚರ್ಯಪಡುತ್ತಿರುವಾಗ ಸಿಂಹಳದ ಭಟರು ಈ ಸಿಂಹ ನಮ್ಮದೆಂದೂ ಅದರ ತಲೆಯಲ್ಲಿರುವ ರತ್ನ ನಮ್ಮದೆಂದು ಜಗಳ ತೆಗೆಯುತ್ತಾರೆ. ಸಿಂಹಳ ರಾಜನೊಂದಿಗೆ ರಾಜಶೇಖರ ಯುದ್ಧ ಮಾಡಿ ಗೆಲ್ಲುತ್ತಾನೆ. ಸಿಂಹಳ ರಾಜ ರಾಜಶೇಖರನನ್ನು ತನ್ನ ಪಟ್ಟಣಕ್ಕೆ ಕರೆದೊಯ್ದು ಮೆರವಣಿಗೆ ಮಾಡಿದಾಗ ಸಿಂಹಳನ ಮಗಳು ಸರ್ವಮಂಗಳೆಯನ್ನು ಕಾಣುತ್ತಾನೆ.

> ಕರ್ಬಿನ ಬಿಲ್ಲ ತುಂಬಿವೆದೆಯಂ ಪದೆದೇಱಿಸಿ ಗಂಡ ಗಾಡಿಯಿಂ
> ದುರ್ಬಿ ಸರೋಜಕೋರಕದ ಕೂರ್ಗಣೆಯಂ ತವೆ ಕೊಟ್ಟು ಲಕ್ಷ್ಯಮಂ
> ದೋರ್ಬಲಶಾಲಿ ನೋಡಿ ಸೆಳೆದೆಚ್ಚನವಂದಿರನೊರ್ಮೆ ತೊಟ್ಟನಂ
> ದಿರ್ಬಗಿಯಾಗಿ ತನ್ಮನಮನಂಗಧನುರ್ಧರನಾ ಕ್ಷಣಾರ್ಧದೊಳ್
>
> (ರಾಜ.ವಿ. 7-67)

ಮನ್ಮಥನು ಕಬ್ಬಿನ ಬಿಲ್ಲಿಗೆ ತುಂಬಿಯ ಹೆದೆಯನ್ನು ಕಟ್ಟಿ ಕಮಲದ ಮೊಗ್ಗಂಬ ಬಾಣವನ್ನು ಹೂಡಿ ರಾಜಶೇಖರ ಸರ್ವಮಂಗಳೆಯರ ಮೇಲೆ ಪ್ರಯೋಗಿಸುತ್ತಾನೆ. ಅವರಿಬ್ಬರೂ ಪ್ರೇಮಿಗಳಾಗುತ್ತಾರೆ. ವಿಷಯ ತಿಳಿದ ಸಿಂಹಳೇಂದ್ರ ಅವರಿಬ್ಬರಿಗೂ ಮದುವೆ ಮಾಡುತ್ತಾನೆ. ತನ್ನ ಊರಿಗೆ ಹಿಂತಿರುಗಿದ ರಾಜಶೇಖರ ಶಿವಪೂಜೆಯಲ್ಲಿ ನಿರತನಾಗಿರುತ್ತ ಸಜ್ಜನರೊಂದಿಗೆ ಬೆರೆಯುತ್ತ ಕಾಲ ಕಳೆಯುತ್ತಿರುತ್ತಾನೆ.

ಹೀಗಿರುವಾಗ ಒಂದು ದಿನ ಸಿಂಧುರಾಜನು ಎರಡು ಜಾತಿಯ ಕುದುರೆಗಳನ್ನು ಕಾಣಿಕೆಯಾಗಿ ಕಳುಹಿಸುತ್ತಾನೆ. ಅವುಗಳನ್ನು ನೋಡಿದಾಗ ರಾಜಶೇಖರನಿಗೆ ಸವಾರಿ ಮಾಡಬೇಕೆಂಬ ಆಸೆಯಾಗುತ್ತದೆ. ಆದರೆ ಮಿತವಚನ ಕುದುರೆಯನ್ನು ಪಳಗಿಸದೆ ಸವಾರಿ ಮಾಡುವುದು ಸರಿಯಲ್ಲವೆಂದು ತಿಳಿಸುತ್ತಾನೆ. ಆದರೆ ರಾಜಶೇಖರ ತನ್ನ ಮನಸ್ಸಿನ ಆಸೆಯನ್ನು ತಳ್ಳಿಹಾಕಬೇಡ. ತರೆದೆ ಬಯ್ಯುವರೆಂದು ಹೆದರಬೇಡ, ನಿನ್ನ ಅಪರಾಧದ ಹೊಣೆಯನ್ನು ನಾನೇ ಹೊರುತ್ತೇನೆ ಎಂದು ಆಶ್ವಾಸನೆಯಿತ್ತು ವಿಹಾರಕ್ಕೆ ಹೊರಡುತ್ತಾನೆ.

ರಾಜಶೇಖರ ಪವನಗಮನವೆಂಬ ಕುದುರೆಯನ್ನು, ಮಿತವಚನ ಹರಿಣಗತಿಯೆಂಬುದನ್ನು ಏರುತ್ತಾರೆ. ವಿನೋದದಲ್ಲಿ ಸಂತೋಷಿಸುತ್ತಿರುವಾಗ ಪಟ್ಟಣಕ್ಕೆ ವಾಪಸಾಗುತ್ತಾರೆ. ರಾಜಕುಮಾರ ಮಂತ್ರಿಕುಮಾರರ ಮೆರವಣಿಗೆಯನ್ನು ಜನ ನೋಡುತ್ತಿರುವಾಗ ತಿರುಕೊಳವಿನಾಚಿಯೆಂಬ ಭಕ್ತೆಯ ಒಬ್ಬನೇ ಮಗ. ಶಂಕರನೆಂಬ ಐದು ವರ್ಷದ ಹುಡುಗ ತಾಯಿ ನೀರಿಗೆ ಹೋಗುತ್ತಿರುವಾಗ ಬೀದಿಗೆ ಬಂದಿರುತ್ತಾನೆ. ಜನರ ಗೊಂದಲದಲ್ಲಿ ಬಿದ್ದ ಹುಡುಗ ಮೇಲೇಳುವಷ್ಟರಲ್ಲಿ ರಾಜಶೇಖರನು ಕುದುರೆಯನ್ನು ದಾಟಿಸುವಾಗ ಮಿತವಚನನ ಕುದುರೆ ಶಂಕರನ

ತಲೆಯನ್ನು ತುಳಿದು ಹುಡುಗನ ಸಾವಿಗೆ ಕಾರಣವಾಗುತ್ತದೆ. ರಾಜಶೇಖರ ಅಪರಾಧದ ಹೊಣೆಯನ್ನು ಹೊತ್ತು ಪ್ರಾಯಶ್ಚಿತ್ತ ಮಾಡಿಕೊಳ್ಳಲು ನಿರ್ಧರಿಸಿ ಅರಮನೆಗೆ ಹಿಂದಿರುಗುತ್ತಾನೆ.

ತನ್ನ ಮಗನ ಸಾವನ್ನು ಕಂಡ ತಿರುಕೊಳವಿನಾಚಿಯು ಕರುಳು ಕತ್ತರಿಸುವಂತೆ ಗೋಳಿಡುತ್ತಾಳೆ. ಮಗುವಿನ ಬಾಲ ಲೀಲೆಗಳನ್ನು ನೆನೆನೆನೆದು ಕಣ್ಣೀರಿಡುತ್ತಾಳೆ. ನಂತರ ರಾಜನಲ್ಲಿಗೆ ದೂರೊಯ್ಯುತ್ತಾಳೆ. ಮಿತವಚನನ ಅಪರಾಧವನ್ನು ರಾಜಶೇಖರನೇ ಹೊತ್ತದ್ದರಿಂದ ಸತ್ಯೇಂದ್ರ ಚೋಳ ಶಿರಚ್ಛೇದನದ ಶಿಕ್ಷೆಯನ್ನು ವಿಧಿಸುತ್ತಾನೆ. ಸಾಯುವಾಗ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತಿದ್ದುದರಿಂದ ತಲೆಯು ದೇಹದಿಂದ ಬೇರೆಯಾದಾಗಲೂ ಮಂತ್ರವನ್ನು ಜಪಿಸುತ್ತಿರುತ್ತದೆ. ರಾಜಶೇಖರನ ಸೇವಕನೂ ತಲೆಯನ್ನು ಕತ್ತರಿಸಿಕೊಂಡಾಗ ಅದೂ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತದೆ. ಉತ್ತೇಜಿತನಾದ ಶಂಕರನ ತಲೆಯೂ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತದೆ. ಇದನ್ನು ನೋಡಿದ ತಿರುಕೊಳವಿನಾಚಿಯೂ ತಲೆಯನ್ನು ಕತ್ತರಿಸಿಕೊಂಡಾಗ ಅದೂ ಪಂಚಾಕ್ಷರಿ ಜಪ ಮಾಡುತ್ತದೆ.

ರಾಜಶೇಖರನಿಗೆ ಶಿರಚ್ಛೇದನ ಮಾಡಲಾಗದೆ ಪತಿಮೋಹಿಯಾದ ಮಂತ್ರಿಯು ತಲೆಯನ್ನು ಕತ್ತರಿಸಿಕೊಂಡದ್ದರಿಂದ ಅದೂ ಪಂಚಾಕ್ಷರಿ ಜಪ ಮಾಡುತ್ತದೆ. ನಂತರ ರಾಜ, ಮಿತವಚನರೂ ತಲೆಯನ್ನು ಕತ್ತರಿಸಿಕೊಂಡಾಗ ಅವುಗಳೂ ಹಾಗೆಯೇ ಮಾಡುತ್ತವೆ. ಅಮೃತಮತಿ ಮತ್ತು ಮಿತವಚನರ ಪತ್ನಿಯರು ತಲೆಕತ್ತರಿಸಿಕೊಳ್ಳಲು ಮುಂದಾದಾಗ ಈಶ್ವರ ಪ್ರತ್ಯಕ್ಷನಾಗಿ ಎಲ್ಲರನ್ನೂ ಬದುಕಿಸುತ್ತಾನೆ.

ಕತೆ ಕಿರಿದಾದರೂ ವರ್ಣನೆಗಳಿಂದ ದೀರ್ಘವಾಗಿಸಿದ್ದಾನೆ. ಶೃಂಗಾರ ರಸ ಭೋರ್ಗರೆದು ಹರಿದಿದೆ. ಕರುಣ ಇಲ್ಲಿಯ ನಾಡಿಮಿಡಿತವಾಗಿದೆ. ಕವಿಯ ಔಚಿತ್ಯಪ್ರಜ್ಞೆ, ಪಾತ್ರಗಳನ್ನು ಅರ್ಥಮಾಡಿಕೊಳ್ಳುವ ಶಕ್ತಿ ಗೋಚರಿಸುತ್ತದೆ. ಕಾವ್ಯ ಪಾಂಡಿತ್ಯದ ಕಗ್ಗಾಡು, ಶ್ಲೇಷೆ, ಕವಿಸಮಯ, ಪಾಂಡಿತ್ಯ, ಪುನರುಕ್ತ ಕಲ್ಪನೆಗಳು ಹೇರಳವಾಗಿವೆ.

ಇವನ ಮತ್ತೊಂದು ಕಾವ್ಯ 'ಬಸವರಾಜ ವಿಜಯ'. ಬಸವಣ್ಣನ ಬಗ್ಗೆ ಬರೆದ ಚಂಪೂ ರೂಪದ ಪುರಾಣ ಕಾವ್ಯ. ತೆಲುಗಿನ ಪಾಲ್ಕುರಿಕೆ ಸೋಮನಾಥನ ಕನ್ನಡದ ಭೀಮ ಕವಿಯ ಜಾಡನ್ನೇ ಅನುಸರಿಸಿದ್ದಾನೆ. ಇತರ ಶರಣರ ಕತೆಗಳು ಕಾವ್ಯದ ವಸ್ತುವಿಗಿಂತ ಅಧಿಕವಾಗಿವೆ. ಬಸವರಾಜದೇವರ ರಗಳೆಯ ಪ್ರಭಾವವೂ ಇದರ ಮೇಲಾಗಿದೆ.

ಬಾಗೇವಾಡಿಯ ಶೈವ ಬ್ರಾಹ್ಮಣರಾದ ಮಂಡಿಗೆಯ ಮಾದಿರಾಜ ಅವನ ಪತ್ನಿ ಮಾದಲಾಂಬಿಕೆಯರ ಮಗ ಬಸವಣ್ಣ. ನಂದಿಕೇಶ್ವರನ ಕೃಪೆಯಿಂದ

ಹುಟ್ಟಿದವನು. ಹುಟ್ಟಿದಾಕ್ಷಣ ಕಪ್ಪಡಿಯ ಸಂಗಮೇಶ್ವರನಿಂದ ಲಿಂಗದೀಕ್ಷೆಯನ್ನು ಪಡೆಯುತ್ತಾನೆ. ತಂದೆ ಉಪನಯನ ಮಾಡಲು ಯೋಚಿಸಿದಾಗ

ಶಿವಪಂಚವರ್ಣವಿರೆ ಬೇ
ರೆ ವರ್ಣಮೇಕೆ ಶಂಭು ಪಾದಾಶ್ರಯ ದೊಂ
ದವಿರತಮಿರೆ ಮಿಕ್ಕಾಶ್ರಮ
ನಿವಹಂ ತಾನೇಕೆ ಲಿಂಗಪೂಜಾ ಯಜ್ಞಂ (ಬಸ.ವಿ. 3-54)

ಶಿವನ ವರ್ಣಕ್ಕೆ ಸೇರಿದ ಮೇಲೆ ಚತುರ್ವರ್ಣಗಳ ಹಂಗೇಕೆ ? ಶಿವನ ಕೃಪೆಯಿರಬೇಕಾದರೆ ಇತರ ಆಶ್ರಮಗಳ ಹಂಗೇಕೆ ? ಲಿಂಗ ಪೂಜೆಯೆಂಬ ಯಜ್ಞವಿರಲು ಬೇರೆ ಯಜ್ಞಗಳೇಕೆ ಎಂದು ಉಪನಯನ ಮಾಡಿಸಿಕೊಳ್ಳುವುದಿಲ್ಲ. ಅಕ್ಕ ನಾಗಲಾಂಬಿಕೆಯೊಂದಿಗೆ ಕಪ್ಪಡಿಗೆ ಬಂದು ಸಂಗಮೇಶ್ವರನ ಪೂಜೆಯಲ್ಲಿ ನಿರತನಾಗುತ್ತಾನೆ. ಮಾದಲಾಂಬಿಕೆಯ ತಮ್ಮ ಬಿಜ್ಜಳನ ಮಂತ್ರಿ ಬಲದೇವನ ಮಗಳು ಗಂಗಾಂಬಿಕೆಯೊಡನೆ ಮದುವೆಯಾಗುತ್ತದೆ. ಬಲದೇವನ ಸಾವಿನ ನಂತರ ಅವನ ಜಾಗದಲ್ಲಿ ಬಸವಣ್ಣ ಮಂತ್ರಿಯಾಗುತ್ತಾನೆ. ಭಂಡಾರದ ಹಣ ಹೆಚ್ಚಲು ಕಾರಣವಾಗಿ ರಾಜನ ವಿಶ್ವಾಸಕ್ಕೆ ಪಾತ್ರನಾಗುತ್ತಾನೆ. ಅಲ್ಲಿಂದ ಬಸವಣ್ಣನ ಸಾಮಾಜಿಕ, ಧಾರ್ಮಿಕ ಕ್ಷೇತ್ರ ದೊಡ್ಡದಾಗುತ್ತದೆ. ದಿಕ್ಕು ದಿಕ್ಕುಗಳಿಂದ ಜನರು ಕಲ್ಯಾಣದತ್ತ ಪ್ರವಾಹದಂತೆ ಬರುತ್ತಾರೆ. ಪರಮತೀಯರು ಬಸವಣ್ಣನ ಬಗ್ಗೆ ಅಸೂಯೆಪಡುತ್ತಾರೆ. ಬಸವಣ್ಣನವರ ಮೇಲೆ ಅಪವಾದ ಹೊರಿಸುತ್ತಾರೆ. ದೊರೆ ಪರೀಕ್ಷಿಸಿದಾಗ ಭಂಡಾರದ ಹಣ ಹೆಚ್ಚಿಗೇ ಇರುತ್ತದೆ.

ಹಲವಾರು ಪುರಾಣಗಳಲ್ಲಿ ಪವಾಡದ ಬಗ್ಗೆ ಚಿತ್ರಿಸಿದ್ದಾರೆ. ಐತಿಹಾಸಿಕ ಪುರುಷನಾದ ಬಸವಣ್ಣನು ವ್ಯಕ್ತಿತ್ವದಲ್ಲಿ ಪವಾಡಗಳು ನಡೆದದ್ದನ್ನು ನಂಬುವುದು ಬಲು ಕಷ್ಟ. ಆದರೂ ಷಡಕ್ಷರಿ ಅದರಿಂದ ಹೊರಬಂದಿಲ್ಲ. ಜಂಗಮನೊಬ್ಬ ಬಸವಣ್ಣನನ್ನು ಕಾಣಲು ಬಂದಾಗ ಸೇವಕರು ವಿರೋಧಿಸಿ ಅವನನ್ನು ಹಿಂದಕ್ಕೆ ಕಳುಹಿಸುತ್ತಾರೆ. ಆಗ ಬಸವಣ್ಣನ ಪ್ರಾಣ ಶರಣರ ಹಿಂದೆಯೇ ಹೋಗುತ್ತದೆ. ಆಗ ಶರಣರು ಬಸವಣ್ಣನ ವಚನದಿಂದ ಅದನ್ನು ಅರಿಯುತ್ತಾರೆ. ಜಂಗಮನನ್ನು ಪ್ರಾಣವೆಂದು ಕಂಡ ಬಸವಣ್ಣನ ವ್ಯಕ್ತಿತ್ವ ದಾಖಲಾಗಿದೆ. ಬಸವಣ್ಣನ ಧಾರ್ಮಿಕ, ಸಾಮಾಜಿಕ ಸೇವೆಯಿಂದ ಅಸೂಯಾಪರರಾದ ಕೆಲವರು ಬಿಜ್ಜಳನಿಗೆ ಚಾಡಿ ಹೇಳುತ್ತಾರೆ. ಇದರಿಂದ ಬೇಸತ್ತ ಬಸವಣ್ಣ ಕಪ್ಪಡಿ ಸಂಗಮಕ್ಕೆ ಹೋಗಿ ಶಿವೈಕ್ಯನಾಗುತ್ತಾನೆ. ಮಾಚಯ್ಯನಿಂದ ಬಿಜ್ಜಳನ ಕೊಲೆಯಾಗುತ್ತದೆ.

ಶಿವಶರಣರ ಕತೆಗಳೇ ತುಂಬಿ ಹೋಗಿದ್ದರಿಂದ ವರ್ಣನೆಗೆ ಅವಕಾಶವೇ ಇಲ್ಲ. ರಾಜಶೇಖರ ವಿಲಾಸ ಇದಕ್ಕೆ ವಿರುದ್ಧವಾಗಿರುವುದನ್ನು ಗಮನಿಸಬಹುದು.

ಇವನ ಮತ್ತೊಂದು ಕಾವ್ಯ ''ಶಬರಶಂಕರ ವಿಳಾಸ''. ಮಹಾಭಾರತದ

ಒಂದು ಪ್ರಸಂಗವನ್ನು ಕಾವ್ಯದ ವಸ್ತುವಾಗಿ ಆಯ್ಕೆ ಮಾಡಿಕೊಂಡಿದ್ದಾನೆ. ಅರ್ಜುನನು ಇಂದ್ರಕೀಲ ಪರ್ವತದಲ್ಲಿ ತಪಸ್ಸು ಮಾಡಿ ಕಿರಾತ ವೇಷದ ಶಿವನೊಡನೆ ಹೋರಾಡಿ ಅವನನ್ನು ಮೆಚ್ಚಿಸಿ ಪಾಶುಪತಾಸ್ತ್ರಗಳನ್ನು ಪಡೆದುದು ಇಲ್ಲಿಯ ಕತೆ. ಇದು ಕಿರಾತ ರುದ್ರಲೀಲೆಯೆಂಬುದಾಗಿ ಶಿವನ ಇಪ್ಪತ್ತೈದು ಲೀಲೆಗಳಲ್ಲಿ ಒಂದೆಂದು ಪ್ರಸಿದ್ಧವಾಗಿದೆ. ಶಿವನ ಲೀಲೆ, ಮಹಿಮೆ ಕಾರುಣ್ಯಗಳನ್ನು ವರ್ಣಿಸಲು ಷಡಕ್ಷರಿಯು ಈ ಪ್ರಸಂಗವನ್ನು ಐದು ಆಶ್ವಾಸಗಳಲ್ಲಿ ನಾನ್ನೂರ ಅರವತ್ತಕ್ಕಿಂತ ಹೆಚ್ಚು ಪದ್ಯಗಳಲ್ಲಿ ಚಿತ್ರಿಸಿ ಒಂದು ಖಂಡ ಕಾವ್ಯವನ್ನಾಗಿ ಮಾಡಿದ್ದಾನೆ.

ಮೊದಲನೆಯ ಆಶ್ವಾಸದಲ್ಲಿ ಶಿವನ ಒಡ್ಡೋಲಗದ ವರ್ಣನೆ, ಎರಡನೆಯದರಲ್ಲಿ ಅರ್ಜುನನ ತಪಸ್ಸಿನ ವರ್ಣನೆ, ಮೂರನೆಯದರಲ್ಲಿ ಶಿವಪಾರ್ವತಿಯರು ಬೇಡ ಬೇಡತಿಯರಾಗಿ ಬೇಟೆಗಾಗಿ ಬಂದ ಸಂಗತಿ, ನಾಲ್ಕನೆಯದರಲ್ಲಿ ಮೂಕದಾನವ ಹಂದಿಯ ರೂಪದಲ್ಲಿ ಬಂದಾಗ ಅರ್ಜುನ ಹೊಡೆದುರುಳಿಸಿದ್ದು, ಬೇಡ ವೇಷದ ಈಶ್ವರ ಅರ್ಜುನನೊಡನೆ ಹೋರಾಡಿದ್ದು, ಕೊನೆಗೆ ಶಿವನು ಅರ್ಜುನನಿಗೆ ನಿಜರೂಪವನ್ನು ದಯಪಾಲಿಸಿದ ವರ್ಣನೆಗಳು ಬರುತ್ತದೆ.

ಇಲ್ಲಿ ಶಿವ ಅರ್ಜುನರ ಸಂಭಾಷಣೆ, ಅರ್ಜುನನ ತಪಸ್ಸಿನ ವರ್ಣನೆ, ಯುದ್ಧ, ಮುಂತಾದವುಗಳನ್ನು ಮನೋಜ್ಞವಾಗಿ ಚಿತ್ರಿಸಿದ್ದಾನೆ. ಇಲ್ಲಿ ಕಾವ್ಯ ವರ್ಣನೆಗಳಿಂದ ತುಂಬಿದೆ. ಕವಿಯ ಪಾಂಡಿತ್ಯವೂ ಗೋಚರಿಸುತ್ತದೆ.

## ಶಿವಕೋಟ್ಯಾಚಾರ್ಯ

ವಡ್ಡಾರಾಧನೆಯ ಕರ್ತೃ ಶಿವಕೋಟ್ಯಾಚಾರ್ಯ ಎಂದು ನಂಬಲಾಗಿದೆ. ವಡ್ಡಾರಾಧನೆ ಗ್ರಂಥದಲ್ಲಿ ಎಲ್ಲಿಯೂ ಗ್ರಂಥಕರ್ತನ ಹೆಸರು ಉಕ್ತವಾಗಿರುವುದಿಲ್ಲ. ಆದರೆ 'ವಡ್ಡಾರಾಧನೆ' ಎಂಬ ಶೀರ್ಷಿಕೆಯು ಪ್ರಾಕೃತದ 'ಮೂಲಾರಾಧನಾ' ಗ್ರಂಥಕ್ಕೆ ಸಂಬಂಧಿಸಿರುವುದರಿಂದ ಆ ಪ್ರಾಕೃತ ಗ್ರಂಥದ ಕರ್ತೃ ಶಿವಾರ್ಯ ಅಥವಾ ಶಿವಕೋಟಿಯ ಹೆಸರು 'ವಡ್ಡಾರಾಧನೆ' ಯೆಂಬ ಶೀರ್ಷಿಕೆಯೊಂದಿಗೆ ಸೇರಿಕೊಂಡಿದೆ. ಆದುದರಿಂದಾಗಿ ಶಿವಕೋಟಿಯೇ ಕನ್ನಡ ಗ್ರಂಥದ ಕರ್ತೃ ಎಂಬುದರ ಬಗ್ಗೆ ಸಂದೇಹಗಳಿವೆ. ಶೀವಾರ್ಯನ ಮೂಲಾರಾಧನೆಯ ಯಾವುದಾದರೊಂದು ಕನ್ನಡ ಟೀಕೆಯೊಳಗಿನಿಂದ ಈ ಕಥೆಗಳನ್ನು ವಿಂಗಡಿಸಿ, ಕೆಲವು ಕಥೆಗಳನ್ನು ವಿಸ್ತರಿಸಿ ಬೇರೆ ಯಾವನೋ ಬಹುಶ್ರುತನೂ, ಪ್ರೌಢಿಮೆಯುಳ್ಳವನೂ ಆದ ಕವಿ ವಡ್ಡಾರಾಧನೆ ಗ್ರಂಥವನ್ನು ಬರೆದಿರಬೇಕು ಎಂಬ ಅಭಿಪ್ರಾಯವಿದೆ. 'ವಡ್ಡಾರಾಧನೆ' ಗ್ರಂಥವನ್ನು ಸಂಪಾದನೆ ಮಾಡಿದ ವಿದ್ವಾಂಸರುಗಳು ಅದರ ಭಿನ್ನ ಪಾಠಗಳನ್ನು ಕೂಲಂಕುಷವಾಗಿ ಪರಿಶೀಲಿಸಿ

ವೊಡ್ಡಾರಾಧನೆ, ಒಡ್ಡಾರಾಧನೆ, ವಡ್ಡಾರಾಧನೆ ಎಂಬ ಪಾಠಾಂತರಗಳಲ್ಲಿ ಅರ್ಥಾನುಸಾರಿಯಾಗಿ ವಡ್ಡಾರಾಧನೆ ಎಂಬುದಾಗಿ ನಿಷ್ಕರ್ಷೆ ಮಾಡಿ ಸೂಚಿಸಿದ್ದಾರೆ. ಅಂತೆಯೇ ಅದರ ಕರ್ತೃವಿನ ವಿಚಾರವಾಗಿ ಆರ್. ನರಸಿಂಹಾಚಾರ್, ಕವಿಚರಿತೆಕಾರರು, ಡಿ.ಎಲ್. ನರಸಿಂಹಾಚಾರ್ ಮುಂತಾದವರುಗಳು ಶಿವಾರ್ಯ, ಶಿವಕೋಟಿ, ಶಿವಕೋಟ್ಯಾಚಾರ್ಯ, ರೇವಕೋಟಾಚಾರ್ಯ ಮುಂತಾಗಿ ಉಲ್ಲೇಖಿತವಾಗಿ ಬರುವ ಪಾಠಗಳನ್ನು ಗಮನಿಸಿ 'ಶಿವಕೋಟ್ಯಾಚಾರ್ಯ' ಎಂಬ ನಾಮವನ್ನೇ ಅಧಿಕೃತವಾಗಿ ಅಂತಿಮಗೊಳಿಸಿ ಹೇಳಿರುವುದು ಕಂಡು ಬರುತ್ತದೆ. ಸುಮಂತಭದ್ರನ ಶಿಷ್ಯನೆಂದೇ ಹೇಳುವ ಶಿವಕೋಟಿಯೇ ಶಿವಕೋಟ್ಯಾಚಾರ್ಯ ಆಗಿರಬೇಕೆಂದು ಅಭಿಪ್ರಾಯಪಡಲಾಗಿದೆ.

'ವಡ್ಡಾರಾಧನೆ' ಕೃತಿಯ ಕಾಲವನ್ನು ನಿರ್ಧರಿಸುವ ವಿಷಯವಾಗಿಯೂ ವಿದ್ವಾಂಸರಲ್ಲಿ ಭಿನ್ನಮತಗಳು ವ್ಯಕ್ತಪಟ್ಟಿವೆ. ಉಪಲಬ್ಧವಾಗಿರುವ ಹಸ್ತಪ್ರತಿಗಳ ಪ್ರಾಚೀನ ಕಾಲ ಕ್ರಿ.ಶ. 1403. ಇದಕ್ಕೂ ಮೊದಲೇ ಗ್ರಂಥ ರಚನೆಯಾಗಿರುವುದು ಸ್ಪಷ್ಟ. ಗ್ರಂಥದಲ್ಲಿ ಉದ್ಧೃತವಾಗಿರುವ ಪ್ರಾಕೃತ, ಸಂಸ್ಕೃತ, ಕನ್ನಡ ಪದ್ಯಗಳ ಆಕರಗಳನ್ನು ತಿಳಿಯುವುದರಿಂದಲೂ ಗ್ರಂಥ ರಚನೆಯ ಕಾಲವನ್ನು ಗೊತ್ತುಮಾಡುವುದಕ್ಕೆ ಸಾಧ್ಯವಿದೆ. ಗುಣಭದ್ರನಿಂದ ರಚಿತವಾದ 'ಮಹಾಪುರಾಣ'ದ ನಂತರದಲ್ಲಿ ರಚಿತವಾಗಿರುವ ಗ್ರಂಥವಾಗಿರುವುದರಿಂದ ಕನ್ನಡ ಗ್ರಂಥ ಕರ್ತೃ ಶಿವಕೋಟ್ಯಾಚಾರ್ಯ ಕ್ರಿ.ಶ. 900 ಕ್ಕಂತ ಹಿಂದಿನವನು ಆಗಿರುವ ಸಾಧ್ಯತೆಗಳಿಲ್ಲ ಎಂಬುದನ್ನು ವಿದ್ವಾಂಸರು ದೃಢಪಡಿಸಿದ್ದಾರೆ. ಕೃತಿಯಲ್ಲಿನ ಭಾಷಾ ಸ್ವರೂಪ ಶೈಲಿ ಮೊದಲಾದುವುಗಳನ್ನು ಲಕ್ಷ್ಯಕ್ಕೆ ತೆಗೆದುಕೊಂಡು ವಡ್ಡಾರಾಧನೆ ಗ್ರಂಥವು ಸುಮಾರು 10-11 ನೆಯ ಶತಮಾನದಲ್ಲಿ ರಚಿತವಾಗಿದೆಯೆಂಬ ಅಭಿಪ್ರಾಯವಿರುವುದರಿಂದ ಶಿವಕೋಟ್ಯಾಚಾರ್ಯರ ಕಾಲವು ಇದೇ ಸುಮಾರಿನದಾಗಿರುತ್ತದೆಂಬುದು ವ್ಯಕ್ತವಾಗುತ್ತದೆ. ಇಲ್ಲಿನ ವಸ್ತುವನ್ನು ಗಮನಿಸಿದರೆ ಇದು ಜೈನ ಕಥೆಗಳನ್ನೊಳಗೊಂಡ ಕೃತಿಯಾಗಿರುವುದರಿಂದ ಕನ್ನಡದಲ್ಲಿ ಜೈನ ಮಹಾಪುರುಷರ ಪುರಾಣವಾದ ''ಚಾವುಂಡರಾಯ ಪುರಾಣವೇ'' ಪ್ರಾಚೀನ ಕೃತಿಯೆಂದು ನಂಬಲಾಗಿದ್ದ ಕಾಲಘಟ್ಟದಲ್ಲಿ ವಡ್ಡಾರಾಧನೆ ಗ್ರಂಥವು ಬೆಳಕಿಗೆ ಬಂದುದರಿಂದ ಕನ್ನಡದ ಮೊಟ್ಟ ಮೊದಲ ಗದ್ಯಕೃತಿ ವಡ್ಡಾರಾಧನೆ ಎಂಬ ಹಿರಿಮೆಯು ವಡ್ಡಾರಾಧನೆಗೆ ಸಂದರೆ, ಅದರ ಕರ್ತೃ ಶಿವಕೋಟ್ಯಾಚಾರ್ಯ ಈ ಗದ್ಯಕೃತಿರತ್ನವನ್ನು ಕನ್ನಡದಲ್ಲಿ ನಿರೂಪಿಸಿದ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ.

ಭಗವತೀ ಆರಾಧನೆಯೇ ಕನ್ನಡದ ವಡ್ಡಾರಾಧನೆ ಕೃತಿಗೆ ಮೂಲ ಎಂಬ ಅಂಶವನ್ನು ಗಮನಿಸಿದರೆ ಸಂಯಕ್ ದರ್ಶನ, ಸಂಯಕ್ ಜ್ಞಾನ, ಸಂಯಕ್ ಚಾರಿತ್ರ್ಯ

ಹಾಗೂ ಸಂಯಕ್ ತಪರೂಪವಾದ ನಾಲ್ಕು ಆರಾಧನೆಗಳನ್ನು ಪರಿಭಾವಿಸುವ ''ಭಗವತೀ ಆರಾಧನೆ''ಯಲ್ಲಿ ಒಟ್ಟು 2170 ಕಥೆಗಳಿದ್ದರೆ, ಕನ್ನಡ ವಡ್ಡಾರಾಧನೆಯಲ್ಲಿ 19 ಕಥೆಗಳು ಅಡಕವಾಗಿವೆ. ವಡ್ಡಾರಾಧನೆ ಎಂಬ ಪದನಿಷ್ಪತ್ತಿಯು ವೃದ್ಧ ಎಂಬ ಸಂಸ್ಕೃತ ಪದದಿಂದ ವಡ್ಡ ಎಂಬ ರೂಪವಾಗಿದ್ದು, ನಂತರದಲ್ಲಿ ಮಹಾಪ್ರಾಣ ಅಲ್ಪಪ್ರಾಣವಾಗಿ ಕನ್ನಡದಲ್ಲಿ ವಡ್ಡಾರಾಧನೆಯೆಂದು ರೂಪ ತಳೆದಿದೆ. ದೇವ, ಮಾನವ, ತಿರ್ಯಕ್ ಹಾಗೂ ಅಚೇತನಗಳೆಂಬ ನಾಲ್ಕು ಬಗೆಯ ಉಪಸರ್ಗಗಳನ್ನು ಶಾಂತ ಮನಸ್ಸಿನಿಂದ ಸೈರಿಸಿ ಧರ್ಮಧ್ಯಾನದಲ್ಲಿ ನಿರತವಾಗಿ ದೇಹ ತ್ಯಾಗ ಮಾಡಿದ ಉಪಸರ್ಗ ಕೇವಲಿಗಳ ಕಥೆಗಳು ಇಲ್ಲಿನ 19 ಕಥೆಗಳು. ಈ ಹತ್ತೊಂಬತ್ತು ಕಥೆಗಳಲ್ಲಿನ ನಾಯಕರು ಜೈನ ಮಹಾಪುರುಷರುಗಳಾಗಿದ್ದಾರೆ. ಇಲ್ಲಿನ ಹತ್ತೊಂಬತ್ತು ಕಥೆಗಳು ಅನುಕ್ರಮವಾಗಿ ಸುಕುಮಾರಸ್ವಾಮಿಯ ಕಥೆ, ಸುಕೌಶಳಸ್ವಾಮಿ ಕಥೆ, ಗಜಕುಮಾರನ ಕಥೆ, ಸನತ್ಕುಮಾರ ಚಕ್ರವರ್ತಿಯ ಕಥೆ, ಅಣ್ಣಿಕಾಪುತ್ರನ ಕಥೆ, ಭದ್ರಬಾಹು ಭಟ್ಟಾರಕರ ಕಥೆ, ಲಲಿತಘಟೆಯ ಕಥೆ, ಧರ್ಮಘೋಷ ಭಟಾರನ ಕಥೆ, ಸಿಂದಿಣ್ಣ ಭಟಾರರ ಕಥೆ, ವೃಷಭಸೇನಾ ಭಟಾರನ ಕಥೆ, ಕಾರ್ತಿಕಋಷಿಯ ಕಥೆ, ಅಭಯಘೋಷನೆಂಬ ಮುನಿಯ ಕಥೆ, ವಿದ್ಯುಚ್ಚೋರ ರಿಸಿಯ ಕಥೆ, ಗುರುದತ್ತ ಭಟಾರನ ಕಥೆ, ಚಿಲಾತ ಪುತ್ರನ ಕಥೆ, ದಂಡಕ ರಿಸಿಯ ಕಥೆ, ಮಹೇಂದ್ರ ದತ್ತಾಚಾರ್ಯನೇ ಮೊದಲಾದ ಋಷಿಗಳ ಕಥೆ, ಚಾಣಾಕ್ಯರಿಸಿಯ ಕಥೆ ಮತ್ತು ವೃಷಭಸೇನರೆಂಬ ರಿಸಿಯ ಕಥೆ ಎಂಬುದಾಗಿ 19 ಕಥೆಗಳಿದ್ದು, ಜೈನ ಧಾರ್ಮಿಕ ಸಂಗತಿಗಳನ್ನು ಪ್ರಚುರಪಡಿಸುತ್ತವೆ. ಇವುಗಳಲ್ಲಿ ತಪಸ್ಸಿನಿಂದ ಪುಣ್ಯ ಪಾಪರೂಪವಾದ ಕರ್ಮವನ್ನು ಕ್ಷಯ ಮಾಡಿ ಮೋಕ್ಷವನ್ನು ಸಾಧಿಸಿದ ಚರಿತ್ರೆಯನ್ನು ಹೇಳಲಾಗಿದೆ. ತಪಸ್ಸೆಂದರೆ ಪರೀಷಹ, (ಜಯ, ಹಸಿವು, ನೀರಡಿಕೆ, ಶೀತ, ಉಷ್ಣ ಮೊದಲಾದ ಬಾಧೆಗಳಿಗೆ ಪರೀಷಹಗಳೆಂದು ಹೆಸರು). ಈ ರೀತಿಯ 22 ಬಗೆಯ ಉಪಸರ್ಗಗಳನ್ನೂ ಜಯಿಸಿ ಯತಿಯು ತಪಸ್ಸು ಮಾಡುತ್ತಾನೆ. ಇದನ್ನು ಉಪಾಸನೆ ಅಥವಾ ಆರಾಧನೆ ಎನ್ನುತ್ತಾರೆ. ಅದರ ಫಲವಾಗಿ ಸಾಧಕನು ಮೋಕ್ಷವನ್ನು ಪಡೆಯುವನು ಎಂಬುದು ಇಲ್ಲಿನ ಧರ್ಮಸಾರವಾಗಿದೆ.

ಜೀವನದ ಏಳುಬೀಳುಗಳು ಹಾಗೂ ಅವುಗಳಿಗೆ ಕಾರಣವಾಗಿರುವ ಪುಣ್ಯ ಪಾಪಗಳ ಉಜ್ವಲ ನಿರೂಪಣೆ ವಡ್ಡಾರಾಧನೆಯ ಕಥೆಗಳ ಹಂದರವಾಗಿದೆ. ಜೀವವು ತಾನು ಮಾಡಿದ ಪಾಪ-ಪುಣ್ಯಗಳಿಗನುಗುಣವಾಗಿ ಜನ್ಮಾಂತರಗಳಲ್ಲಿ ಬಿದ್ದು ತೊಳಲಬೇಕಾಗುವ ಭವಾವಳಿ ಕಥೆಗಳು ಇಲ್ಲಿನವು. ಆ ಜನ್ಮಗಳು ನರಜನ್ಮವೇ ಆಗಿರಬೇಕೆಂಬುದೇನಿಲ್ಲ. ಪ್ರಾಣಿಜನ್ಮವೂ ಆಗಿರಬಹುದು, ದೇವಜನ್ಮವೂ ಆಗಿರಬಹುದು. ಜನ್ಮಾಂತರಗಳಲ್ಲಿ ಹಿಂದಣ ಜನ್ಮದ ಇಚ್ಛಾಶಕ್ತಿಗಳು ಮುಂದುವರಿದು ಅವುಗಳನ್ನು ಈಡೇರಿಸಿಕೊಳ್ಳುವ ಪ್ರವೃತ್ತಿ ಕಂಡು ಬರುತ್ತದೆ. ತನ್ನ ತಪಸ್ಸಿಗೆ ಒದಗಿ

ಬರುವ ಅಡ್ಡಿಗಳು ಅಂದರೆ ಉಪಸರ್ಗಗಳನ್ನು ಇಂದ್ರಿಯ ನಿಗ್ರಹಗಳ ಮೂಲಕ ಎದುರಿಸಿ ಈ ಪರೀಷಹಗಳ ಜಯವನ್ನೇ ಮುಖ್ಯ ಸಾಧನ ಮಾರ್ಗವಾಗಿಸುವ ನಿರೂಪಣೆ ಈ ಕಥಾನಕಗಳಲ್ಲಿ ಕಂಡು ಬರುತ್ತದೆ.

ಇಲ್ಲಿ ಬರುವ ಎಲ್ಲ ಕಥೆಗಳಲ್ಲಿ ಏಕರೂಪವಾದ ಕಥಾಸಂವಿಧಾನವನ್ನು ಕಾಣುತ್ತೇವೆ. ಧರ್ಮದ ಹೂರಣವನ್ನು ತುಂಬುವುದೇ ಇವುಗಳ ಮುಖ್ಯ ಉದ್ದೇಶ. ಪುಣ್ಯದ ಫಲವಾಗಿ ಮಾನವನಿಗೆ ಸ್ವರ್ಗಸುಖಗಳು ದೊರೆಯುತ್ತವೆ. ಪಾಪದ ಫಲವಾಗಿ ಅನೇಕ ಬಗೆಯ ನರಕದರ್ಶನ ನಿಶ್ಚಿತ ಎನ್ನುವ ತತ್ತ್ವೋಪದೇಶ ಪ್ರಧಾನವಾಗಿದೆ. ಮಾನವನ ಬದುಕು ಕ್ಷಣಿಕ. ದೇಹ ಅಶಾಶ್ವತ. ಕ್ಷಮಾಗುಣವೇ ಶ್ರೇಷ್ಠತಮ ಎಂಬ ಸಾರವನ್ನು ಸಾರುವ ಕಥಾನಿರೂಪಣೆ ಜೈನಧರ್ಮದ ಪಾರಮ್ಯವನ್ನು ಮೆರೆಯುವುದಕ್ಕೆ ಬಳಕೆಯಾಗಿದೆ.

ವಡ್ಡಾರಾಧನೆಯ ಕಥಾವಸ್ತು ಮತ್ತು ಉದ್ದೇಶಗಳು ಧರ್ಮ ಪ್ರಧಾನಗವಾಗಿದ್ದರೂ ಸಾಹಿತ್ಯಕವಾದ ಮೇಲ್ಮೈಯನ್ನು ತೋರುವ ಅನೇಕ ಅಂಶಗಳು ಪರಿಮೂಡಿವೆ. ಇಲ್ಲಿನ ಕಥೆಗಳಲ್ಲಿ ಅಂದಿನ ತತ್ಕಾಲೀನ ಜನಸಾಮಾನ್ಯರ ಜೀವನ ವಿಧಾನಗಳು, ಆಚಾರ-ವಿಚಾರ, ವ್ಯವಹಾರ, ಭಾಷೆಯ ರೀತಿ, ಸಮಾಜದ ಬೇರೆ ಬೇರೆ ಸ್ತರಗಳಿಗೆ ಸೇರಿದ ಪಾತ್ರಗಳ ನಡತೆ ಮುಂತಾದವುಗಳು ಸಮಕಾಲೀನ ಸಾಮಾಜಿಕ ಅಂಶಗಳನ್ನು ತಿಳಿಯಲು ಸಹಾಯಕ. ಕಥನ ನಿರೂಪಣೆ, ಜನಭಾಷಾ ಪ್ರಯೋಗ, ಗದ್ಯಶೈಲಿ ಇವುಗಳು ಪ್ರಾಚೀನ ಕಾಲದಲ್ಲಿನ ಜನಪದ ದೃಷ್ಠಿಯನ್ನು ಪರಿಚಯಿಸುವ ಸಮರ್ಥ ಕೃತಿಯಾಗಿದೆ. ಧಾರ್ಮಿಕವಾಗಿ ಭವಾವಳಿಗಳ ತೊಡರ್‌ನಿಂದ ಸಂಕೀರ್ಣವಾಗಿ ಕಂಡರೂ, ಕಥೆ, ಉಪಕಥೆಗಳು ಕಥೆ ಹೇಳುವ ಕ್ರಮದಲ್ಲಿ ತೋರುವ ಜಾಣ್ಮೆ, ಅಲ್ಲಿನ ಜನಪದ ಆಶಯಗಳು ಅನನ್ಯವಾದವು. ಈ ದೃಷ್ಠಿಯಿಂದ ಮಾರ್ಗಪರಂಪರೆಗೂ ಮೊದಲು ದೇಸಿಯ ದಿಗ್ವಿಜಯವನ್ನು ಸಾರಿದ ಕನ್ನಡದ ಮೊದಲ ಗದ್ಯಕೃತಿ ವಡ್ಡಾರಾಧನೆ ಎನ್ನುವ ಮಾತು ಅಕ್ಷರಸಃ ಸತ್ಯವಾದ ಮಾತು ಎಂಬುದು ನಿರ್ವಿವಾದವಾಗಿದೆ.

**ಚಾವುಂಡರಾಯ**

ಚಾವುಂಡರಾಯ ಪುರಾಣದ ಕರ್ತೃವೆಂದು ತಿಳಿಯಲಾದ ಈ ಕವಿಯ ಕಾಲವನ್ನು 10ನೆಯ ಶತಮಾನವೆಂದೂ, ತನ್ನ ಕೃತಿ ರಚನೆಯನ್ನು ಕ್ರಿ.ಶ. 978 ರಲ್ಲಿ ಮಾಡಿರುವುದಾಗಿ ತಿಳಿದು ಬರುತ್ತದೆ. 'ಚಾರಿತ್ರ ಸಾರ' ಎಂಬ ಒಂದು ಸಂಸ್ಕೃತ ಗ್ರಂಥವನ್ನು ರಚಿಸಿರಬಹುದೆಂಬ ಊಹೆ ಇದ್ದರೂ, ಅದು ಉಪಲಬ್ಧವಿಲ್ಲ.

ಚಾವುಂಡರಾಯ ಗಂಗರ ಅರಸರಾಗಿದ್ದ ಇಮ್ಮಡಿ ಮಾರಸಿಂಹ ಇವನ ಮಗ ನಾಲ್ವಡಿ ರಾಚಮಲ್ಲ ಮತ್ತು ಅವನ ತಮ್ಮನಾದ ರಕ್ಕಸಗಂಗ ಇವರುಗಳಲ್ಲಿ ಯೋಧನಾಗಿ, ಸೇನಾಪತಿಯಾಗಿ, ಸಂಧಿವಿಗ್ರಹಿ ಮತ್ತು ಮಂತ್ರಿಯಾಗಿ ಗಂಗ

ಸಾಮ್ರಾಜ್ಯದಲ್ಲಿ ಅವಿರತವಾಗಿ ತನ್ನ ಶೌರ್ಯ, ಸಾಹಸಗಳನ್ನು ಮೆರೆದು ಕವಿಯಾಗಿಯೂ ಪ್ರಸಿದ್ಧಿಯನ್ನುಸಾಧಿಸಿದ ಕಲಿ ಮತ್ತುಕವಿ ಎರಡೂ ಹೌದು. ಇಮ್ಮಡಿ ಮಾರಸಿಂಹ ಮತ್ತು ಚಾವುಂಡರಾಯರಿಬ್ಬರೂ ಸಹಪಾಠಿಗಳಾಗಿದ್ದರೆಂಬುದಾಗಿಯೂ ಆದಿಪುರಾಣದಿಂದ ವ್ಯಕ್ತವಾಗುತ್ತದೆ. ಶ್ರವಣಬೆಳಗೊಳದ ಶಾಸನವೊಂದರಲ್ಲಿ ಉಲ್ಲೇಖವಾಗಿರುವ ಆಧಾರದಿಂದಲೂ ಚಾವುಂಡರಾಯ ಮತ್ತು ಮಾರಸಿಂಹರ ನಡುವಿನ ಸಂಬಂಧಗಳು ಅನ್ಯೋನ್ಯವಾಗಿದ್ದು ನಂತರದ ಅರಸರ ಕಾಲಕ್ಕೂ ವಿಸ್ತಾರಗೊಂಡು, ಅಧಿಕಾರ, ಅಂತಸ್ತುಗಳನ್ನು ಪ್ರಕಟವಾಗುತ್ತವೆ.

ಚಾವುಂಡರಾಯನಿಗೆ ಗೊಮ್ಮಟ ಅಥವಾ ಗೊಮ್ಮಟರಾಯ ಎಂಬ ಮತ್ತೊಂದು ಹೆಸರೂ ಇದ್ದಿತು. ಆದ ಕಾರಣದಿಂದಲೇ ಅವನು ಸ್ಥಾಪಿಸಿದ ಬಾಹುಬಲಿ ವಿಗ್ರಹಕ್ಕೆ ಗೊಮ್ಮಟೇಶ್ವರ (ಗೊಮ್ಮಟಸ್ಯ ಈಶ್ವರಃ) ಎಂಬ ಹೆಸರು ಬಂದಿದೆ ಎಂದು ಹೇಳಲಾಗುತ್ತಿದೆ. ಎರಡು ಹೆಸರುಗಳಿದ್ದುದರಿಂದ ಚಾವುಂಡರಾಯನನ್ನು ರಾಯ ಮತ್ತು ಅಣ್ಣ ಎಂಬುದಾಗಿ ಕರೆಯಲಾಗುತ್ತಿತ್ತು. ಬಹುಶಃ ರಾಯ ಎಂಬುದು ಅವನ ಬಿರುದಿರಬೇಕು ಎನ್ನಲಾಗಿದೆ. ಚಾವುಂಡರಾಯನು ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರನನ್ನು ಪ್ರತಿಷ್ಠಾಪಿಸಿ ಅಪರಿಮಿತವಾದ ವೆಚ್ಚಮಾಡಿ ಅದಕ್ಕೆ ಅನೇಕ ಗ್ರಾಮಗಳನ್ನು ದತ್ತಿ ಬಿಟ್ಟುದುದಕ್ಕಾಗಿ ರಾಚಮಲ್ಲನು ಚಾವುಂಡರಾಯನ ಔದಾರ್ಯವನ್ನು ಮೆಚ್ಚಿ 'ರಾಯ' ಎಂಬ ಬಿರುದನ್ನು ನೀಡಿದನು ಎಂಬುದಾಗಿ ಭುಜಬಲಿ ಶತಕದಲ್ಲಿ ಉಲ್ಲೇಖವಿದೆ. 'ರಾಯ' ಎಂಬುದು ಚಾವುಂಡರಾಜ ಎಂಬುದರ ಹ್ರಸ್ವರೂಪವಿರಬೇಕು ಎಂಬುದನ್ನು ತಿಳಿಯಬಹುದು.

ಚಾವುಂಡರಾಯ ಬ್ರಾಹ್ಮಣ ಕುಲದವನಾಗಿದ್ದು, ಕ್ಷತ್ರಿಯ ವೃತ್ತಿಯನ್ನು ನಡೆಸಿದನು. ತನಗೆ ನಾಗವರ್ಮನೆಂಬ ತಮ್ಮನಿದ್ದನೆಂಬುದಾಗಿ ತನ್ನ ಕೃತಿಯ ಕೊನೆಯಲ್ಲಿ ಹೇಳಿಕೊಂಡಿದ್ದಾನೆ. ಸಮರಪರಶುರಾಮ ಎಂಬ ಬಿರುದಾಂಕಿತನಾಗಿದ್ದುದಲ್ಲದೆ ಸಮರ ದುರಂದರ, ವೀರಮಾರ್ತಾಂಡ, ರಣರಂಗ ಸಿಂಗ, ವೈರಿಕುಲ ಕಾಲದಂಡ, ಭುಜವಿಕ್ರಮ, ಛಲದಂಕ ಗಂಗ, ಸುಭ ಜಿನಧರ್ಮಾವಲಂಬಿಯಾಗಿದ್ದನು. ಅವನಿಗೆ ಜಿನದೇವಣನೆಂಬ ಮಗನಿದ್ದನು. ಚಾವುಂಡರಾಯನಿಗೆ ಅಜಿತಸೇನಾಚಾರ್ಯ ಮತ್ತು ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿ ಎಂಬ ಇಬ್ಬರು ಗುರುಗಳಿದ್ದರು. ಇಂಥ ಮತಿವರ್ಯರ ಮಾರ್ಗದರ್ಶನದಲ್ಲಿ ಉನ್ನತ ಜ್ಞಾನಾರ್ಜನೆಯನ್ನು ಸಾಧಿಸಿದ್ದಲ್ಲದೆ ಧರ್ಮಬೀರುವಾಗಿ ಗುಣಸಾಗರನಾಗಿ ಮಾರ್ಪಟ್ಟಿದುದಕ್ಕೆ ಆತನಿಗಿದ್ದ ಗುಣರತ್ನ ಭೂಷಣಂ, ಗುಣಮಕಾವಂ, ಸಮ್ಯಕ್ ರತ್ನಾಕರಂ, ಶೌಚಾಭರಣಂ ಎಂಬ ಬಿರುದುಗಳೇ ಸಾಕ್ಷಿಯಾಗಿದೆ. ಹೀಗಾಗಿ ಕರ್ನಾಟಕದ ಇತಿಹಾಸದಲ್ಲಿ

ಸಾಹಸಮಯವಾದ ಶೌರ್ಯ ಸ್ವರೂಪ ಗುಣನಿಧಿಯಾಗಿ ಒಂದು ಮುಖದರ್ಶನವಾದರೆ, ಅತ್ಯಂತ ಉದಾರಿಯಾಗಿ ತಾನೂ ಕವಿಯಾಗಿ ಅನೇಕ ಕವಿಜನ ಪೋಷಕನೂ ಆಗಿ ಸಾಂಸ್ಕೃತಿಕವಾಗಿ ಮತ್ತೊಂದು ಆಯಾಮವನ್ನು ವಿಸ್ತರಿಸಿದ ಮಹೋನ್ನತ ವ್ಯಕ್ತಿತ್ವ ಚಾವುಂಡರಾಯನದು.

ಚಾವುಂಡರಾಯ ಪುರಾಣವನ್ನು ರನ್ನ ಕವಿ ಬರೆದು ಚಾವುಂಡರಾಯನ ಹೆಸರಿನಲ್ಲಿ ಪ್ರಕಟಿಸಿರಬೇಕೆಂಬ ಕೆಲವು ವಿದ್ವಾಂಸರ ಅಭಿಪ್ರಾಯವಿದೆ. ಏಕೆಂದರೆ ರನ್ನನ ಅಜಿತನಾಥಪುರಾಣ ಮತ್ತು ಚಾವುಂಡರಾಯ ಪುರಾಣಗಳಲ್ಲಿನ ಕೆಲವು ಪದ್ಯಭಾಗಗಳ ಸಾಮ್ಯವನ್ನು ಕಂಡು ಇಂಥ ಅಭಿಪ್ರಾಯ ವ್ಯಕ್ತವಾಗಿದೆ. ಅಲ್ಲದೆ ಚಾವುಂಡರಾಯನ ನಂತರದ ಕವಿಗಳು ಚಾವುಂಡರಾಯನನ್ನು ಕವಿಯೆಂದೇ ಹೆಸರಿಸಿಲ್ಲವೆಂಬ ಕಾರಣಗಳನ್ನು ನೀಡಲಾಗಿದೆ. ಆದರೆ ಚಾವುಂಡರಾಯನನ್ನು ಇದಿಷ್ಟೇ ಕಾರಣಕ್ಕೆ ಕವಿಯಲ್ಲವೆಂದು ಹೇಳಲಾಗದೆಂದು, ಸಮಕಾಲೀನವಾದ ಇಬ್ಬರ ಕವಿ ಕೃತಿಗಳಲ್ಲಿ ಸಾಮ್ಯವಿರಲೇಬಾರದೆಂದಿಲ್ಲ, ರನ್ನನು ಸಹ ತನ್ನ ಕೃತಿಗಳನ್ನು ಹೆಸರಿಸುವಾಗ ಚಾವುಂಡರಾಯ ಪುರಾಣವನ್ನು ಹೆಸರಿಸಿರುವುದಿಲ್ಲವಾದ್ದರಿಂದ ಚಾವುಂಡರಾಯನನ್ನು ಕವಿಯಲ್ಲವೆಂದು ಹೇಳಲಾಗದು. ಚಾವುಂಡರಾಯ ಪುರಾಣದ ಕರ್ತೃ ಚಾವುಂಡರಾಯ ಎಂಬುದಾಗಿ ಈಗಾಗಲೇ ನಿರ್ಧರಿಸಲಾಗಿದೆ.

ಚಾವುಂಡರಾಯ ಪುರಾಣವನ್ನು ತ್ರಿಷಷ್ಟಿ ಲಕ್ಷಣ ಮಹಾಪುರಾಣ ಎಂತಲೂ ಕರೆಯಲಾಗುತ್ತಿದೆ. ಇದರಲ್ಲಿ ಜೈನಧರ್ಮದ ಮಹಾಪುರುಷರಾದ 63 ಜನ ಶಲಾಕಾ ಪುರುಷರ ಜೀವನ ಚರಿತ್ರೆಯನ್ನು ಹೇಳಲಾಗಿದೆ. 24 ಜನ ತೀರ್ಥಂಕರರು, 12 ಜನ ಚಕ್ರವರ್ತಿಗಳು, 9 ಜನ ಬಲದೇವರುಗಳು, 9 ಜನ ವಾಸುದೇವರುಗಳು ಮತ್ತು 9 ಜನ ಪ್ರತಿವಾಸುದೇವರುಗಳು, ಹೀಗೆ ಒಟ್ಟು 63 ಜನ ಜೈನಧರ್ಮ ಮಹಾಪುರುಷರುಗಳ ಜೀವನ ಚರಿತ್ರೆಗಳೇ ಚಾವುಂಡರಾಯ ಪುರಾಣದ ಕಥಾವಸ್ತು. ಒಬ್ಬೊಬ್ಬ ಮಹಾಪುರಷನನ್ನು ಕುರಿತು ಒಂದೊಂದು ಕೃತಿ ರಚನೆಗೆ ಸಾಧ್ಯವಿರುವಷ್ಟು ವಿಶಾಲ ವಸ್ತುರೂಪವನ್ನು ಒಂದೇ ಕೃತಿಯಲ್ಲಿ ಬರುವಂತೆ ಅಡಕಗೊಳಿಸಿ ಗದ್ಯರೂಪದಲ್ಲಿ ಬರೆದಿರುವ ಹಿರಿಮೆ ಚಾವುಂಡರಾಯನದಾಗಿದೆ. ಕಾವ್ಯ ನಿರೂಪಣೆಯಲ್ಲಿ ತೋರಿರುವ ಸಂಗ್ರಹ ಗುಣ ಅನುಕರಣೀಯವಾದುದಾಗಿದೆ. ಕವಿ ಪರಮೇಷ್ಠಿಯ 'ವಾಗಾರ್ಥ ಸಂಗ್ರಹ'ವು ಈ ಕವಿಗೆ ಪ್ರೇರೇಪಣೆಯಾಗಿರುವುದರಿಂದ ಸಂಗ್ರಹ ಕೌಶಲ್ಯವನ್ನು ಮೆರೆದಿದ್ದಾನೆ. ಮಹಾಪುರಾಣವನ್ನು ಚಾವುಂಡರಾಯ ಅನುಸರಿಸಿ ಕೃತಿ ರಚಿಸಿದ್ದರೂ ಮಹಾಪುರಾಣದಲ್ಲಿನ ಕೆಲವಾರು ಅಂಶಗಳು ಚಾವುಂಡರಾಯ ಪುರಾಣದಲ್ಲಿ ಬರುತ್ತವೆ. ಉದಾ. ಮಧುಕ್ರೀಡರ ವರ್ತಮಾನ ವೃತ್ತಾಂತ ಮತ್ತು 'ಪೂರ್ವಭವ ವೈರಿ' ಧೂಮಕೇತು ಪ್ರದ್ಯುಮ್ನನನ್ನು ಅಪಹರಿಸಿದ ವೃತ್ತಾಂತ ಮುಂತಾದ ಕೆಲವು

ಪ್ರಸಂಗಗಳು ಚಾವುಂಡರಾಯನ ಪುರಾಣ ವೈಶಿಷ್ಟ್ಯವನ್ನು ಹೇಳುವಂಥವಾಗಿವೆ. ತನಗಿಂತಲೂ ಹಿಂದಿನ ಕನ್ನಡ ಜೈನ ಪುರಾಣಗಳಿಂದಲೂ ಅನೇಕ ಅಂಶಗಳನ್ನು ಸ್ವೀಕರಿಸಿ ಕಾವ್ಯ ರಚನೆ ಮಾಡಿದ್ದಾನೆಂಬುದಕ್ಕೆ ಪಂಪನ ಆದಿಪುರಾಣದಲ್ಲಿನ ವಿಷಯಗಳು ಚಾವುಂಡರಾಯ ಪುರಾಣದ ಆದಿಪುರಾಣ ಭಾಗದಲ್ಲಿವೆ ಎಂಬುದನ್ನು ಗಮನಿಸಿದಾಗ ತಿಳಿಯುತ್ತದೆ.

ಚಾವುಂಡರಾಯ ಪುರಾಣವನ್ನು ಒಂದು ಗದ್ಯಕೃತಿಯೆಂಬುದಾಗಿ ಹೇಳಲಾಗಿದ್ದರೂ ಕೃತಿಯ ಆರಂಭ ಮತ್ತು ಅಂತ್ಯಗಳಲ್ಲಿ ಪದ್ಯಗಳಿವೆ ಹಾಗೂ ಪ್ರತಿಯೊಂದು ಪುರಾಣದ ಪ್ರಾರಂಭದಲ್ಲಿ ಅಲ್ಲಿನ ನಾಯಕ ಅಂದರೆ ತೀರ್ಥಂಕರಾದಿಗಳನ್ನು ಸ್ತುತಿಸುವುದಕ್ಕಾಗಿ ಕಂದ ಪದ್ಯಗಳನ್ನು ಬಳಸಿದ್ದಾನೆ. ತನಗಿಂತಲೂ ಹಿಂದಣ ಮಹಾಪುರಾಣ ರಚನಾಕಾರರಯಾದಿಯನ್ನು ಕೊಟ್ಟಿರುವುದಲ್ಲದೆ, ಜಿನಸೇನನಿಂದ ಅದಕ್ಕೆ 'ವಾಗಾರ್ಥ ಸಂಗ್ರಹ' ಎಂಬುದಾಗಿ ನಾಮಕರಣವಾಗಿದೆ. ಇದನ್ನೆ ಗುಣಭದ್ರನು 'ಗದ್ಯಕಥಾ' ಎಂಬುದಾಗಿ ಕರೆದಿದ್ದಾನೆ. ಕವಿ ಪರಮೇಶ್ವರನಿಂದ ರಚಿತವಾದ 'ವಾಗಾರ್ಥ ಸಂಗ್ರಹ' ಗದ್ಯಗ್ರಂಥವಾಗಿದ್ದು ಜಿನಸೇನಾಚಾರ್ಯ, ಗುಣಭದ್ರ, ಇವರು ಮಹಾ ಪುರಾಣಕ್ಕಿಂತ ಸಂಗ್ರಹರೂಪದಲ್ಲಿದ್ದುದರಿಂದ ಚಾವುಂಡರಾಯ ತನ್ನ ಪುರಾಣವನ್ನು ಹೆಚ್ಚು ಸಂಗ್ರಹ ರೂಪದಲ್ಲಿ ರಚಿಸಲು ಸಾಧ್ಯವಾಗಿರಬೇಕು. ತನಗಿಂತಲೂ ಹಿಂದಿನ ಎಲ್ಲಾ ಬೃಹತ್ ಕಥಾನಕಗಳನ್ನು ಗಮನಿಸಿದ್ದ ಚಾವುಂಡರಾಯ ಅವೆಲ್ಲವುಗಳ ಸಾರಸಂಗ್ರಹ ರೂಪದ ಕಾವ್ಯರಚನೆಯಲ್ಲಿ ಯಶಸ್ವಿಯಾಗಿದ್ದಾನೆ. ಧರ್ಮಸಂಬಂಧೀ ಕಥೆಗಳು ಸುದೀರ್ಘವಾಗಿರುವುದು ಸಹಜವಾಗಿದ್ದರೂ ಚಾವುಂಡರಾಯ ಅತ್ಯಂತ ಸಂಯಮದಿಂದ ಕಥಾನಕದ ಸರಣಿಯ ಕೊಂಡಿ ಕಳಚದ ರೀತಿಯಲ್ಲಿ ಸಾರಾಂಶವನ್ನು ತಿಳಿಸಿ ಮುಂದುವರಿಯುತ್ತಾನೆ. ಇಲ್ಲಿನ ಪ್ರಧಾನ ಉದ್ದೇಶ ಕಾವ್ಯದೃಷ್ಟಿಗಿಂತ ಹೆಚ್ಚಿನದಾಗಿ ಧಾರ್ಮಿಕ ದೃಷ್ಟಿಯಾಗಿದೆ. ಕೆಲವೊಮ್ಮೆ ಸಂಗ್ರಹಣೆಯಲ್ಲಿ ತೊಡಕನ್ನು ಎದುರಿಸಬೇಕಾಗಿ ಬಂದರೂ ಸಮಸ್ತವನ್ನು ಒಂದೆಡೆಯಲ್ಲಿ ಅಡಕಗೊಳಿಸುವ ಪ್ರಯತ್ನದಲ್ಲಿ ಕಾವ್ಯಾತ್ಮಕ ವಿವರಣೆಯನ್ನು ಕೈಬಿಟ್ಟಿದ್ದಾನೆ.

ಚಾವುಂಡರಾಯ ತನ್ನ ಪೂರ್ವಸೂರಿಗಳನ್ನು ಅನುಸರಿಸಿದರೆ ತಾನು ಸಹ ಉತ್ತರಕಾಲೀನ ಕವಿಗಳಿಗೆ ಪ್ರೇರಣೆಯಾಗಿದ್ದು ಹಸ್ತಿಮಲ್ಲ, ಕರ್ಣಪಾರ್ಯ, ರನ್ನ ಮುಂತಾದವರನ್ನು ಪ್ರಭಾವಿಸಿದ್ದಾನೆ. ಕಾವ್ಯಬಂಧದಲ್ಲಿ ಸರಳತೆಯನ್ನು ಸಾಧಿಸಿದಂತೆ ಹಳಗನ್ನಡ ಗದ್ಯಶೈಲಿಯ ವಿಶಿಷ್ಟ ಮಾದರಿಯಾಗಿ ಹದವರಿತ ಕನ್ನಡ-ಸಂಸ್ಕೃತ ಶಬ್ದಗಳಿಂದ ಕೂಡಿದ ಲಘುದಾಟಿಯನ್ನು ಅನುಸರಿಸಿದ್ದಾನೆ. ಕಥೆಯನ್ನು ಹೇಳುವ ಕ್ರಮದಲ್ಲಿ ಏಕತಾನತೆಯಿದ್ದರೂ ಶೀಘ್ರಗತಿಯಿಂದ ಕಥಾನಕ ಸಾಗುವುದರಿಂದ ಸಹ್ಯವಾಗಿಸಿಕೊಳ್ಳುತ್ತವೆ. ಹಳಗನ್ನಡ ಗದ್ಯದ ಪ್ರಾತಿನಿಧಿಕ ಕೃತಿಗಳಲ್ಲಿ ಚಾವುಂಡರಾಯ

ಪುರಾಣವೂ ಒಂದಾಗಿದ್ದು, ವಡ್ಡಾರಾಧನೆ ಕೃತಿ ದೊರೆಯುವುದಕ್ಕೂ ಪೂರ್ವದಲ್ಲಿ ಇದೇ ಕನ್ನಡದ ಚೊಚ್ಚಲ ಗದ್ಯಕೃತಿ ಎಂದು ಕರೆಸಿಕೊಳ್ಳುತ್ತಿತ್ತು. ಆ ಸ್ಥಾನದಿಂದ ಬಿಡುಗಡೆ ಹೊಂದಿದ್ದರೂ ಚಾವುಂಡರಾಯ ಪುರಾಣಕ್ಕೆ ಅದರದೇ ಆದ ಮಹತ್ವವಿದೆ. ಜಿನಸೇನಾಚಾರ್ಯರ ಪೂರ್ವ ಪುರಾಣ ಮತ್ತು ಗುಣಭದ್ರನ ಬೃಹತ್ಕಥೆಗಳಿಗಿಂತ ಪೂರ್ವದಲ್ಲಿನ ಜೈನ ಕೃತಿ ವಿವರಗಳಿಗಾಗಿ ಚಾವುಂಡರಾಯ ಪುರಾಣವೇ ದಾಖಲೆಯನ್ನೊದಗಿಸುವ ಕೃತಿಯಾಗಿರುವುದಲ್ಲದೆ ಜೈನಧಾರ್ಮಿಕ ಯತಿ ಪರಂಪರೆ ಮತ್ತು ಜೈನಧರ್ಮ ಚರಿತ್ರೆಯ ದೃಷ್ಟಿಯಿಂದ ಚಾವುಂಡರಾಯ ಪುರಾಣ ಪ್ರಮುಖವಾದ ಗ್ರಂಥವಾಗಿದೆ.

**ಆಂಡಯ್ಯ**

ಆಧುನಿಕ ಪೂರ್ವ ಕನ್ನಡ ಕಾವ್ಯ ಸಂದರ್ಭದಲ್ಲಿ ನಾಡು-ನುಡಿಯ ಬಗೆಗೆ ಅತಿಶಯವಾದ, ವಿಶಿಷ್ಟವಾದ ಅಭಿಪ್ರಾಯವನ್ನು ತಳೆದಿದ್ದವನು ಆಂಡಯ್ಯ ಮಾತ್ರ. ಆಂಡಯ್ಯನ ಹೆಸರು, ಕೃತಿಗಳ ಸಂಖ್ಯೆ, ಅವುಗಳ ಹೆಸರು, ಕಾಲ, ದೇಶ, ಮತ ಮತ್ತು ಅವನ ರಾಜಾಶ್ರಯಗಳ ಬಗೆಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಆದರೆ ಸಿಕ್ಕಿರುವ ಅವನ ಏಕೈಕ ಕೃತಿ 'ಕಬ್ಬಿಗರ ಕಾವ' ದ ಒಳ ವಿವರಗಳಿಂದ ಸತ್ಯಗಳನ್ನು ತಿಳಿಯಬೇಕಾಗುತ್ತದೆ. ಇವನೊಬ್ಬ ಜೈನ ಕವಿ. ಇವನ 'ಕಬ್ಬಿಗರ ಕಾವ' ಚಂಪೂ ವಿನ್ಯಾಸದ ಖಂಡಕಾವ್ಯ. 'ಕಾವನ ಗೆಲ್ಲ' ಎಂಬುದು ಅದರ ಮತ್ತೊಂದು ಹೆಸರು. ಇದನ್ನು ಸಂಸ್ಕೃತ ಪಂಡಿತರು 'ಮದನ ವಿಜಯ' ಎಂಬುದಾಗಿ ಕರೆದಿದ್ದಾರೆ. ಅಲ್ಲದೆ ಇದರ ಅರ್ಥ, ಲಕ್ಷಣ, ತಿರುಳನ್ನು ಅನುಲಕ್ಷಿಸಿ ಇತರೆ ಸಹೃದಯ ಪಂಡಿತರು 'ಸೊಬಗಿನ ಸುಗ್ಗಿ' ಎಂದು ಕರೆದಿದ್ದಾರೆ ಎಂದು ಸ್ವತಃ ಕವಿಯೇ ತನ್ನ ಕಾವ್ಯದ ಅಂತ್ಯದಲ್ಲಿ ಹೇಳಿಕೊಂಡಿದ್ದಾನೆ.

ಈತನ ಕಾಲ ಕ್ರಿ.ಶ. 13ನೇ ಶತಮಾನದ ಪೂರ್ವಾರ್ಧ ಬನವಾಸಿ ಪ್ರಾಂತದಲ್ಲಿ ಸುಮಾರು 1180-1217 ರ ಅವಧಿಯಲ್ಲಿ ಆಳಿದ ಹಾನಗಲ್ಲು ಕದಂಬ ಶಾಖೆಯ ಕಾಮದೇವನ ಆಶ್ರಯದಲ್ಲಿ ಇದ್ದನೆಂಬುದು ಹಲವರ ಅಭಿಪ್ರಾಯ. ಆದರೆ ಜೈನಧರ್ಮೀಯನಾದ ಈತ ರಾಜಾಶ್ರಯ ಪಡೆದಿರಲಿಲ್ಲ. ಅವನ ಕಾವ್ಯದಲ್ಲಿ ಅಂದಿನ ಕದಂಬ, ಹೊಯ್ಸಳ ಅರಸರ ರಾಜಕೀಯ ಧ್ವನಿ ವ್ಯಕ್ತಗೊಂಡಿರುವುದು ತನ್ನ ನಾಡಿನ ಬಗೆಗಿದ್ದ ಪ್ರಜ್ಞೆಯ ದ್ಯೋತಕವಷ್ಟೇ ಎಂಬ ಅಭಿಪ್ರಾಯವೂ ಇದೆ. ಆಂಡಯ್ಯನಿಗೆ ತವರುನೆಲ, ತಾಯ್ನುಡಿ, ಬಿಳಿದೈವ ಗಳಲ್ಲಿ ಒಲವು, ಅಭಿಮಾನ ಅಪಾರವಾದದ್ದು. ಸಂಸ್ಕೃತದ ನೆರವಿಲ್ಲದೆ ಕನ್ನಡದಲ್ಲಿ ಕಾವ್ಯ ರಚನೆ ಅಸಾಧ್ಯ ಎಂಬ ಧೋರಣೆಯನ್ನು ಖಂಡಿಸಿ, ಅಚ್ಚಕನ್ನಡದಲ್ಲಿ ಕಾವ್ಯಕೃಷಿ ಸಾಧ್ಯ ಎಂಬುದನ್ನು ಸಾಬೀತುಗೊಳಿಸಿದ್ದಾನೆ. ಇದು ಒಂದು ಶೃಂಗಾರಮಯ ಖಂಡಕಾವ್ಯ. ಸರಳ ಶೈಲಿ, ಸಹಜ, ಸುಂದರ, ಸುಲಲಿತ. ಇದಕ್ಕೆ ಕವಿ ಆರಿಸಿಕೊಂಡ ಕಾವ್ಯವಸ್ತುವೂ ಕಾರಣವಿರಬಹುದು. ಕಾವ್ಯ ರಚನೆಗಳಲ್ಲಿ ಅನೇಕ ಕಡೆ ಎಡವುತ್ತಾನೆಂಬುದು

ನಿಜವಾದರೂ ಕನ್ನಡವನ್ನು ಕೇವಲ ಉಳಿಸದೆ, ಬೆಳೆಸುತ್ತಾನೆ. ಕನ್ನಡದಲ್ಲಿಯೂ ಉತ್ಕೃಷ್ಟ ಅಭಿವ್ಯಕ್ತಿ ಸಾಧ್ಯ ಎಂದು ಕೆಚ್ಚಿನಿಂದ ತೋರುತ್ತಾನೆ. ಕಾವ್ಯ ನಿರ್ವಹಣೆಯಲ್ಲಿ ಸಂಸ್ಕೃತ ಶಬ್ದಗಳನ್ನು ತದ್ಭವಗಳನ್ನಾಗಿ ಕಾವ್ಯಕ್ಕೆ ತರುತ್ತಾನೆ. ಪ್ರಾಕೃತವನ್ನು ಬಳಸಿದ್ದಾನೆ. ಹೀಗೆ ಸಂಸ್ಕೃತವನ್ನು ಕನ್ನಡಕ್ಕೆ ದುಡಿಸಿಕೊಳ್ಳುವಾಗ ಕನ್ನಡದ ಬಗೆಗಿನ ಅದಮ್ಯವಾದ ಪ್ರೀತಿ ಎದ್ದು ಕಾಣುತ್ತದೆಯೇ ವಿನಃ ಸಂಸ್ಕೃತದ ಮೇಲಿನ ದ್ವೇಷವಲ್ಲ. ''ಸೊಗಯಿಸ ಸತ್ಯದ ಬೆರೆಸಿದಲ್ಲದೆ .......... (ಆರ್.ವಿ. ಕುಲಕರ್ಣಿ, ಕಬ್ಬಿಗರ ಕಾವ, ಪು-10, ಕ.ಸಾ.ಪ., ಬೆಂಗಳೂರು) ಎಂಬ ಮಾತಿನಲ್ಲಿ ಬರುವ ಸೊಗಯಿಸ (ಸೊಗಯಿಸುವ) ಎಂಬ ಶಬ್ದವೇ ಇದಕ್ಕೆ ಅತ್ಯುತ್ತಮ ನಿದರ್ಶನ ಎಂದು ಎಸ್.ಎಸ್. ಕೋತಿನ (ಆಂಡಯ್ಯ, ಕ.ಸಾ.ಪ., ಬೆಂಗಳೂರು) ಹೇಳುತ್ತಾರೆ. ಇಲ್ಲಿ ಆಂಡಯ್ಯನು ಕನ್ನಡ ನಾಡನ್ನು ಬಾಯ್ತುಂಬ ಹೊಗಳಿ ತನ್ನ ಕನ್ನಡಾಭಿಮಾನವನ್ನು ಕೆಚ್ಚಿನಿಂದ ಪ್ರಕಟಿಸಿ ಒಬ್ಬ ಸತ್ಕವಿಯಾಗಿದ್ದಾನೆ.

ಅನೇಕ ಜೈನ ಕವಿಗಳಂತೆ ಆಂಡಯ್ಯ ಸಹ ಚಂಪೂ ಕೃತಿಯನ್ನು ಬರೆಯುತ್ತಾನೆ. ಈತ ಚತ್ತಾಣ, ಬೆದಂಡೆ, ವಚನ, ರಗಳೆ ಮೊದಲಾದ ದೇಸಿ ಛಂದಸ್ಸುಗಳಲ್ಲೊಂದನ್ನು ಆಯ್ದುಕೊಳ್ಳಬಹುದಾಗಿತ್ತು. ಆದರೆ ಮುಖ್ಯವಾಗಿ ಸಂಸ್ಕೃತದಲ್ಲಿನ ಅಭಿವ್ಯಕ್ತಿ ಸಾಧ್ಯತೆ ಕನ್ನಡಕ್ಕೂ ಸಾಧ್ಯ ಎಂಬುದನ್ನು ತೋರಿಸುವ ಧೋರಣೆ ಅವನಿಗೆ ಚಂಪೂ ಆಯ್ದುಕೊಳ್ಳುವಂತೆ ಮಾಡಿದೆ.

ಅವನ ಕಾವ್ಯಕ್ಕೆ ವಸ್ತುವನ್ನೂ ಸಹ ಸಂಸ್ಕೃತದಿಂದಲೇ ತರುತ್ತಾನೆ. ಆದರೆ ಅದನ್ನು ನಿರೂಪಿಸುವಾಗ ಪ್ರಾದೇಶಿಕತೆಯ ಸೊಗಡನ್ನು ತರುತ್ತಾನೆ. ಹೀಗೆ ಸಂಸ್ಕೃತ ಕಥೆಯನ್ನು ಕನ್ನಡ ಕಾವ್ಯವಾಗಿಸುತ್ತಾನೆ ಮತ್ತು ಸಂಸ್ಕೃತವನ್ನೂ ಕನ್ನಡವಾಗಿಸುತ್ತಾನೆ. ಅಲ್ಲದೆ ಕಾವ್ಯ ನಾಯಕನಾದ ಮನ್ಮಥನನ್ನು ಕನ್ನಡಿಗನನ್ನಾಗಿಸುತ್ತಾನೆ. ಅದರ ಕಥಾಸಾರ ಸ್ಥೂಲವಾಗಿ ಇಂತಿದೆ.

ಹಲವು ನಾಲಿಗೆಯುಳ್ಳ ಆದಿಶೇಷನಿಂದಲೂ ಬಣ್ಣಿಸಲಾಗದ ಕನ್ನಡ ನಾಡಿನಲ್ಲಿ 'ಪೂವಿನ ಪೊಳಲು' ಎಂಬುದೊಂದು ಪಟ್ಟಣ. ಅದನ್ನು ನನೆಯಂಬನೆಂಬ ಅರಸ ಶೌರ್ಯ, ಕೀರ್ತಿ, ತ್ಯಾಗಗಳಿಂದ ಆಳುತ್ತಿದ್ದನು. ಒಂದು ಸಲ ಶ್ರಾವಣದ ಮುಂಜಾನೆ ಆ ರಾಜನಿಗೆ ಕನಸೊಂದು ಬಿದ್ದು, ಅದರಲ್ಲಿ ಮಿದುಗಲ್ಲಿನ ಗೊಂಬೆಯಂತ ಹೆಣ್ಣೊಬ್ಬಳನ್ನು ಕಂಡನು. ಅದೇ ವೃತ್ತಾಂತವನ್ನು ರಾಜ ತನ್ನ ನಗೆಗಾರನಿಗೆ ವಿವರಿಸಲಾಗಿ ಅದು ನಿಜವಾಗುವುದೆಂದು ಉತ್ತರಿಸಿ, ಹೂದೋಟಕ್ಕೆ ಹೋಗಿ ನೋಡಬೇಕೆಂದು ವಿನಂತಿಸಿಕೊಂಡನು. ಅಂತೆಯೇ ಮಾಡಿದಲ್ಲಿ ಅಲ್ಲಿನ ಮಾಮರದ ಕೆಳಗೆ ಬೆಳವೆಣ್ಣೆನಂತೆ ಕುಳಿತಿದ್ದ ಅಪ್ಸರೆಯನ್ನು ಕಂಡು ನೀನಾರೆಂದು ವಿಚಾರಿಸಲಾಗಿ ಅವಳು ತನ್ನ ಪೂರ್ವದ ವೃತ್ತಾಂತವನ್ನು ವಿವರಿಸುವಳು. ಇಲ್ಲಿಂದ ಮತ್ತೆ ಕಥೆ ಸಿಂಹಾವಲೋಕನ ಕ್ರಮದ ಮೂಲಕ ಮುಂದುವರೆಯುತ್ತದೆ.

ಕತೆಯ ಮುಂದುವರೆದ ಭಾಗದಲ್ಲಿ 'ಕಂಪಿನ ಪೊಳಲು' ಎಂಬುದೊಂದು ಪಟ್ಟಣ, ಅದನ್ನು ಆಳುವ ಅರಸ ಮನ್ಮಥ. ಇಚ್ಛೆಗಾರ್ತಿ ಎಂಬುವವಳು ಈತನ ಮಡದಿ. ಶಿವನು ಚಂದಿರನನ್ನು ಸೆರೆಹಿಡಿದ ದೂರನ್ನು ಜೊನ್ನವಕ್ಕಿಯೊಂದು ಮನ್ಮಥನ ಮುಂದಿಡುತ್ತದೆ. ಅದನ್ನು ಈತ ಬಿಡುಗಡೆಗೊಳಿಸಲು ಮಾಡಿದ ಸಂಧಾನದ ಪ್ರಯತ್ನ ವಿಫಲವಾಗುತ್ತದೆ. ಈ ಕಾರಣದಿಂದ ಯುದ್ಧ ಪ್ರಾರಂಭವಾಗಿ ಮನ್ಮಥನಿಂದ ಶಿವ ಮತ್ತು ಅವನ ಸೈನ್ಯ ಸೋಲೊಪ್ಪುತ್ತದೆ. ಸಾಕ್ಷಾತ್ ಶಿವನೇ ಎದುರಿಗೆ ಬಂದಾಗ ಅವನ ಕೈ, ಮುಖ, ತೊಡೆಗಳಲ್ಲಿ ಕಾಮನ ಪಂಚ ಬಾಣಗಳು ತಾಗಲಾಗಿ, ಉರಿಯಾದ ಶಿವ ಮುಂದೆ ನಿಂತು ಹಿರಿಯನಾದ ನನ್ನೊಡನೆ ಸೊಕ್ಕಿನಿಂದ ಕಾದಾಡಿದ್ದಕ್ಕಾಗಿ ನೀನು ನಿನ್ನ ಹೆಂಡತಿಯನ್ನಗಲಿ ಏನೂ ತಿಳಿಯದಂತೆ ಕಾಮನೆಂಬುದನ್ನು ಮರೆತು ಎಲ್ಲಿಯಾದರೂ ಇರು ಎಂದು ಶಾಪ ಕೊಡುತ್ತಾನೆ. ಇಲ್ಲಿಗೆ ಸಿಂಹಾವಲೋಕನದ ಕ್ರಮಮುಗಿದು ಮತ್ತೆ ಪೂರ್ವ ಕಥೆಗೆ ಮರಳುತ್ತದೆ. ಇದಿಷ್ಟು ಕಥೆಯನ್ನು ಅಪ್ಸರೆಯು ಹೇಳಿದಾಗ ನನೆಯಂಬನ ಶಾಪ ವಿಮೋಚನೆಯಾಗಿ 'ಮನ್ಮಥ'ನಾಗುತ್ತಾನೆ. ಅಪ್ಸರೆ ಮೊದಲ ಇಚ್ಛೆಗಾರ್ತಿ ಆಗುತ್ತಾಳೆ. ಇವರಿಬ್ಬರೂ ಹತ್ತಿರವಾಗಿ ಕಂಪಿನ ಪೊಳಲನ್ನು ಆಳಿಕೊಂಡಿರುತ್ತಾರೆ. ಇದಿಷ್ಟು ಕಥೆಯ ತಾತ್ಪರ್ಯ.

ಈ ಮೂಲ ಕಥೆಯಲ್ಲಿ ಆಂಡಯ್ಯನ ಹಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾನೆ. ಇಲ್ಲಿ ಗಿರಿಜೆ, ದಕ್ಷರಾಜ, ಶಿವ ಮತ್ತು ರತಿ-ಮನ್ಮಥ ಕತೆಯನ್ನು ದೂರ ಮಾಡಿದ್ದಾನೆ. ಈ ಕಾರಣದಿಂದ ಇದೊಂದು ಹೊಸ ಕಥೆಯಂತೆ ಭಾಸವಾಗುತ್ತದೆ. ಪ್ರಕೃತಿ ಕ್ರಿಯಾಶೀಲವಾಗಿರುವುದು ಇದರ ಮತ್ತೊಂದು ವೈಶಿಷ್ಟ್ಯ. ಮನ್ಮಥನ ಸೈನ್ಯದಲ್ಲಿ ಪ್ರಾಣಿ, ಪಕ್ಷಿ, ಗಾಳಿ, ಕಂಪುಗಳೆಲ್ಲಾ ಪಾತ್ರ ನಿರ್ವಹಿಸಿವೆ. ತಂಗಾಳಿ ಕಾಮ ಮತ್ತು ಶಿವನ ನಡುವೆ ದೂತನಾಗಿ ಕೆಲಸ ಮಾಡಿದರೆ ನವಿಲು, ಕೋಗಿಲೆಗಳು ಸೈನ್ಯಾಧಿಕಾರಿಗಳಾಗಿ ಕಾಣಿಸಿಕೊಳ್ಳುತ್ತವೆ. ಹೂ, ಹಣ್ಣುಗಳೆಲ್ಲಾ ಆಭರಣಗಳಾಗಿ ಕಾಣುತ್ತವೆ. ಶಿವನ ಸೈನ್ಯ ಮಾತ್ರ ಸಹಜ ಸೈನಿಕ ದಳವೇ ಆಗಿದೆ.

ಇಪ್ಪತ್ತು ಪದ್ಯ ಮತ್ತು ಎಂಟು ವಚನಗಳಲ್ಲಿ ಆಂಡಯ್ಯ ಕರ್ನಾಟಕದ ವರ್ಣನೆಯನ್ನು ಬಹಳ ದೀರ್ಘವಾಗಿ ತರುತ್ತಾನೆ. ಇಲ್ಲಿಯ ಪುರ ವರ್ಣನೆ ಕೇವಲ ಪ್ರಾಸಂಗಿಕವಲ್ಲ. ಅದು ಕರ್ನಾಟಕದ ಬಗೆಗಿನ ಅಭಿಮಾನ. ಇದು ಆಂಡಯ್ಯನ ನಿಜ ದೇಶಾಭಿಮಾನ. ಪಂಪನಂತೆ ತನ್ನ ನಾಡನ್ನು ವರ್ಣಿಸುವಾಗ ಇವನೂ ಮೈಮರೆಯುತ್ತಾನೆ. ಇಲ್ಲಿನ ಅನೇಕ ಪದ್ಯಗಳು ಭಾವಗೀತ ಸತ್ವದಿಂದ ಕೂಡಿರುವುದನ್ನು ಕಾಣಬಹುದು.

ಪಲವುಂ ನಾಲಗೆಯುಳ್ಳವಂ ಬಲಗೊಂಡೆಂದುಂ ಬಣ್ಣಿಸಲ್ಕಾಳನಾ<br>
ನೆಲನಂ ಮತ್ತಿನ ಮಾನಿಸರ್ ಪೊಗಳಲೇನಂ ಬಲ್ಲರೆಂಬೊಂದು ಬ<br>
ಲ್ಲುಲಿಯ ನೆಟ್ಟನೆ ತಾಳ್ದು ಕನ್ನಡಮೆನಿಪ್ಪ ನಾಡು ಚೆಲ್ವಾಯ್ತು ಮೆ

ಲ್ಲಲರಿಂ ಪೂತ ಕೊಳಂಗಳಿಂ ಕೆಳೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ॥

ಇದು ಆತ್ಮನಿಷ್ಠ ವರ್ಣನೆ ಮೂಲ 'ಕಂಪು ಪೊಳಲು' ಎಂಬುದನ್ನು ಮರೆತು 'ಕನ್ನಡಮೆನಿಪ್ಪಾ ನಾಡು' ಎನ್ನುವುದೇ ಅದಕ್ಕೆ ಸಾಕ್ಷಿ. ಹಲವು ನಾಲಗೆಯುಳ್ಳ ಆದಿಶೇಷನಿಂದಲೇ ಬಣ್ಣಿಸಲಸದಳವಾದ ಈ ಕನ್ನಡ ನಾಡನ್ನು ಯಾರಿಂದ ತಾನೇ ಬಣ್ಣಿಸಲು ಸಾಧ್ಯ ? ಎಂದೂ ಹೇಳುತ್ತಾನೆ. ಹೀಗೆ ಪ್ರಾಚೀನ ಕನ್ನಡ ಕಾವ್ಯದ ಸಂದರ್ಭದಲ್ಲಿ ನಾಡನ್ನು ಕುರಿತಂತೆ ಬಾಹ್ಯ ಮತ್ತು ಆಂತರ್ಯದ ತುಡಿತ ಮತ್ತು ತುರ್ತಾಗಿ ಹೊರ ಬಂದ ಅಭಿಮಾನ ಮತ್ತು ಚಿಂತನೆಯ ನೆಲೆಯಲ್ಲಿ ಪಂಪನನ್ನು ಬಿಟ್ಟರೆ ಆಂಡಯ್ಯನೇ ಕಣ್ಣಿಗೆ ಕಟ್ಟಿ ಮನಸ್ಸಿಗೆ ಮುಟ್ಟುವನು ಎಂದು ಡಾ॥ ಕಾ.ವೆಂ. ಶ್ರೀನಿವಾಸಮೂರ್ತಿ ಹೇಳುತ್ತಾರೆ. (ಕನ್ನಡ ಪರ ಚಿಂತನೆ ಮತ್ತು ಪರಂಪರೆ, ಪುಟ-65).

ಆಂಡಯ್ಯ ಕಾವ್ಯ ರಚನೆ ಮಾಡಿದ ಸಂದರ್ಭವೆಂದರೆ ಶೈವ-ಬ್ರಾಹ್ಮಣ ಮತ್ತು ಜೈನ ಮತಗಳ ಸಂಘರ್ಷದ ಕಾಲದಲ್ಲಿ. ಇದೇ ಸುಮಾರಿನಲ್ಲಿ ಕಾಣಿಸಿಕೊಂಡ ಬ್ರಹ್ಮ ಶಿವ ಮುಂತಾದವರೂ ಸಹ ಧರ್ಮದ ವಿಷಯದಲ್ಲಿ ಸಂಯಮ ಮೀರಿದ್ದಾರೆ. ಇದಕ್ಕೆ ಉತ್ತಮ ಉದಾಹರಣೆ 'ಸಮಯ ಪರೀಕ್ಷೆ'. ಇಲ್ಲಿ ಜೈನಧರ್ಮದ ವಿಡಂಬನೆ ಅತಿಯಾಗಿದೆ. ಆಂಡಯ್ಯ ಸ್ವತಃ ಜೈನನಾಗಿದ್ದರೂ ಸಂಸ್ಕೃತ ಕತೆಯನ್ನು ಕನ್ನಡಕ್ಕೆ ತಂದಾಗಲೂ ಧರ್ಮನಿಷ್ಠೆ ಅವನಿಗೆ ಮುಖ್ಯ ಆಗಿರಲಿಲ್ಲ. ಇವನು ಯಾವುದೇ ರಾಜಾಶ್ರಯ ಪಡೆಯದಿದ್ದರೂ ತನ್ನ ನಾಡು ಮತ್ತು ಅದರ ರಾಜನ ಬಗೆಗೆ ಅಭಿಮಾನದ ಮಾತುಗಳನ್ನಾಡಿದ್ದಾನೆ. ಸಮಕಾಲೀನ ಪಂಪ, ರನ್ನ ಇತ್ಯಾದಿ ಕವಿಗಳು ಪಾತ್ರಗಳನ್ನು ಸಮೀಕರಿಸಿದಂತೆ ತನ್ನ ಕಾವ್ಯದ ನಾಯಕನೊಂದಿಗೆ ಬನವಾಸಿ, ಕದಂಬ ದೊರೆ ಕಾಮದೇವನನ್ನು ಸಮೀಕರಿಸಿದ್ದಾನೆ.

ಎಸ್.ಎಸ್. ಕೋತಿನ ಹೇಳುವಂತೆ (ಕೃತಿ - ಆಂಡಯ್ಯ, ಪು-307, ಕ.ಸಾ.ಪ). ಆಂಡಯ್ಯ ತನ್ನ ಕಾವ್ಯ ಧೋರಣೆಯನ್ನು ''ಸಂಸ್ಕೃತವನ್ನು ಬೆರೆಸಬಾರದು, ಅದು ಮಾತನಾಡಿದಂತೆ ಸೊಗಸಾಗಿರಬೇಕು. ಅಚ್ಚಗನ್ನಡದಿಂದ ಅಂದರೆ ದೇಶ್ಯ ಶಬ್ದಗಳಿಂದ ಬಿಗುವಾಗಿರಬೇಕು'' ಎಂಬುದಕ್ಕೆ ನಿಷ್ಠೆಗೊಳಿಸಿದ್ದಾನೆ ಎನ್ನುವುದು ಸರಿ ಎನಿಸುತ್ತದೆ. ಡಿ.ಕೆ. ಭೀಮಸೇನರಾಯರು ''ಕಬ್ಬಿಗರ ಕಾವದ ಕಾಲು ಭಾಗದ ಪದ್ಯಗಳನ್ನೋದಿ ತದ್ಭವಗಳನ್ನು, ಕನ್ನಡ ದೇಶ್ಯ ಪದ್ಯಗಳನ್ನು ಗುರ್ತಿಸಿ ಸಿದ್ಧಪಡಿಸಿದ ಪಟ್ಟಿಯ ಒಟ್ಟು 628 ಶಬ್ದಗಳಲ್ಲಿ 505 ಕನ್ನಡ ದೇಶ್ಯ ಶಬ್ದಗಳು, 123 ಮಾತ್ರ ತದ್ಭವಗಳಿವೆ ಎನ್ನುತ್ತಾರೆ. ಹೀಗೆ ಅಚ್ಚಗನ್ನಡದ ವೀರ ದೀಕ್ಷೆ ತೊಟ್ಟ ಆಂಡಯ್ಯನ ಸಂಸ್ಕೃತದ ಬಗೆಗಿನ ಕನ್ನಡಿಗರ ವ್ಯಾಮೋಹ ಮತ್ತು ಕನ್ನಡದ ಬಗೆಗಿನ ಜನರ ಕೀಳರಿಮೆಯನ್ನು ಅಂದು ಕುಗ್ಗಿಸಿದನೆಂದೇ ಹೇಳಬೇಕು. ನಾಡು, ನುಡಿಗಳನ್ನು ಕುರಿತಾದ ಚರ್ಚೆಯಲ್ಲಿ ಪಂಪ ಮುಖ್ಯನೆನಿಸಿದ್ದಾನೆ. ನಂತರ ನಯಸೇನನಲ್ಲಿ ದೇಸೀ

ಪರ ನಿಲುವು ವ್ಯಕ್ತಗೊಂಡಿದೆ. ಆ ನಂತರದ ಆಂಡಯ್ಯ ಅವರಿಬ್ಬರಿಗಿಂತ ಮುಂದೆ ಹೋಗಿ ಭಾಷಾ ಶೈಲಿಯ ದೃಷ್ಠಿಯಿಂದ ಕ್ರಾಂತಿಯನ್ನೇ ಸಾಧಿಸಿದ್ದಾನೆ ಎನ್ನಬಹುದು.

## ತಿರುಮಲಾರ್ಯ

ತಿರುಮಲಾರ್ಯನ ಕಾಲದ ಬಗ್ಗೆ ನಿಖರವಾದ ಮಾಹಿತಿ ಇಲ್ಲ. ತಂದೆ, ತಾಯಿಯ ವಿವರಣೆ ಲಭ್ಯವಿಲ್ಲ. ಕ್ರಿ.ಶ. 1645 ರಲ್ಲಿ ಮೈಸೂರು ಜಿಲ್ಲೆಯ ಶ್ರೀರಂಗಪಟ್ಟಣದಲ್ಲಿ ಜನಿಸಿದನೆಂದು ಕವಿಚರಿತಕಾರರು ಅಭಿಪ್ರಾಯಪಡುತ್ತಾರೆ. ಒಟ್ಟಾರೆ ಇವನ ಜೀವಿತದ ಅವಧಿ 1645-1706 ಎಂದಿಟ್ಟುಕೊಳ್ಳಬಹುದು. ಇವನೊಬ್ಬ ಬ್ರಾಹ್ಮಣ ಕವಿ. ಮೈಸೂರು ಅರಸರಲ್ಲಿ ಒಬ್ಬನಾಗಿದ್ದ 'ಚಿಕ್ಕದೇವರಾಯ'ನ ಆಸ್ಥಾನ ಕವಿಗಳಲ್ಲಿ ಇವನೂ ಒಬ್ಬ ಅಗ್ರಗಣ್ಯ ಕವಿ. ಅಷ್ಟೇ ಅಲ್ಲದೆ ಚಿಕ್ಕದೇವರಾಯನಿಗೆ ಆಪ್ತಗೆಳೆಯನಾಗಿದ್ದನು ಹಾಗೂ ಅವನ ಮಂತ್ರಿಯೂ ಆಗಿ ಕೆಲಸ ಮಾಡಿದ್ದನು. ಕವಿ, ವಿದ್ವಾಂಸ, ಅಲಂಕಾರಿಕನಾದ ಈತನು ಅನೇಕ ಕೃತಿಗಳನ್ನು ಬರೆದಿದ್ದಾನೆ.

ಅವನ ಕೃತಿಗಳೆಂದರೆ, 'ಅಪ್ರತಿಮ ವೀರ ಚರಿತೆ', 'ಚಿಕ್ಕದೇವರಾಜ ವಂಶಾವಳಿ', 'ಚಿಕ್ಕದೇವರಾಜ ವಿಜಯ', 'ಚಿಕ್ಕದೇವರಾಜ ಶತಕ' ಮುಂತಾದವುಗಳು. ಈತನ ಎಲ್ಲಾ ಕೃತಿಗಳಲ್ಲಿ ಚಿಕ್ಕದೇವರಾಜನೇ ಕಥಾನಾಯಕನಾಗಿರುವುದು ಒಂದು ವಿಶೇಷ. ಬಹುಶಃ ಅದಕ್ಕೆ ಅವರ ಸ್ನೇಹ ಕಾರಣವಿರಬಹುದು.

'ಅಪ್ರತಿಮ ವೀರ ಚರಿತೆ' ಇದು ಒಂದು ಅಲಂಕಾರ ಗ್ರಂಥ. ಇದು ನಾಲ್ಕು ಪ್ರಕರಣಗಳನ್ನೊಂದಿದ್ದು, 'ಚಂದ್ರಲೋಕ', 'ಕಾವ್ಯ ಪ್ರಕಾಶ' ಮತ್ತು ಬಹಳ ಮುಖ್ಯವಾಗಿ ಕುವಲಯಾನಂದ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ರಚಿಸಲ್ಪಟ್ಟ ಗ್ರಂಥ. ಮೊದಲ ಪ್ರಕರಣದಲ್ಲಿ ಕಾವ್ಯ ಲಕ್ಷಣ, ಶಬ್ದಗುಣ, ಅರ್ಥಗುಣಗಳ ಬಗ್ಗೆ ವಿವರಣೆ ನೀಡಿದ್ದಾನೆ. ಎರಡನೇ ಪ್ರಕರಣದಲ್ಲಿ ರೀತಿ, ಶಯ್ಯ, ಪಾಕ, ವೃತ್ತಿ ಅನುಪ್ರಾಸ ಮೊದಲಾದ ಶಬ್ದಾಲಂಕಾರಗಳ ಬಗ್ಗೆ ಮಾಹಿತಿ ನೀಡಿದ್ದಾನೆ. ಮೂರು ಮತ್ತು ನಾಲ್ಕನೇ ಪ್ರಕರಣಗಳಲ್ಲಿ ಉಪಮಾಲಂಕಾರ ಆದಿಯಾಗಿ ನೂರು ಅರ್ಥಾಲಂಕಾರಗಳನ್ನು ಹೇಳಿದ್ದಾನೆ. ಅಲ್ಲದೆ ವಿಶೇಷವಾಗಿ ರಸಾಲಂಕಾರಗಳ ಬಗ್ಗೆಯೂ ವಿವರಿಸಿರುವುದನ್ನು ಕಾಣಬಹುದು. ತಿರುಮಲಾರ್ಯನು ಕಾವ್ಯ ಲಕ್ಷಣ, ಶಬ್ದಗುಣ, ಅರ್ಥಗುಣಗಳನ್ನು ಹೇಳುವಾಗ ಮಮ್ಮಟ ಮತ್ತು ವಾಮನರನ್ನು ಅನುಸರಿಸಿರುವುದು ಕಂಡು ಬರುತ್ತದೆ. ಶಬ್ದಾಲಂಕಾರಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದಾನೆ ಎನಿಸುತ್ತದೆ. ಅರ್ಥಾಲಂಕಾರ ಹಾಗೂ ರಸಾಲಂಕಾರಗಳ ಬಗ್ಗೆ ಹೇಳುವಾಗ ಸಂಪೂರ್ಣವಾಗಿ 'ಕುವಲಯಾನಂದ' ವನ್ನು ಆಧರಿಸಿದ್ದಾನೆ. ಇನ್ನೊಂದು

ಗಮನಿಸಬೇಕಾದ ಅಂಶವೆಂದರೆ, ಧ್ವನಿ ವಿವರಣೆ, ರಸ ಪ್ರಸ್ತಾಪ, ದೋಷ ನಿರೂಪಣೆ, ಇವುಗಳ ಬಗ್ಗೆ ಎಲ್ಲಿಯೂ ಚರ್ಚಿಸಿಲ್ಲದಿರುವುದು ಆಶ್ಚರ್ಯ. ಸಂಸ್ಕೃತ ಗ್ರಂಥಗಳ ಆಧಾರದಿಂದ ಸೂತ್ರಗಳನ್ನು ಎತ್ತಿ ಹೇಳಿ ಕನ್ನಡದಲ್ಲಿ ವೃತ್ತನ್ನು ಬರೆದಿದ್ದಾನೆ. ಈತನ ಶೈಲಿ ಪದಗಳ ಸಮತೋಲನದಿಂದ ತುಂಬಾ ಗಂಭೀರವಾಗಿದೆ.

'ಚಿಕ್ಕದೇವರಾಜ ವಂಶಾವಳಿ' ಇದೊಂದು ಹಳಗನ್ನಡದ ಗದ್ಯಗ್ರಂಥ ಹಾಗೂ ಅಪೂರ್ಣ ಗ್ರಂಥ ಎಂದರೆ ತಪ್ಪಾಗಲಾರದು. ಕಾರಣ ಇದರಲ್ಲಿ ಮೈಸೂರು ಅರಸರಾದ ರಾಜ ಒಡೆಯರಿಂದ ಚಿಕ್ಕದೇವರಾಜ ಒಡೆಯರವರೆಗಿನ ಇತಿಹಾಸವನ್ನು ಕುರಿತು ಹೇಳಲಾಗಿದೆ. ಆದರೆ ಅನೇಕ ಕಲ್ಪನೆಗಳು ಕವಿಯ ಕವಿತಾಶಕ್ತಿಯನ್ನು ಪ್ರದರ್ಶಿಸಲಾಗಿದೆ. ಕೃತಿಯಲ್ಲಿ ರಚಿಸಿರುವ ಗದ್ಯ ಕನ್ನಡ ಮತ್ತು ಸಂಸ್ಕೃತಗಳೆರಡರ ಸತ್ವದಿಂದ ಪುಷ್ಟವಾಗಿ ಬೆಳೆದಿದೆ. ಅಷ್ಟೇ ಅಲ್ಲ ವಡ್ಡಾರಾಧನೆಯ ದೇಸಿಯ ಸೊಬಗು, ಚಾವುಂಡರಾಯ ಪುರಾಣದ ಬಿಗಿಶೈಲಿ ಇದರಲ್ಲಿ ಇಲ್ಲವಾದರೂ ಹಳಗನ್ನಡ ಬೆಳವಣಿಗೆ ಕಾಲದ ಗದ್ಯಕೃತಿಗಳಲ್ಲೊಂದಾಗಿ ಮಹತ್ವ ಪಡೆದಿದೆ.

'ಚಿಕ್ಕದೇವರಾಜ ವಿಜಯ' ಇದೂ ಸಹ ಒಂದು ಅಪೂರ್ಣ ಕೃತಿ. ಇದೊಂದು ಚಂಪೂ ಕಾವ್ಯವಾಗಿದ್ದು ವರ್ಣ ವೃತ್ತ, ತ್ರಿಪದಿ, ಸಾಂಗತ್ಯ ಮುಂತಾದವುಗಳನ್ನೊಳಗೊಂಡಿದೆ. ಅಷ್ಟೇ ಅಲ್ಲ ಮೈಸೂರು ಅರಸರ ಪೂರ್ವೇತಿಹಾಸ ಕಾವ್ಯವಾಗಿ ಮೂಡಿರುವುದು ಇಲ್ಲಿಯ ವಿಶೇಷ. 'ಚಿಕ್ಕದೇವರಾಯ ಶತಕ' ಉಪಲಬ್ಧವಿಲ್ಲ. ತಿರುಮಲಾರ್ಯನು ಒಬ್ಬ ದ್ವಿಭಾಷಾ ಪಂಡಿತ. ಕನ್ನಡ, ಸಂಸ್ಕೃತಗಳಲ್ಲಿ ಉತ್ತಮ ಕವಿ ಹೃದಯ ಉಳ್ಳವನು. ಈತನ ಭಕ್ತಿ ಭಾವ ಕಾವ್ಯಕ್ಕೆ ಹೃದ್ಯತೆಯನ್ನು ತಂದುಕೊಟ್ಟಿದೆ. ಆ ಕಾರಣದಿಂದಲೇ ಈತನೊಬ್ಬ ಅಪರೂಪದ ಕವಿ ಮನೋಧರ್ಮದ ಲಾಕ್ಷಣಿಕ ಎನಿಸಿರುವದು.

## ಮಧ್ಯಕಾಲೀನ ಸಾಹಿತ್ಯ ಚರಿತ್ರೆ

### ಜೇಡರ ದಾಸಿಮಯ್ಯ

ವಚನ ಸಾಹಿತ್ಯ ಚಳುವಳಿಯ ಪ್ರಮುಖ ವಚನಕಾರರಲ್ಲಿ ಒಬ್ಬನಾದ ಜೇಡರ ದಾಸಿಮಯ್ಯ ಗುಲ್ಬರ್ಗಾ ಜಿಲ್ಲೆಯ ಮುದನೂರಿನವನು. ಆತನ ಹೆಸರೇ ಸೂಚಿಸುವಂತೆ ಬಟ್ಟೆನೇಯುವ ವೃತ್ತಿ ಇವನದಾಗಿತ್ತು. ಆ ವೃತ್ತಿಯ ಮೂಲಕವೇ ಆತನ ಹೆಸರಿನೊಂದಿಗೆ ಜೇಡರ ಸೇರಿಕೊಂಡಿದೆ. ಮುದನೂರಿನ ದೈವವಾದ ರಾಮನಾಥನ ಭಕ್ತನಾದ್ದರಿಂದ ಅದೇ ಹೆಸರನ್ನು ತನ್ನ ವಚನಗಳ ಅಂಕಿತವಾಗಿ ಬಳಸಿಕೊಂಡಿದ್ದಾನೆ. ಅವನ ವಚನಗಳು ಗಾತ್ರದಲ್ಲಿ ತೀರಾ ಚಿಕ್ಕವಾಗಿದ್ದು, ಭಾಷೆ ತೀರ ಸರಳವಾಗಿದೆ. ಅವನು ಮೂರು ನಾಲ್ಕು ಐದು ಸಾಲಿನ ವಚನಗಳಲ್ಲಿ ಒಂದು ತೀವ್ರವಾದ ಅನುಭವವನ್ನು ಹೇಳುವ ರೀತಿ ಆಶ್ಚರ್ಯಕರವಾದುದು. ದಾಸಿಮಯ್ಯ ನಮಗೆ ತಿಳಿದ ಹಾಗೆ ಆದ್ಯ ವಚನಕಾರನಾಗಿದ್ದು ಅವನ ವಚನಗಳಲ್ಲಿ ಕೆಲವು ಅಚ್ಚ ತ್ರಿಪದಿಗಳು,

ಚೌಪದಿಗಳು ಮಿಶ್ರವಾಗಿ ಬರುತ್ತವೆ ಇನ್ನೂ ಕೆಲವು ತ್ರಿಪದಿ ಚೌಪದಿಗಳನ್ನು ಹೋಲುವ ರಚನೆಗಳೂ, ತ್ರಿಪದಿಯ ಲಯವುಳ್ಳ ವಚನಗಳೂ, ಯಾವುದೇ ಲಯವೂ ಇಲ್ಲದ ಕೇವಲ ವಚನಗಳೂ ಅವನಲ್ಲಿವೆ.

ಜೇಡರ ದಾಸಿಮಯ್ಯನ ವಚನಗಳು ಶ್ರೇಷ್ಠ ವಚನಗಾರರ ಪಟ್ಟಿಯಲ್ಲಿ ಸ್ಥಾನ ಪಡೆದುಕೊಂಡಿದೆ. ಅನ್ನದಾನವೇ ಶ್ರೇಷ್ಠವೆಂದು ಹೇಳುವ ವಚನ ಕೇವಲ ನೀರಸ ಬೋಧನೆಯಾಗಿ ಪರಿಣಮಿಸಿದೆ. ಹಾವು-ವಿಷ-ಗಾರುಡಿಗರ ಒಂದುಶಬ್ದ ಚಿತ್ರವನ್ನು ನಮ್ಮ ಮುಂದೆ ಬಿಚ್ಚಿ ಕಾವ್ಯವಾಗುತ್ತದೆ.

ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದಡೆ
ವಿಷವೇರಿತ್ತಯ್ಯಾ ಆಪಾದಮಸ್ತಕಕ್ಕೆ
ಹಸಿವಿಗನ್ನವನಿಕ್ಕಿ ವಿಷವನಿಳುಹಬಲ್ಲಕೆ
ವಸುಧೆಯೊಳಗಾತನೇ ಗಾರುಡಿಗ ರಾಮನಾಥ.

ಹಾಗೆಯೇ ಜೇಡರ ದಾಸಿಮಯ್ಯನ ವಚನಗಳು ಮಿಣುಕು ಹುಳುಗಳಿದ್ದಂತೆ. ವಚನದ ಒಂದು ಭಾಗದಲ್ಲಿ ಒಂದು ಪದದಲ್ಲಿ, ಒಂದು ಉಪಮೆಯಲ್ಲಿ, ಇಡೀ ವಚನಕ್ಕೆ ಬೆಲೆಯನ್ನು ತಂದುಕೊಡುವ ಕಾವ್ಯ ಮಿನುಗು ಇರುತ್ತದೆ. ಆ ಉಕ್ತಿಯಿಂದ ಇಡೀ ವಚನ ಜ್ಯೋತಿರ್ಮಯವಾಗುತ್ತದೆ. ದಾಸಿಮಯ್ಯನಲ್ಲಿ ಹರಿತವಾದ ವಿಡಂಬನೆಯನ್ನು ಕೂಡ ಕಾಣಬಹುದು. ಒಮ್ಮೊಮ್ಮೆ ವಿಡಂಬನೆ ನಯವಾಗಿದ್ದರೆ, ಮತ್ತೊಮ್ಮೆ ಒರಟಾಗಿರುತ್ತದೆ.

ಬರುಸಟೆಗನ ಭಕ್ತಿ ದಿಟವೆಂದು ನಂಬಲು ಬೇಡ
ಮಠದೊಳಗಣ ಬೆಕ್ಕು ಇಲಿಯ ಕಂಡು
ಪುಟ ನೆಗೆದಂತಾಯಿತ್ತು ಕಾಣಾ ರಾಮನಾಥ.

ಇದರ ಜೊತೆಗೆ ಜೇಡರ ದಾಸಿಮಯ್ಯನು ಆ ಶತಮಾನದ ಶ್ರೇಷ್ಠ ಚಿಂತಕನೂ ಆಗಿರುವುದು ವಿಶೇಷ. ಅವನಿಗೆ ಹೆಣ್ಣು-ಗಂಡೆಂದಾಗಲಿ, ಉತ್ತಮ-ಅಧಮ ಕುಲಗಳೆಂದು ಬೇಧವನ್ನು ಮಾಡಿ ಉಚ್ಚ-ನೀಚನೆಂದು ಕಲ್ಪಿಸುವುದೇ ಆಗಲಿ ಹಾಸ್ಯಾಸ್ಪದವಾಗಿ ತೋರುತ್ತದೆ.

ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದಿತ್ತೆ ?
ಒಡೆಯರ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ ?
ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೇ
ಪ್ರಾಣದಲ್ಲಿ ಹಿಡಿಗೋಲ ?
ನೀ ತೊಡಕಿಕ್ಕಿದ ತೊಡಕನೀ ಲೋಕದ ಜಡರೆತ್ತ ಬಲ್ಲರೈ
ರಾಮನಾಥ.

ದಾಸಿಮಯ್ಯನ ವ್ಯಕ್ತಿತ್ವಕ್ಕೆ ಮಾತ್ರವಲ್ಲ, ಆತನ ವಚನಗಳ ಪ್ರಾಮಾಣಿಕ ವಿಚಾರಧಾರೆಗೂ ಮುಗ್ಧಕಾವ್ಯ ಸೌಂದರ್ಯಕ್ಕೂ ಮಾರು ಹೋದ ಬಸವಣ್ಣ ಅವನ ಹೆಸರನ್ನು ಮತ್ತೆ ಮತ್ತೆ ಕೊಂಡಾಡುವ ಮೂಲಕ ಆತನು ತನ್ನ ಮೇಲಿನ ಪ್ರಭಾವವನ್ನು ಹೇಳುತ್ತಾನೆ. ಆದರೆ ದಾಸಿಮಯ್ಯ ವೈಯಕ್ತಿಕ ಒತ್ತಡ ಇತರೆ ವಚನಕಾರರಲ್ಲಿ ಕಾಣಿಸದೇ ಇರುವುದರಿಂದ ಅವರ ವಚನಗಳಲ್ಲಿನ ಕಾವ್ಯಗುಣ ಸಾಧಾರಣಮಟ್ಟದ್ದಾಗಿ ಪರಿಣಮಿಸುತ್ತದೆ. ಈ ಎಲ್ಲದರ ಹೊರತಾಗಿ ಹರಿತ ಆಲೋಚನೆ, ತೀಕ್ಷ್ಣವಾದ ಅಭಿವ್ಯಕ್ತಿ ಪರಂಪರಾಗತ ಉಪಮೆ ರೂಪಕಗಳನ್ನುತ್ಯಜಿಸಿ ಹೊಸ ಹೊಸ ಉಕ್ತಿಗಳನ್ನು ಕನ್ನಡಕ್ಕೆ ತಂದು ಕಸುವು ತಂದುಕೊಟ್ಟಿದ್ದು ಇವುಗಳ ದೃಷ್ಠಿಯಿಂದ ಕೆಲವೆಡೆಗಳಲ್ಲಿ ಯಾರೂ ದಾಸಿಮಯ್ಯ ಅತ್ಯುತ್ತಮ ವಚನಕಾರರ ಅತ್ಯುತ್ತಮ ರಚನೆಗಳಿಗೆ ಸರಿಸಮನಾದ ಕೃತಿಗಳನ್ನು ನೀಡಿದ್ದಾನೆ.

**ಅಲ್ಲಮಪ್ರಭು**

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವೆಯಲ್ಲಿ ಜನಿಸಿದ ಅಲ್ಲಮಪ್ರಭು ವೀರಶೈವರಿಗೆ ಗುರು. ಕನ್ನಡ ಸಾಹಿತ್ಯದ ವಿದ್ಯಾರ್ಥಿಗೆ ಒಂದು ವಿಸ್ಮಯ. ಬಳಗಾವೆ ಕಲ್ಯಾಣದ ಬಿಜ್ಜಳ ಚಕ್ರವರ್ತಿಯ ಕಾಲದಲ್ಲಿ ಮತ್ತು ಅದಕ್ಕಿಂತ ಹಿಂದಿನಿಂದಲೇ ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಮುಂದುವರೆದಿದ್ದ ಬನವಾಸಿ ಹನ್ನೆರಡು ಸಾವಿರ ಎಂಬ ಹೆಸರಿನ ನಾಡಿನ ರಾಜಧಾನಿಯಾಗಿತ್ತು. ಬಸವಣ್ಣ ಮುಂತಾದ ಶರಣರಿಗೆ ಗುರು ಸ್ಥಾನದಲ್ಲಿದ್ದು, ಆ ಇಡೀ ಕಾಲದ ಎಲ್ಲರ ಮೇಲೂ ಒಂದು ಬಗೆಯ ಗಂಭೀರ ಪ್ರಭಾವವನ್ನು ಬೀರಿ, ಆಂದೋಲನದ ನಾಯಕರಿಗೆ ತನ್ನ ವೈದಿಕ ಶಕ್ತಿಯನ್ನು ಧಾರೆಯೆರೆದು ಕೃತಕೃತ್ಯನಾದ ಈತ ನಿಜವಾಗಿಯೂ ಒಬ್ಬ ಮಹಾಪುರುಷ. ಬಸವ, ಅಲ್ಲಮ ಪ್ರಭುಗಳದ್ದು ಒಂದು ಇನ್ನೊಂದಕ್ಕೆ ಪೂರಕವಾದ ಸ್ವಭಾವಗಳು.

ಅವನು ಕಲ್ಯಾಣಕ್ಕೆ ಬಂದು ಹಲವು ಕಾಲವಿದ್ದು ಅಲ್ಲಿಯ ಶಿವಾನುಭವ ಗೋಷ್ಠಿಗಳಲ್ಲಿ ಕೇಂದ್ರ ವ್ಯಕ್ತಿಯಾಗಿದ್ದು ಶಿವತತ್ವವನ್ನು ಉಪದೇಶಿಸಿದ. ಬಸವಣ್ಣ ಯೋಜಿಸಿಕೊಂಡಿದ್ದ ಆಂದೋಲನಕ್ಕೆ ತನ್ನ ಪೂರ್ಣ ಬೆಂಬಲವನ್ನು ಕೊಟ್ಟ. ಅವನ ಕಾರಣದಿಂದಾಗಿಯೇ ಸಿದ್ಧರಾಮನಂತಹ ಅತ್ಯಂತ ಪ್ರಭಾವಶಾಲಿ ಪುರುಷ ಬಸವಣ್ಣನ ಕಾರ್ಯಕ್ಷೇತ್ರವನ್ನು ಪ್ರವೇಶಿಸಿದ್ದು. ಕಲ್ಯಾಣಕ್ಕೆ ಬಂದ ಅಕ್ಕಮಹಾದೇವಿಯನ್ನು ಎಲ್ಲರ ಮುಂದೆ ಪ್ರಶ್ನಿಸಿ ಅವಳು ಎಂತಹ ಶಿವಭಕ್ತೆಯೆಂಬುದನ್ನು ಲೋಕಕ್ಕೆ ತೋರಿಸಿಕೊಟ್ಟು ಮಾನವೀಯತೆಯನ್ನು ಮೆರೆದ ಮಹನೀಯ.

ಗಂಡು-ಹೆಣ್ಣಿನ ಸಂಬಂಧದ ಸಂಕೀರ್ಣತೆಯನ್ನು, ಬೆಲೆಯನ್ನು ಅರಿತಿದ್ದ ಅಲ್ಲಮನಿಗೆ ಮಾನಸಿಕವಾಗಿ ಕಾಮಲತೆಯನ್ನು ತೊಡಕನ್ನು ಬಿಡಿಸಿಕೊಳ್ಳುವುದು ಕಷ್ಟವಾಯಿತು. ಕೈಯಲ್ಲಿ ಲಿಂಗವನ್ನು ಹಿಡಿದು ಹೊರಟ ಅವನು ಎಲ್ಲೆಲ್ಲೋ ಹುಚ್ಚನಂತೆ ತಿರುಗಿದ. ಕಾಮಲತೆಯ ಹುಚ್ಚನ್ನು ದೇವರ ಹುಚ್ಚನ್ನಾಗಿ ರೂಪಾಂತರಿಸಲು ಪ್ರಯತ್ನಿಸಿದ. ತನ್ನ ಒಂದು ವಚನದಲ್ಲಿ ಹೀಗೆ ತನ್ನ ಅನುಭವವನ್ನು ವ್ಯಕ್ತಪಡಿಸಿದ್ದಾನೆ.

ಎಸೆಯದಿರು ಎಸೆಯದಿರು ಕಾಮ,
ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಇದು ಸಾಲದೆ ನಿನಗೆ ?
ನಿನ್ನ ಜಾಣ ಹುಸಿಯಲದೇಕೋ !
ಗೋಗೇಶ್ವರ ಲಿಂಗದ ವಿರಹದಲ್ಲಿ ಬೆಂದವರ
ಮರಳಿ ಸುಡಲುಂಟೆ ಕಾಮ.

ಅಲ್ಲಮ ತನ್ನ ಯೋಗಿಕ ಪರಿವೇಷದಿಂದಾಗಿ ನಮಗೆ ದೂರ ನಿಲ್ಲುವಂತೆ ಭಾಸವಾಗುತ್ತದೆ. ಅವನ ವಚನಗಳ ಬಗ್ಗೆ ಬರೆಯುವವರೆಲ್ಲ ಈ ಅಳುಕನ್ನು ಅನುಭವಿಸುವುದಕ್ಕೆ ನಮಗೆ ಪರಿಚಿತವಲ್ಲದ ಅವನ ಮಾನಸಿಕ ಜಗತ್ತು ಕಾರಣ. ಆ ವ್ಯಕ್ತಿ ಹೇಗೋ ಅವನ ವಚನಗಳೂ ಏನೋ ಗೂಢ, ರಹಸ್ಯ, ಘನ ಎನ್ನಿಸಿಬಿಡುತ್ತದೆ. ಅವನಲ್ಲಿ ಮಾನಸಿಕ ತುಮುಲದ ವಚನಗಳು ಕಡಿಮೆ. ಇದಕ್ಕೆ ಕಾರಣ ಅವನು ಮಾನಸಿಕ ಅಸ್ವಾಸ್ಥ್ಯವನ್ನು ಕಳೆದುಕೊಂಡು ಮುಕ್ತನಾದ ಮೇಲೆ ಬರೆದಿರುವ ವಚನಗಳೇ ಹೆಚ್ಚು. ಅವನಿಗೆ ಇಷ್ಟಲಿಂಗ ಕೈಗೆ ಬಂದ ಕ್ಷಣ ಆಡಿದನೆಂದು ಶೂನ್ಯ ಸಂಪಾದನೆ ಕಲ್ಪಿಸುವ ಒಂದು ವಚನ ಹೀಗಿದೆ.

ಎತ್ತಣ ಮಾಮರ! ಎತ್ತಣ ಕೋಗಿಲೆ!
ಎತ್ತಣಿಂದೆತ್ತ ಸಂಬಂಧವಯ್ಯ!
ಬೆಟ್ಟದ ನೆಲ್ಲಿಕಾಯಿ, ಸಮುದ್ರದೊಳಗಣ ಉಪ್ಪು
ಎತ್ತಣಿಂದೆತ್ತ ಸಂಬಂಧವಯ್ಯಾ!
ಗುಹೇಶ್ವರ ಲಿಂಗಕ್ಕೆಯು ಎನಗೆಯೂ
ಎತ್ತಣಿಂದೆತ್ತ ಸಂಬಂಧವಯ್ಯಾ!

ತನ್ನ ವಿಚಾರವನ್ನು ಎಷ್ಟು ಸಂಕ್ಷಿಪ್ತವಾಗಿ ಹಿಡಿದಿಡಬಲ್ಲನೆಂಬುದಕ್ಕೆ ಕೆಳಗಿನ ವಚನ ಉತ್ತಮ ಉದಾಹರಣೆ.

ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದು ಕುದುರೆಯ ಬಯಸುವವರು ವೀರರೂ ಅಲ್ಲ,
ಧೀರರೂ ಅಲ್ಲ.

ಇದರ ಕಾರಣ ನೆರೆ ಮೂರು ಲೋಕವೆಲ್ಲವು
ಹಲ್ಲಣವ ಹೊತ್ತುಗೊಂಡು ಬಳಲುತ್ತೈದಾರೆ
ಗುಹೇಶ್ವರನೆಂಬ ಲಿಂಗವನವರೆತ್ತ ಬಲ್ಲರೋ ?

ಒಮ್ಮೊಮ್ಮೆ ಅವನು ಬಳಸುವ ಭವ್ಯ ಚಿತ್ರಗಳು ತಾವಾಗಿಯೇ ಬೆಲೆಯುಳ್ಳವಾಗಿದ್ದು, ಆದರೆ ಸನ್ನಿವೇಶಕ್ಕೆ ಅನುಚಿತವಾಗಿ ಪರಿಣಮಿಸಿರುವ ಉದಾಹರಣೆಗಳೂ ಉಂಟು.

ಬೆಟ್ಟಕ್ಕೆ ಚಳಿಯಾದರೆ ಏನು ಹೊದಿಸುವಿರಯ್ಯಾ ?
ಬಯಲು ಬತ್ತಲೆಯಿದ್ದರೆ ಏನನುಡಿಸುವಿರಯ್ಯಾ ?
ಭಕ್ತನು ಭವಿಯಾದಡೆ ಏನನುಪಮಿಸುವೆನಯ್ಯಾ, ಗುಹೇಶ್ವರ.

ತನ್ನ ಸಮಕಾಲೀನ ಹೇಗೋ ಮುಂದಿನ ಶತ ಶತಮಾನಗಳ ವೀರಶೈವರಿಂದ ಕೀರ್ತಿತನಾಗಿರುವ ಅಲ್ಲಮಪ್ರಭು ಕನ್ನಡದ ತೀರ ಕೆಳವರ್ಗದ ಪ್ರಪ್ರಥಮ ಯೋಗಿಯೂ, ಶ್ರೇಷ್ಠ ಸಾಹಿತಿಯೂ ಆಗಿದ್ದಾನೆ.

**ಬಸವಣ್ಣ**

ಹನ್ನೆರಡನೆಯ ಶತಮಾನದ ಕ್ರಾಂತಿಕಾರಿ ನಾಯಕ ಬಸವಣ್ಣ ಹೊಸ ಸಮಾಜದ ಕಲ್ಪನೆಗೆ ನಾಂದಿ ಹಾಡಿದ. ಸಾಮಾಜಿಕ ಚಳುವಳಿಯ ಆತನ ಧ್ಯೇಯಕ್ಕೆ ಸಾಹಿತ್ಯವನ್ನು ಪ್ರಮುಖ ಅಸ್ತ್ರವನ್ನಾಗಿ ಬಳಸಿಕೊಂಡಿದ್ದು ವಿಶೇಷ. ಸಾಮಾಜಿಕ ಕ್ರಾಂತಿಯು ಸಾಹಿತ್ಯಕ ಕೃತಿಯಾಗಿಯೂ ಯಶಸ್ವಿಯಾಗಲು ಸಾಧ್ಯವಾಗಿದ್ದು ಮತ್ತೊಂದು ವಿಶೇಷ. ಸಾಹಿತ್ಯದ ದೃಷ್ಠಿಯಿಂದ ಶ್ರೇಷ್ಠ ವಚನಗಳನ್ನು ನೀಡಿರುವ ಬಸವಣ್ಣ ಇತರೆ ವಚನಕಾರರಿಗಿಂತ ಮುಂದಿನ ಸಾಲಿನಲ್ಲಿ ಕೂರುತ್ತದೆ. ಹುಟ್ಟಿದ್ದು ಉತ್ತಮ ಬ್ರಾಹ್ಮಣ ಕುಲವೊಂದರಲ್ಲಿ. ಆ ಕಾಲದ ಚಕ್ರವರ್ತಿಯ ಹತ್ತಿರ ಭಂಡಾರಿಯಾಗಿ ಕೆಲಸ ಮಾಡುತ್ತಿದ್ದರೂ ಕೂಡ ಸಮಾಜದ ದಲಿತವರ್ಗದ ಜೊತೆ ಮಿಳಿತವಾಗಿ ಅವರಿಗಾಗಿ ತನ್ನ ಜೀವನದುದ್ದಕ್ಕೂ ಹೋರಾಡಿದ್ದು ಆತನ ಜೀವನಕ್ಕೆ ಹಿಡಿದ ಕನ್ನಡಿಯಾಗಿದೆ.

ಬಸವಣ್ಣನ ವಚನಗಳು ಮುಖ್ಯವಾಗಿ ಅವನ ಅಂತರಂಗದ ಬೆಳವಣಿಗೆಯನ್ನು ಚಿತ್ರಿಸಿಕೊಳ್ಳಲು ಸಹಾಯ ಮಾಡುತ್ತವೆ. ಬಸವಣ್ಣ ಹುಟ್ಟಿದ್ದು ಬಿಜಾಪುರ ಜಿಲ್ಲೆಯ ಬಾಗೇವಾಡಿ ಎಂಬ ಅಗ್ರಹಾರದಲ್ಲಿ. ಹನ್ನೆರಡನೆಯ ಶತಮಾನದ ಪ್ರಸಿದ್ಧ ಅಗ್ರಹಾರಗಳಲ್ಲಿ ಒಂದಾಗಿದ್ದು ಅದು ವಿದ್ವಾಂಸರು ನೆಲೆವೀಡಾಗಿತ್ತು. ಆ ಅಗ್ರಹಾರದ ಮುಖ್ಯಸ್ಥನಾದ ಶೈವ ಬ್ರಾಹ್ಮಣ ಮಾದಿರಾಜ ಅವನ ತಂದೆ, ಮಾದಾಂಬೆ ಅವನ ತಾಯಿ. ಅಗ್ರಹಾರದ ನಾಯಕನ ಮಗನಾಗಿ ವೈದಿಕ ಸಂಪ್ರದಾಯದಲ್ಲಿ ಬೆಳೆದ ಹುಡುಗನಿಗೆ ಕರ್ಮನಿಷ್ಠ ಬ್ರಾಹ್ಮಣ್ಯಕ್ಕಿಂತ ಭಕ್ತಿ

ಮಾರ್ಗವು ಪ್ರಿಯವಾಯಿತು. ಭಕ್ತಿಮಾರ್ಗವು ಜಾತಿ, ಕುಲ, ಭೇದಗಳನ್ನು ಮನ್ನಿಸುವುದಿಲ್ಲ. ಅದು ಭಗವಂತನ ಬಳಿಗೆ ಹೋಗುವ ಒಂದು ರಾಜಮಾರ್ಗ. ಹೀಗಿರುವಾಗ ಅದು ಬಸವನನ್ನು ಕರ್ಮದ ಬಂಧನಕ್ಕೆ ಸಿಲುಕಿಸುವಂತಹ ಉಪನಯನ ಸಮಾರಂಭವನ್ನು ಅವನು ಪ್ರತಿಭಟಿಸಿ ನಿಂತಿದ್ದು. ಅದು ಸಾಂಪ್ರದಾಯಿಕ ಸಮಾಜವನ್ನು ತಬ್ಬಿಬ್ಬು ಮಾಡಿದ್ದು ಆಶ್ಚರ್ಯವಾಗಿ ಕಾಣುವುದಿಲ್ಲ. ಆದರೂ ತಂದೆಯ ಒತ್ತಾಯಕ್ಕೆ ತನ್ನ ಎಂಟನೆಯ ವಯಸ್ಸಿನಲ್ಲಿ ಉಪನಯನ ಮಾಡಿಕೊಂಡ ಹುಡುಗ ತನ್ನ ಹದಿಮೂರನೆಯ ವಯಸ್ಸಿನಲ್ಲಿ ಜನಿವಾರವನ್ನು ಕಿತ್ತೆಸೆದು ವೈದಿಕ ಸಮಾಜದಿಂದ ಹೊರಬಂದ.

ಯಾವುದಕ್ಕೂ ಅಂಜದ ಬಸವಣ್ಣ ತನ್ನ ನೇರಮಾರ್ಗದಲ್ಲಿ ಮುಂದುವರೆದು ತನ್ನ ಶಿವನ ಭಕ್ತಿಯನ್ನು ತನ್ನ ವಚನಗಳಲ್ಲಿ ನಿರ್ಭಯವಾಗಿ ವ್ಯಕ್ತಪಡಿಸಿದ. ಬಿಜ್ಜಳನ ಮತ್ತು ಆತನ ನಡುವೆ ಮನಸ್ತಾಪಗಳಿದ್ದರೂ ಆತನಿಗೆ ಹೆದರದೆ ಬಿಜ್ಜಳನಿಗೆ ತಾನು 'ಜೋಳುನಾಳಿ' ಮಾತ್ರ. ತನ್ನ ವೇಳೆವಾಯ ನಿಷ್ಠೆ ಶಿವನಿಗೆ ಮಾತ್ರ ಎಂದೂ ಹೇಳಿಕೊಂಡಿದ್ದಾನೆ.

ನ್ಯಾಯ ನಿಷ್ಠುರ, ದಾಕ್ಷಿಣ್ಯಪರನು ನಾನಲ್ಲ;<br>
ಲೋಕವಿರೋಧಿ, ಶರಣನಾರಿಗಂಜುವುನಲ್ಲ,<br>
ಕೂಡಲ ಸಂಗಮದೇವ ರಾಜತೇಜದಲ್ಲಿಪ್ಪನಾಗಿ

ಈ ಧೈರ್ಯವಿದ್ದುದರಿಂದಲೇ ಒಂದು ಕ್ರಾಂತಿಗೆ ನಾಯಕನಾಗಲು ಸಾಧ್ಯವಾಗಿದ್ದು. ತನ್ನ ಅನಿಸಿಕೆಗಳನ್ನು ನೇರವಾಗಿ ಹೇಳಿಬಿಡುವ ಬಸವಣ್ಣ ಅನ್ಯರ ಅನೈತಿಕ ನಡಾವಳಿಗಳನ್ನು ತನ್ನ ವಚನಗಳಲ್ಲಿ ದಾಖಲಿಸಿದ್ದಾನೆ. ಈ ಧೈರ್ಯವಿದ್ದುದರಿಂದಲೇ ರಾಜಧಾನಿಯಲ್ಲೇ ಚಕ್ರವರ್ತಿಯ ಮೂಗಿನ ಕೆಳಗೇ ತನ್ನ ಕ್ರಾಂತಿಕಾರಿ ಚಟುವಟಿಕೆಗಳನ್ನು ಸಾಗಿಸಲು ಸಾಧ್ಯವಾಗಿದ್ದು.

ಬಸವಣ್ಣ ಮುಂತಾದವರಿಗೆ ವಚನಗಳು ತಮ್ಮ ನೆಲೆಯನ್ನು ತಾವು ಗುರುತಿಸಿಕೊಳ್ಳುವ ಮಾಧ್ಯಮಗಳಾಗಿರುವಂತೆಯೇ ಜನತೆಗೆ ಅತ್ಯಂತ ಸುಲಭ ಭಾಷೆಯಲ್ಲಿ ನೀತಿ ಬೋಧನೆ ಮಾಡಿ ಮಾರ್ಗದರ್ಶನ ಮಾಡುವ ಸಾಧನಗಳೂ ಆದವು. ಬಸವಣ್ಣ ಆ ಕಾಲದ ಎಲ್ಲಾ ಪ್ರಮುಖ ಶಿವಶರಣ ಶಿವಶರಣೆಯರಿಗೆ ಒಂದಲ್ಲ ಒಂದು ರೀತಿಯಲ್ಲಿ ಸಂಬಂಧಿಸಿದವನಂತೆ ಕಾಣಿಸಿಕೊಳ್ಳುತ್ತಾನೆ. ಅವನು ಹಲವು ಮುಖಗಳುಳ್ಳ ವ್ಯಕ್ತಿತ್ವದ ಅಪೂರ್ವ ಮನುಷ್ಯನಾಗಿದ್ದು ದೈವಭಕ್ತ, ಭಂಡಾರಿ, ಸಾಮಾಜಿಕ ಆಂದೋಲನಕಾರ, ಮಾನವತಾವಾದಿ, ಸಾಹಿತಿ ಇವುಗಳೆಲ್ಲ ಮೇಳೈಸಿ ಅವನನ್ನು ಕರ್ನಾಟಕದ ಅಷ್ಟೇ ಏಕೆ, ಭಾರತದ ಇತಿಹಾಸದಲ್ಲಿ ಚಿರಸ್ಥಾಯಿಗೊಳಿಸಿವೆ.

ಬಸವಣ್ಣನ ಭಕ್ತಿರಸದ ವಚನಗಳಲ್ಲಿ ಅವನ ಭಕ್ತಿಯ ಸಾಧನೆಯ ವಿವಿಧ

ಮುಖಗಳೂ ಸ್ವಾತ್ಮ ವಿಮರ್ಶೆಯೂ ಕಾಣುತ್ತದೆ. ಅಲ್ಲಲ್ಲಿ ತನ್ನತನವನ್ನು ಗುರುತಿಸಿಕೊಳ್ಳುವ ಒಬ್ಬ ಹೋರಾಟಗಾರ.

ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ;
ಎನ್ನುವನು ಕಾಮಯ್ಯ, ಕಾಮಯ್ಯಾ;
ಹುರುಳಿಲ್ಲ! ಹುರುಳಿಲ್ಲ!
ಕೂಡಲಸಂಗಮದೇವಾ ಶಿವಧೋ ಶಿವಧೋ

ಈ ವಚನದಲ್ಲಿ ಯಾವುದೇ ಅಲಂಕಾರವೂ ಇಲ್ಲವಾಗಿದ್ದು, ಅದರ ಸರಳತೆಯೇ ಅಭಿವ್ಯಕ್ತಿಯ ದೃಷ್ಟಿಯಿಂದ ಅದರ ಶ್ರೇಷ್ಠಾಂಶವಾಗಿದೆ. ಅವನಿಗೆ ಭಾಷೆಯೆಂಬುದು ಸಮಸ್ಯೆಯೇ ಅಲ್ಲ. ಅವನ ಭಾಷೆ ಇತ್ತ ಗ್ರಾಮ್ಯವೂ ಅಲ್ಲ, ತೀರಾ ಶಿಷ್ಟವೂ ಅಲ್ಲ. ಎರಡರ ಹದವಾದ ಬಳಕೆ ಅಲ್ಲಿದೆ. ತಿಳಿನೀರಿನಲ್ಲಿ ಓಡಾಡುವ ಮೀನುಗಳಂತೆ ಅವನ ವಚನ ಸೃಷ್ಠಿಯಲ್ಲಿ ಅವನ ಭಾವಗಳು ಸಲೀಸಾಗಿ ಚಲಿಸುವುದನ್ನು ನೋಡಬಹುದು.

ತಾಳಮಾನ ಸಂಸವನರಿಯೆ,
ಓಜೆ ಬಜಾವಣೆಯ ಲೆಕ್ಕವನರಿಯೆ,
ಅಮೃತಗಣ ದೇವಗಣವನರಿಯೆ,
ಕೂಡಲ ಸಂಗಮದೇವಾ, ನಿನಗೆ ಕೇಡಿಲ್ಲವಾಗಿ
ಅನುವೊಲಿದಂತೆ ಹಾಡುವೆ.

ಯಾವುದೇ ರೀತಿಯ ಭಯವನ್ನು ಇಟ್ಟುಕೊಳ್ಳದ ಬಸವಣ್ಣ

ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು.

ಎಂದು ಹೇಳುವ ಮೂಲಕ ಸಾಮಾಜಿಕ ಜೀವನಕ್ಕೊಂದು ಮಾನವೀಯ ನೆಲೆ ತೋರಿಸಿಕೊಟ್ಟಿದ್ದಾನೆ.

ಹಲವಾರು ವಚನಗಳಲ್ಲಿ ಮೊದಲ ಸಾಲಿನಿಂದ ಬೆಳೆಸಿಕೊಂಡು ಹೋದದ್ದು ಕೊನೆಯ ಭಾವದಲ್ಲಿ ಶಿಖರವನ್ನು ಮುಟ್ಟುತ್ತದೆ. ಕೀರ್ತನೆಯಲ್ಲಿ ಶಿಖರದಿಂದ ಇಳಿದು ಬಂದ ಅನುಭವವಾದರೆ, ಇಲ್ಲಿ ಕೆಳಗಿನಿಂದ ಮೇಲಕ್ಕೆ ಏರಿದ ಅನುಭವವಾಗುತ್ತದೆ.

ಉಳ್ಳವರು ಶಿವಾಲಯ ಮಾಡುವರು;
ನಾನೇನ ಮಾಡಲಿ ಬಡವನಯ್ಯ
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಸಿರ ಹೊನ್ನ ಕಳಸವಯ್ಯಾ
ಕೂಡಲ ಸಂಗಮದೇವಾ ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

ವಚನಕಾರರಲ್ಲೆಲ್ಲಾ ಬಸವಣ್ಣ ಶ್ರೇಷ್ಠನಾದರೂ ತಾನು ನಾಯಕನಲ್ಲವೆಂಬುದನ್ನು ನಿರಾಕರಿಸುತ್ತಲೇ ಒಂದು ರೀತಿಯಾಗಿ ತನ್ನ ಜನರ ನಾಯಕನಾಗಿ ಮುಂದೆ ನಡೆಸಿದನು. ತನ್ನ ಕಾಲದ ಎಲ್ಲಾ ಬಗೆಯ ಸಾಮಾಜಿಕ ದೋಷ ದುಷ್ಕೃತಿಗಳನ್ನು ವಿಡಂಬನೆ ಮಾಡಿದ್ದಾನೆ ಹಾಗೂ ಖಂಡಿಸಿದ್ದಾನೆ. ಒಟ್ಟಾರೆಯಾಗಿ ಹೇಳುವುದಾದರೆ ಬಸವಣ್ಣ ಹನ್ನೆರಡನೆ ಶತಮಾನದಲ್ಲಿ ಸೃಷ್ಟಿಗೊಂಡ ಒಬ್ಬ ದಾರ್ಶನಿಕ.

### ಅಕ್ಕಮಹಾದೇವಿ

ಇಪ್ಪತ್ತೊಂದನೆಯ ಶತಮಾನದಲ್ಲಿ ಸ್ತ್ರೀವಾದಿಗಳು ಹನ್ನೆರಡನೆ ಶತಮಾನದ ಅಕ್ಕಮಹಾದೇವಿಯಿಂದ ಪ್ರಭಾವಿತರಾಗಿದ್ದಾರೆ ಎಂದರೆ ಅಕ್ಕಮಹಾದೇವಿಯ ಪಾಂಡಿತ್ಯ ಎಂತಹದ್ದೆನ್ನುವ ಅರಿವು ನಮಗಾಗುತ್ತದೆ. ವಚನ ಸಾಹಿತ್ಯದ ಪ್ರಮುಖ ವಚನಗಾರ್ತಿ. ಅಕ್ಕಮಹಾದೇವಿ ಸಾಮಾಜಿಕ ವ್ಯವಸ್ಥೆ ಮತ್ತು ರಾಜ ಪ್ರಭುತ್ವಗಳೆರಡನ್ನೂ ಏಕಕಾಲಕ್ಕೆ ಧಿಕ್ಕರಿಸಿ ನಿಂತವಳು, ಜೀವನವನ್ನು ಹೋರಾಟದಲ್ಲಿ ಕಳೆದವಳು. ವಚನ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಗಳನ್ನು ಕೊಟ್ಟು ಕನ್ನಡದ ಪ್ರಥಮ ಶ್ರೇಷ್ಠ ಕವಯತ್ರಿಯಾದವಳು. ಹೆಣ್ಣುತನಕ್ಕೆ ಒಂದು ಗೌರವ ಭಾವನೆಯನ್ನು ತಂದುಕೊಟ್ಟು ಬಸವ, ಅಲ್ಲಮ ಮೊದಲಾದವರಿಂದ ಸನ್ಮಾನಿತಳಾದವಳು.

ಬಳ್ಳಿಗಾವೆ ಸಮೀಪದ ಉಡುತಡಿಯಲ್ಲಿ ಶಿವಭಕ್ತರ ಮಗಳಾಗಿ ಜನಿಸಿದ ಅವಳು ಬಾಲ್ಯದಲ್ಲೇ ಶ್ರೀಶೈಲದ ಚೆನ್ನಮಲ್ಲಿಕಾರ್ಜುನನನ್ನು ತನ್ನ ಗಂಡನೆಂದೆ ಒಲಿದಳು. ಕೌಶಿಕ ರಾಜನ ಒತ್ತಾಯಕ್ಕೆ ವಿವಾಹ ಬಂಧನಕ್ಕೊಳಗಾದ ಅವನ ಮನೆಯಲ್ಲಿ ಕೆಲವು ಕಾಲ ಕಳೆದಳು. ತನ್ನ ಭಕ್ತಿಯ ಸಾಧನೆಗೆ ವಿರೋಧವಾಗಿ ನಡೆಯಬಾರದೆಂದೂ, ಆ ಬಗ್ಗೆ ತನಗೆ ಸಂಪೂರ್ಣ ಸ್ವಾತಂತ್ರ್ಯವಿದೆಯೆಂದೂ ಅವನ ತಪ್ಪನ್ನು ಮೂರು ಬಾರಿ ಕ್ಷಮಿಸುವುದಾಗಿ ಕರಾರು ಹಾಕಿದ್ದಳು. ಆದರೆ ಕೌಶಿಕ ಮಹಾರಾಜ ಕರಾರನ್ನು ಮುರಿದನೆಂದು ಗೊತ್ತಾದ ತಕ್ಷಣ ಅವನಿಂದ ಬಿಡುಗಡೆಗೊಂಡು ಲೌಕಿಕ ಗಂಡನ ಸಂಬಂಧ ತೊರೆದು ಹೊರನಡೆದಳು. ಆಕೆ

ನಿಜವಾದ ಶಿವಶರಣೆಯಾಗಿದ್ದು, ಚನ್ನಮಲ್ಲಿಕಾರ್ಜುನನನ್ನೇ ಸಾವಿರದ ಗಂಡನೆಂದು ಒಪ್ಪಿಕೊಂಡಳು. ಹಾಗಾಗಿ ತನ್ನ ವಚನಗಳಲ್ಲಿ ಚನ್ನಮಲ್ಲಿಕಾರ್ಜುನನನ್ನು ನಿರಾತಂಕವಾಗಿ ಸ್ತುತಿಸುತ್ತಾಳೆ.

ಅಕ್ಕಮಹಾದೇವಿ ಎಲ್ಲವನ್ನೂ ತೀವ್ರವಾಗಿ ಅನುಭವಿಸುವವಳಾಗಿದ್ದು ಅವಳಲ್ಲಿ ಅಭಿವ್ಯಕ್ತಿಯ ಸಂಯಮವಿದೆ. ಅವಳು ತನಗೆ ಬಿದ್ದ ಕನಸೊಂದನ್ನು ಹೀಗೆ ಹೇಳಿಕೊಂಡಿದ್ದಾಳೆ.

ಅಕ್ಕ ಕೇಳವ್ವ ಅಕ್ಕಯ್ಯ, ನಾನೊಂದು ಕನಸ ಕಂಡೆ
ಅಕ್ಕಿಯಡಕೆ ಓಲೆ ತೆಂಗಿನ ಕಾಯ ಕಂಡೆ!
ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು
ಭಿಕ್ಷಕ್ಕೆ ಮನೆಗೆ ಬಂದುದ ಕಂಡೆನವ್ವ!
ಮಿಕ್ಕು ಮೀರಿ ಹೋದನ ಬೆಂಬತ್ತಿ ಕೈವಿಡಿದೆನು
ಚನ್ನಮಲ್ಲಿಕಾರ್ಜುನಯ್ಯನ ಕಂಡು ಕಣ್ದೆರೆದೆನು.

ಲೌಕಿಕ ಅಂಶಗಳನ್ನು ಕಟುವಾಗಿ ಟೀಕಿಸುವ ಅಕ್ಕಮಹಾದೇವಿ ಚನ್ನಮಲ್ಲಿಕಾರ್ಜುನನನ್ನೇ ತನ್ನ ಗಂಡನನ್ನಾಗಿ ಸ್ವೀಕರಿಸಿದ್ದಾಳೆ. ಆ 'ಅಸೀಮ ಚಲುವ'ನ ಬಯಕೆ ಅವಳಲ್ಲಿ ಎಷ್ಟು ತೀವ್ರವಾಗಿತ್ತೆಂಬುದನ್ನು ಒಂದು ವಚನ ಸೊಗಸಾಗಿ ಚಿತ್ರಿಸುತ್ತದೆ.

ಸಾವಿಲ್ಲದ ಕೇಡಿಲ್ಲದ ಚೆಲುವಂಗಾನೊಲಿದೆನವ್ವ!
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ
ಚೆಲುವಂಗಾನೊಲಿದೆನವ್ವಾ!
ಭವವಿಲ್ಲದ ಭಯವಿಲ್ಲದ ನಿಸ್ಸೀಮ ಚೆಲುವಂಗಾನೊಲಿದೆ
ಇದು ಕಾರಣ ಚೆನ್ನಮಲ್ಲಿಕಾರ್ಜುನ ಗಂಡನೆನಗೆ
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ತಾಯೆ!

ಕೌಶಿಕನ ಅರಮನೆಯಿಂದ ಹೊರಬಿದ್ದ ಅವಳಿಗೆ ದಾರಿಯುದ್ದಕ್ಕೂ ಧೈರ್ಯವನ್ನು ಕೊಟ್ಟಿದ್ದು ಚೆನ್ನಮಲ್ಲಿಕಾರ್ಜುನನ ಬೆಳಕಿನಲ್ಲಿ ತಾನಿದ್ದೇನೆ ಎಂಬುದೇ ಆಗಿದೆ. ತನ್ನನ್ನು ತಾನು ಸಂತೈಸಿಕೊಳ್ಳುವುದರಲ್ಲೇ ಬಹುಮಟ್ಟಿಗೆ ನಿಯುಕ್ತಳಾಗಿದ್ದ ಅಕ್ಕಮಹಾದೇವಿ ತನ್ನ ಕಾಲದ ಸಮಾಜದ ಬಗ್ಗೆ ಪ್ರತಿಕ್ರಿಯೆ ತೋರಿಸದೆ ಇಲ್ಲ. ಅವಳಲ್ಲಿ ಎರಡು ಕಾವ್ಯ ಗುಣಗಳಿದ್ದು, ಒಂದು ವೇದನೆಯಾದರೆ ನಿವೇದನೆ, ಎರಡನೆಯದು ಮದುವೆಯಾಗಿ ಕೌಶಿಕನ ಅರಮನೆ ಸೇರಿದ ಅವಳು ಅಲ್ಲಿ ಇಬ್ಬಗೆಯ ಜೀವನವನ್ನು ವಿಷಮ ಸಂಸಾರವನ್ನು ನಡೆಸಬೇಕಾಗಿ ಬಂದ ಪರಿಸ್ಥಿತಿಯನ್ನು 'ಒಳಗಣ

ಗಂಡನವ್ವ, ಹೊರಗಣ ಮಿಂಡನವ್ವಾ' ಎಂಬ ಮಾತುಗಳಲ್ಲಿ ಅಭಿವ್ಯಕ್ತಪಡಿಸುತ್ತಾಳೆ.

ಒಟ್ಟಾರೆಯಾಗಿ ಅಕ್ಕಮಹಾದೇವಿ ಶ್ರೇಷ್ಠ ಕವಯತ್ರಿಯಾಗಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ವಿಶೇಷ ಸ್ಥಾನ ಪಡೆದುಕೊಂಡಿದ್ದಾಳೆ. ಶತಶತಮಾನಗಳ ನಂತರವೂ ತನ್ನನ್ನು ಪ್ರಸ್ತುತಪಡಿಸಿಕೊಂಡಿರುವ ಆಕೆ ಮಹಿಳಾ ಹಕ್ಕುಗಳನ್ನು ಪ್ರತಿಪಾದಿಸುವ ಮೂಲಕ ಸಾಹಿತ್ಯಿಕವಾಗಿಯೂ ವಿಶೇಷತೆಯನ್ನು ಪಡೆದುಕೊಂಡಿದ್ದಾಳೆ.

**ಅಂಬಿಗರ ಚೌಡಯ್ಯ**

ವಚನ ಸಾಹಿತ್ಯದ ವಚನಕಾರರಲ್ಲಿ ಒಬ್ಬನಾದ ಅಂಬಿಗರ ಚೌಡಯ್ಯ ಬಸವಣ್ಣನ ನಿಕಟವರ್ತಿಯಾದರೂ ಆತನ ಬಗೆಗಿನ ಜೀವನದ ವಿವರಗಳು ನಮಗೆ ಹೆಚ್ಚು ಲಭ್ಯವಾಗಿಲ್ಲ. ಮಡಿವಾಳ ಮಾಚಿದೇವನನ್ನು ಹೋಲುವ ಅಂಬಿಗರ ಚೌಡಯ್ಯ ಅಂಬಿಗ ವೃತ್ತಿಯನ್ನು ಅವಲಂಬಿಸಿದ್ದು ಸುಮಾರು ಇನ್ನೂರು ವಚನಗಳು ದೊರಕಿವೆ. ತನ್ನ ಹೆಸರನ್ನೇ ತನ್ನ ಅಂಕಿತವಾಗಿ ಬಳಸಿಕೊಂಡು ವಚನಗಳನ್ನು ರಚಿಸಿರುವ ಅಂಬಿಗರ ಚೌಡಯ್ಯ ಚಿಕ್ಕ ಚಿಕ್ಕ ವಚನಗಳನ್ನು ರಚಿಸಿದ್ದರೂ ಪರಿಣಾಮಕಾರಿಯಾಗಿವೆ.

> ಬ್ರಹ್ಮದ ಮಾತನಾಡಿ ಕನ್ನೆಯರ ಕಾಲ ದೆಸೆಯಲ್ಲಿ ಕುಳಿತು
> ಪರಬೊಮ್ಮದ ಮಾತು ಅಲ್ಲಿಗೆ ನಿಂದಿಂತ್ತೆಂದಂಬಿಗಚವುಡಯ್ಯ

ಚೌಡಯ್ಯನಿಗೆ ಜೀವನದಲ್ಲಿ ಶ್ರದ್ಧೆಯುಂಟು ಮತ್ತು ಎಲ್ಲಾ ವಚನಕಾರರಂತೆ ಜೀವನವನ್ನು ಗಂಭೀರವಾಗಿ ತೆಗೆದುಕೊಂಡವನು. ಅವನು ಜೀವನವನ್ನು ಗಂಭೀರವಾಗಿ ತೆಗೆದುಕೊಂಡಿದ್ದಾನೆ ಎಂಬುದಕ್ಕೆ ಈ ವಚನವನ್ನು ಉದಾಹರಣೆಯಾಗಿ ನೀಡಬಹುದು.

> ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಉಡುವ ಚಿಂತೆ
> ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ
> ಹೆಂಡಿರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ
> ಬದುಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ
> ಇಂತೀ ಹಲವು ಚಿಂತೆಯಲ್ಲಿ ಇಪ್ಪವರ ಕಂಡೆನು
> ಶಿವನ ಚಿಂತೆಯಲ್ಲಿದ್ದವರೊಬ್ಬರನೂ ಕಾಣೆನೆಂದಾತ
> ನಮ್ಮ ಶಿವಶರಣರ ಚೌಡಯ್ಯ ಶಿವಶರಣನು.

ಮನುಷ್ಯನ ದುರಾಲೋಚನೆಗಳನ್ನು ಎಳೆಎಳೆಯಾಗಿ ಚಿತ್ರಿಸಿರುವ ಚೌಡಯ್ಯನ ಅನುಭವ ವಿಶಾಲವಾದುದು. ಶಿವನ ಚಿಂತೆಯಲ್ಲಿರುವವರನ್ನು ಮಾತ್ರ ಕಂಡಿಲ್ಲವೆಂದು ಹೇಳುವ ಅಂಬಿಗರ ಚೌಡಯ್ಯ ಮನುಷ್ಯನ ಆಧ್ಯಾತ್ಮಿಕತೆಯನ್ನು

ವಿಡಂಬನಾತ್ಮಕವಾಗಿ ವಿವರಿಸಿದ್ದಾನೆ. ಬದುಕಿನ ದೈನಂದಿನ ಚಟುವಟಿಕೆಯಲ್ಲಿ ಮುಳುಗಿದ್ದು ತನ್ನ ದೇವರೊಂದಿಗಿನ ಭಕ್ತಿಯನ್ನೇ ಮರೆತುಹೋಗಿರುವುದು ಮನುಕುಲದ ವಿಪರ್ಯಾಸವೆಂಬಂತೆ ವಿವರಿಸಿದ್ದಾನೆ.

## ಹರಿಹರ

ಹನ್ನೆರಡನೆಯ ಶತಮಾನದ ವಚನಕಾರರ ಪರಂಪರೆಯನ್ನು ಅನುಸರಿಸಿ ಬಂದ ಕವಿಗಳಲ್ಲಿ ಹರಿಹರ ಪ್ರಮುಖ ಕವಿಯಾಗಿ ನಿಲ್ಲುತ್ತಾನೆ. ತಮ್ಮ ಹೊಸ ಸಾಂಸ್ಕೃತಿಕ ಹೋರಾಟದಿಂದ ಹೊರಪಡಿಸಲಾಗದ ಒಂದು ಸಶಕ್ತ ಅಂಗವಾಗಿ ವಚನಕಾರರಿಗೆ ಸಾಹಿತ್ಯವು ಕಂಡು ಬಂದಿತ್ತು. ಬಸವಣ್ಣನ ಸಾಮಾಜಿಕ ಹೋರಾಟದಲ್ಲಿ ಸಾಹಿತ್ಯವು ಪ್ರಮುಖ ಸಾಧನವಾಗಿ ಬಳಕೆಯಾಗಿರುವುದು ಇಂದು ಸುಂದರ ಇತಿಹಾಸವಾಗಿ ರೂಪುಗೊಂಡಿದೆ. ಬಸವ, ಅಲ್ಲಮ, ಅಕ್ಕ ಮುಂತಾದವರ ಕಾಲಕ್ಕೂ ಹರಿಹರನಿಗೂ ಸುಮಾರು ನೂರು ವರ್ಷಗಳ ಅಂತರವಿದೆ. ಬಸವಾದಿಗಳು ಪವಾಡವನ್ನು ಮೆರೆದು ಜನತೆಯನ್ನು ಎಚ್ಚರಿಸಲು ಬಂದ ದೇವಲೋಕದ ಮಹಿಮಾನ್ವಿತರು ಎಂದು ಆತನ ಕಾಲಕ್ಕೆ ಕಥೆಗಳು ಆರಂಭವಾಗಿದ್ದವು. ಬಸವಣ್ಣ ಆರಂಭಿಸಿದ ಹೊಸಹಾದಿ ಹರಿಹರನ ಕಾಲಕ್ಕಾಗಲೇ ಹತ್ತು ಹಲವು ಮತಗಳಲ್ಲಿ ಮತ್ತೊಂದಾಗಿ ಮೊದಲಿನ ಕಾಂತಿಯನ್ನು ಕಳೆದುಕೊಳ್ಳತೊಡಗಿತ್ತು. ತನ್ನ ಹೊಸಹಾದಿಯಲ್ಲಿ ಕಾಣಬರುತ್ತಿದ್ದ ಕುಂದುಕೊರತೆಗಳನ್ನು ಅಲ್ಲಲ್ಲಿಯೇ ಖಂಡಿಸಿ ಸರಿಪಡಿಸುವ ಕೆಲಸವು ಆತನಿಗೆ ನಿತ್ಯವೂ ಕರ್ತವ್ಯವಾಗಿ ಕಾಣಿಸತೊಡಗಿತ್ತು. ಹರಿಹರನಂತಹ ಮುಖ್ಯ ಕವಿ ಶುಚಿ ಜೀವನದ ಶಿವಭಕ್ತರ ಕಥೆಗಳನ್ನು ಹಾಡುವುದರ ಮೂಲಕ ವಚನಕಾರರ ಮಾರ್ಗಕ್ಕೆ ತನ್ನ ಪರಿಮಿತಿಯಲ್ಲಿ ಅರ್ಥಪೂರ್ಣ ಗೌರವ ಸೂಚಿಸಿದ.

ಹರಿಹರನ ಸಂಬಂಧದ ಅನೇಕ ಸಂಗತಿಗಳನ್ನು ಆಧರಿಸಿ ಈತನ ಕಾಲವನ್ನು ನಿರ್ಧರಿಸುವ ಚರ್ಚೆ ನಡೆಯುತ್ತಿದೆ. ಕ್ರಿ.ಶ. 1165 ರಿಂದ ಹಿಡಿದು 1300 ರ ತನಕ ಇವನ ಕಾಲದ ಓಡಾಟವನ್ನು ವಿವಿಧ ವಿದ್ವಾಂಸರು ಕಾಣುತ್ತಿದ್ದಾರೆ. ರಗಳೆ ಎಂಬ ಹಾಡಿನ ಮಟ್ಟನ್ನು ತನ್ನ ಕಾವ್ಯಗಳಲ್ಲಿ ಸಶಕ್ತವಾಗಿ ಮೊದಲಿಗೆ ಬಳಸಿಕೊಂಡ ಹರಿಹರ ವಚನಕಾರರು ಕನ್ನಡ ಸಾಹಿತ್ಯದ ಹಾದಿಯಲ್ಲಿ ಬರುತ್ತಿದ್ದ ಸಾಂಪ್ರದಾಯಿಕ ಪಂಡಿತಮಾರ್ಗವನ್ನು ಬಿಟ್ಟು ಹೊಸ ಜನತಾ ಮಾರ್ಗವನ್ನು ಸೃಷ್ಟಿಸಿದ ಹಾಗೆ ಹೊಸ ಹಾದಿಯಲ್ಲಿ ನಡೆದ ಬುದ್ಧಿವಂತ. ಹಾಗಾಗಿ ಸಾಮಾನ್ಯ ಕಥೆಗಳನ್ನು ರಗಳೆ ಮಟ್ಟಿನಲ್ಲಿ ಸಾಮಾನ್ಯರಿಗೆ ಹಿಡಿಸುವ ಹಾಗೆ ಬರೆದಿದ್ದಾನೆ. ಇತರರು ಹರಿಹರನನ್ನು ರಗಳೆ ಕವಿ ಎಂದು ಕರೆಯುತ್ತಿದ್ದರೆಂದೂ ತಿಳಿದು ಬಂದಿದೆ.

'ಗಿರಿಜಾ ಕಲ್ಯಾಣ' ಚಂಪೂ ಕಾವ್ಯವನ್ನು ಬರೆವ ಕಾಲಕ್ಕೆ ಹರಿಹರ ಸಂಪ್ರದಾಯಬದ್ಧ ಕವಿಯಾಗಿ ಕಾಣಿಸಿಕೊಂಡರೆ ನಂತರದ ದಿನಗಳಲ್ಲಿ ಹೊಸ

ರೀತಿಯ ಕಾವ್ಯವನ್ನು ಹೇಳಬೇಕಾದ ಅನಿವಾರ್ಯತೆ ಕಂಡುಕೊಂಡನು. ಹಾಗಾಗಿ ಸಂಪೂರ್ಣ ಬದಲಾವಣೆ ಮಾಡಿಕೊಂಡ ಹರಿಹರ ಜನಸಾಮಾನ್ಯರನ್ನು ಕುರಿತು ಹಾಡಿ ಹೊಗಳಿ ಕಾವ್ಯ ರಚಿಸತೊಡಗಿದ. ಸಂಸ್ಕೃತ ಎನ್ನುವ ಜಾಡನ್ನು ಅನುಕರಿಸುವುದರಲ್ಲಿ ಕನ್ನಡ ಕವಿಗಳು ಬಳಲುತ್ತಿದ್ದು, ಜನತೆಯೊಡನೆ ನೇರ ಸಂಪರ್ಕವಿದ್ದ ಸಾಮಾನ್ಯರಿಗೆ ಈತನು ಶಿವಶರಣರನ್ನು ಕುರಿತು ರಗಳೆಗಳನ್ನು ರಚಿಸಿ ಹೊಸ ಸಂಪ್ರದಾಯಕ್ಕೆ ನಾಂದಿ ಹಾಡಿದನು. ಆದರೆ ಆತ ಮೂಲಕಥೆಗಳನ್ನು ಎಲ್ಲಿಂದ ಪಡೆದುಕೊಂಡನೆಂಬುದರ ಬಗೆಗೆ ಖಚಿತ ಮಾಹಿತಿಗಳಿಲ್ಲದಾಗಿ ಸಂಸ್ಕೃತ ಮತ್ತು ತಮಿಳು ಗ್ರಂಥಗಳಿಂದ ಬಹುಶಃ ಈತ ಕಥೆಗಳನ್ನು ತೆಗೆದುಕೊಂಡಿರಬಹುದಾಗಿ ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈತನ ರಗಳೆಗಳಲ್ಲಿ ಕೆಲವು ತಮಿಳು ಪದಗಳು ಕಂಡು ಬರುವುದೇ ಈ ಅಭಿಪ್ರಾಯಕ್ಕೆ ಕಾರಣವಿರಬಹುದು.

ಹರಿಹರನು ಸೃಷ್ಟಿಸಿರುವ ಪಾತ್ರಗಳು ಪರಿಣಾಮಕಾರಿಯಾದವುಗಳಾಗಿದ್ದು, ಸ್ವಯಂ ಭಕ್ತನಾಗಿದ್ದ ಈತ ಭಕ್ತಿಯ ಉನ್ನತಿಯನ್ನು ಮೆರೆಯುವ ಪಾತ್ರಗಳಲ್ಲಿ ತಾನೇ ಕರಗಿ ಹರಿದಿರುವುದು ಕಂಡು ಬರುತ್ತದೆ. ಈತನ ದೃಷ್ಟಿಯಲ್ಲಿ ರಾಜತ್ವ, ದೇವತ್ವಗಳು ತಮ್ಮ ಮೇಲುಗಾರಿಕೆ ಮತ್ತು ಶ್ರೇಷ್ಠತನವನ್ನು ಪ್ರದರ್ಶಿಸುವ ಭ್ರಮೆಯಿಂದ ಕೂಡಿದವುಗಳಲ್ಲ. ಬದಲಿಗೆ ಇಲ್ಲಿನ ರಾಜ ಸಮಾಜದ ಕಣ್ಣಿಗೆ ಹೀನಜಾತಿಯ ಒಬ್ಬ ಸೇವಕನ ಗುಡಿಸಲಿಗೆ ಬಂದು ಆತನ ಕಾಲ ಮೇಲೆ ಬಿದ್ದು ಹೊರಳಾಡುತ್ತಾನೆ. ದೇವರು ಅಂಬಲಿ ಉಣ್ಣುತ್ತಾನೆ. ಇಲ್ಲಿ ಸಮಾಜ ವ್ಯವಸ್ಥೆಯ ಹಾಗೂ ದೇವರ ಬಗೆಗಿನ ಮಾಮೂಲಿಯಾದ ಮೌಢ್ಯದ ಸಂಕೋಲೆಯಿಂದ ಹೊರಬಂದ ಸ್ಥಿತಿಯಿರುವುದು ಹೆಚ್ಚಿನ ಸಂಗತಿಯಾಗಿದೆ. ಹಾಗಾಗಿ ಯಾರ ಕಣ್ಣಿಗೂ ಬೀಳದೆ ಮೂಲೆಯ ಕಾಡಿನಲ್ಲಿ ಪ್ರಾಣಿಗಳನ್ನು ಕೊಂಡು ಬದುಕುವ ಬೇಡನಾದ ಕಣ್ಣಪ್ಪ ಹರಿಹರನ ಮತ್ತೊಬ್ಬ ಕಥಾನಾಯಕ. ಕಥೆ ಮತ್ತು ತನ್ನ ಕಥನಕಲೆಯನ್ನು ಆಯ್ಕೆ ಮಾಡಿಕೊಳ್ಳುವುದರಲ್ಲಿಯೇ ಈತನ ಅಭಿರುಚಿ, ಸಾಮರ್ಥ್ಯಗಳು ಪ್ರಕಟವಾಗಿವೆ.

ದೇವಲೋಕದಿಂದ ಇಳಿದು ಬಂದವರು ಪವಾಡಗಳನ್ನು ಮೆರೆದವರು ಎಂಬು ಪುರಾಣ. ವ್ಯಕ್ತಿಗಳ ಸಾಲಿನಲ್ಲಿ ಚಾರಿತ್ರಿಕ ವ್ಯಕ್ತಿಯಾದ ಬಸವಣ್ಣನನ್ನು ನಿಲ್ಲಿಸಿದ ಹರಿಹರನು ಎಷ್ಟೋ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ದೇವರು ಮತ್ತು ಭಕ್ತನ ನಂಟಿನ ಬಗೆಗೆ ತಲೆಕೆಡಿಸಿಕೊಳ್ಳುವ ಈತ ರಾಜರ ಆಸ್ಥಾನದಿಂದ ಹೊರಗುಳಿದವನು. ಯಾರು ಯಾರಿಗೂ ಯಾವ ಕಾರಣಕ್ಕೂ ಹೆದರಬೇಕಾಗಿಲ್ಲ. ಗೌರವ ತೋರಿಸುವುದಿದ್ದಲ್ಲಿ ಅದು ಶಿವನೊಬ್ಬನಿಗೆ ಮಾತ್ರ ಮೀಸಲು ಎಂದು ಹೇಳುತ್ತಾನೆ.

**ದೇಪರಾಜ**

ವಿಜಯನಗರದ ರಾಜವಂಶಕ್ಕೆ ಸೇರಿದವನು ದೇಪರಾಜ ಎನ್ನಲಾಗಿದ್ದು, ಕ್ರಿ.ಶ. 1406 ರಿಂದ 1422 ರವರೆಗೆ ಆಳ್ವಿಕೆ ನಡೆಸಿದ ದೇವರಾಯನೇ ದೇಪರಾಜನಿರಬೇಕೆಂಬುದು ವಿದ್ವಾಂಸರ ಊಹೆಯಾಗಿದೆ. ಸಂಗಮ ಅಥವಾ ಯಾದವ ವಂಶದವರ ವಂಶವೃಕ್ಷವನ್ನು ನೋಡಿದಾಗ ದೇಪರಾಜ ವಿಜಯನಗರ ಸಾಮ್ರಾಜ್ಯವನ್ನಾಳಿದ ಅರಸುಮನೆತನದವನೇ ಎಂಬುದು ಸ್ಪಷ್ಟವಾಗುತ್ತದೆ. ಬುಕ್ಕರಾಯನ ಸೊಸೆಯಿಂದ ರಚಿತವಾಗಿರುವಂತೆ ದೇಪರಾಜ- ಕಂಪನ ಮಗನೆಂಬುದಾಗಿ ತಿಳಿದು ಬರುತ್ತದೆ. ಇನ್ನು ಕಂಚಿಯ ಹತ್ತಿರದ ತಿರುಪ್ಪುರುಲಿಯ ಶಾಸನವು ಸೂಚಿಸುವ ಪ್ರಕಾರ ಕಂಪನ ಮಗನೇ ದೇವರಾಯ ಅಥವಾ ದೇಪರಾಜ ಎಂಬುದು ಸ್ಪಷ್ಟಪಡುತ್ತದೆ. ಕಂಪರಾಜನೆಂಬುವನು ಕ್ರಿ.ಶ. 1365 ರಲ್ಲಿ ರಾಜನಾಗಿದ್ದುದರಿಂದ ಅವನ ಮಗ ದೇಪರಾಜ 1410 ರವನು ಎಂಬುದಕ್ಕೆ ಸಮರ್ಥನೆ ದೊರೆಯುತ್ತದೆ.

ಕವಿಚರಿತೆಕಾರರು ಸಹ ದೇಪರಾಜನ ಕಾಲವನ್ನು ಕ್ರಿ.ಶ. 1410 ಎಂಬುದಾಗಿ ನಿರ್ಧರಿಸಿದ್ದಾರೆ. ಆದರೂ ಇಲ್ಲಿನ ಗೊಂದಲವೇನೆಂದರೆ ವಿಜಯನಗರದ ಮೂಲ ಪುರುಷನಾದ ಸಂಗಮನಿಗೆ ಕಂಪನೆಂಬ ಒಬ್ಬ ಮಗನಿದ್ದನೆಂದು ತಿಳಿದು ಬರುತ್ತದೆ. ಈ ಕಂಪನ ತಮ್ಮನಾದ ಬುಕ್ಕರಾಯನಿಗೂ 'ಕಂಪ' ಎಂಬ ಮಗನೊಬ್ಬನಿದ್ದನು. ಹೀಗಾಗಿ ದೇಪರಾಜ ಯಾವ ಕಂಪನ ಮಗನೆಂಬ ಗೊಂದಲ ಸಹಜವಾದುದು. ಬಹುಶಃ ಎರಡನೆಯ ಕಂಪನ ಮಗನೇ ದೇಪರಾಜನಿರಬೇಕೆಂಬುದು ಕವಿಚರಿತೆಕಾರರ ಅಭಿಪ್ರಾಯವಾಗಿದೆ. ಈ ಎಲ್ಲಾ ಕಾರಣಗಳಿಂದಾಗಿ ಕ್ರಿ.ಶ. 1410 ರಿಂದ 1422 ರವರೆಗೆ ಆಳಿದ ದೇವರಾಯ ಅಥವಾ ಪ್ರತಾಪ ದೇವರಾಯನೇ 'ಸೊಬಗಿನ ಸೋನೆ' ಗ್ರಂಥದ ಕರ್ತೃ ದೇಪರಾಜನೆಂದು ಹೇಳಬಹುದಾಗಿದೆ.

ದೇಪರಾಜನು 'ಸೊಬಗಿನ ಸೋನೆ' ಎಂಬ ಸಾಂಗತ್ಯ ಗ್ರಂಥವನ್ನು ರಚಿಸಿರುವುದಲ್ಲದೆ 'ಅಮರುಕ' ಎಂಬ ಶತಕವನ್ನು ಷಟ್ಪದಿ ರೂಪದಲ್ಲಿ ಬರೆದಿದ್ದಾನೆ. ಸಾಂಗತ್ಯದ ಪ್ರಥಮ ಕವಿ ಎಂಬ ಹೆಗ್ಗಳಿಕೆಯೂ ದೇಪರಾಜನದಾಗಿದೆ. 'ಸೊಬಗಿನ ಸೋನೆ' ಮೂಲ ಕಥೆಗಳನ್ನಾಧರಿಸಿದ ಸ್ವತಂತ್ರ ಕೃತಿಯಾಗಿದ್ದು, ಅಮರುಕ ಶತಕವು ಸಂಸ್ಕೃತ ಕವಿ ಅಮರುಕನ ಅದೇ ಹೆಸರಿನ ಗ್ರಂಥದ ಕನ್ನಡಾನುವಾದ ಕೃತಿಯಾಗಿದೆ. ಈತನು ತನ್ನ ಕಾವ್ಯದಲ್ಲಿ ತನ್ನನ್ನು ದೇಪರಾಜ, ದೇಪಭೂಪ, ದೇಪನರನಾಥ, ದೇಪ ಎಂಬುದಾಗಿ ಹೆಸರಿಸಿಕೊಂಡಿದ್ದಾನೆ.

'ಸೊಬಗಿನ ಸೋನೆ' ಸಾಂಗತ್ಯ ಗ್ರಂಥವು ಒಟ್ಟು ಇಪ್ಪತ್ತಾರು ಸಂಧಿಗಳಿಂದ ಕೂಡಿದ ಎರಡು ಸಾವಿರ ಪದ್ಯಗಳನ್ನೊಳಗೊಂಡಿದೆ. ಈ ಕೃತಿಯ ಹಲವು ಪ್ರತಿಗಳು

ದೊರಕಿದ್ದು ಇಲ್ಲಿನ ಪದ್ಯಸಂಖ್ಯೆಗಳು ಹೆಚ್ಚಿರುವುದಲ್ಲದೆ ಕಾವ್ಯ ಕಥಾನಕವೂ ಮುಂದುವರಿದಿರುವುದು ಕಾಣುತ್ತದೆ.ಇದು ಶೃಂಗಾರಪ್ರಧಾನ ಕಾವ್ಯವಾಗಿದ್ದು, ಕಥೆಯಿಂದ ಕಥೆಗೆ ಸಂಬಂಧವನ್ನು ಕಲ್ಪಿಸಿ ಅನ್ಯೋನ್ಯತೆಯನ್ನು ಸಾಧಿಸಲಾಗಿದೆ. ಇಲ್ಲಿನ ಶೃಂಗಾರ ಕಥೆಗಳಲ್ಲಿ ಸುರಭಿವತಿ, ಕಂಜರೆ, ವಸಂತೆ, ಬರಗೆ, ಪ್ರಣತಿ ಮೊದಲಾದ ಏಳು ಜನ ಸ್ತ್ರೀಯರ ಕಥಾನಕಗಳು ಬಿಚ್ಚಿಕೊಳ್ಳುತ್ತವೆ. ಈ ಎಲ್ಲಾ ಕಥೆಗಳ ಕಥಾನಾಯಕ ವಿಕ್ರಮ ಅಥವಾ ಜಸಂಗಪರಾಯ ಎಂಬ ಒಬ್ಬನೇ ನಾಯಕನ ಸಾಹಸಮಯ ಚಿತ್ರಣಗಳೊಂದಿಗೆ ಶೃಂಗಾರಾಭಿವ್ಯಕ್ತಿಗೊಳ್ಳುತ್ತದೆ.

ಇಲ್ಲಿನ ಕಾವ್ಯನಾಯಕ ಮೇರುಗಿರಿಯ ಪೂರ್ವದಲ್ಲಿನ ಚದುರ ದೇಶದ ಸಸಿವೊಳಲು ಪಟ್ಟಣದ ರಾಜ ಜಯರಾಜಶೇಖರ ಮತ್ತು ರಾಣಿ ಸುರಭಿವತಿಯರಿಗೆ ಹರನ ವರದಿಂದ ಜನಿಸಿದ ಮಗ. ಅವನಿಗೆ ವಿಕ್ರಮ ಮತ್ತು ಜಸಂಗಪ ಎಂಬ ಎರಡು ಹೆಸರುಗಳೂ ರೂಢಿಗೆ ಬರುತ್ತವೆ. ಇವನು ದೊಡ್ಡವನಾಗಿ ಶಸ್ತ್ರಾಸ್ತ್ರ ಪಾರಂಗತ ವಿದ್ಯಾಪರಿಣತನಾಗಿ ಸಾಹಸಮಯ ಕಥಾನಕಗಳಿಗೆ ಕಾರಣನಾಗುತ್ತಾನೆ. ರಕ್ಕಸನ ಅಪಹರಣಕ್ಕೊಳಗಾದ ಕಾಶ್ಮೀರ ರಾಜನ ಮಗಳು ಕಂಜರೆಯನ್ನು ಮುಕ್ತಗೊಳಿಸುವುದು, ಶಿವನ ಶಾಪದಿಂದ ಹಂದಿಯಾಗಿದ್ದ ಪುರುಷನಿಗೆ ಬಿಡುಗಡೆಯನ್ನೊದಗಿಸುವುದು, ಹಕ್ಕಿಯ ಪೂರ್ವ ವೃತ್ತಾಂತವನ್ನು ತಿಳಿದು ಶಬರರಾಜನ ವೈಭವ ಮತ್ತು ಶಬರನ ಹೆಂಡತಿಯ ವಿವರಗಳನ್ನು ತಿಳಿದು ಅಲ್ಲಿನ ಅರಸನ ಮಗಳಾದ ಪತ್ರಿಣಿಯ ವೃತ್ತಾಂತವನ್ನರಿತು ವಿಕ್ರಮ ಮತ್ತು ಪತ್ರಿಣಿಯರ ಸಮಾಗಮವೇರ್ಪಟ್ಟು ಮತ್ತೆ ಅಗಲಿದ ಕಥಾನಕಗಳ ಹಂದರ ಸೊಬಗಿನ ಸೋನೆಯಲ್ಲಿದೆ. ಈ ಪ್ರೇಮಿಗಳಿಬ್ಬರ ಅಗಲಿಕೆಯ ಕಾರಣದಿಂದಾಗಿ ಅವರನ್ನು ಒಂದುಗೂಡಿಸುವ ಉದ್ದೇಶದಿಂದ ಕಾವ್ಯವನ್ನು ಬೇರೆ ಬೇರೆ ಹಸ್ತಪ್ರತಿಗಳಲ್ಲಿ ಮುಂದುವರಿಸಿರುವ ಸಾಧ್ಯತೆಯೂ ಇದೆ. ಆದ್ದರಿಂದಲೇ ಇವರ ಪದ್ಯಸಂಖ್ಯೆಗಳು ಪ್ರತಿ ಹಸ್ತಪ್ರತಿಯಲ್ಲೂ ಭಿನ್ನವಾಗಿದೆ.

ಸೊಬಗಿನ ಸೋನೆಯ ಕಾವ್ಯ ಕಥೆಗೆ ಮೂಲ ಕಥಾ ಗ್ರಂಥವೊಂದು ಇದ್ದಿರಬೇಕು. ಇಲ್ಲಿನ ಕಥೆಗಳು ಕಥಾಸರಿತ್ಸಾಗರ, ದಶಕುಮಾರ ಚರಿತೆ ಇವುಗಳನ್ನು ನೆನಪಿಗೆ ತರುವುದಾದರೂ ಹೊಂದಾಣಿಕೆಗಳು ವಿರಳವಾಗಿವೆ. ಆದರೂ ಕೆಲವಾರು ಗ್ರಂಥಗಳ ಕಥೆಗಳಲ್ಲಿ ಮೂಲವನ್ನು ಗುರುತಿಸಬಹುದಾಗಿದ್ದು, ಇವುಗಳಲ್ಲದೆ ಪ್ರಾಕೃತ ಅಥವಾ ಸಂಸ್ಕೃತ ಗ್ರಂಥಗಳೂ ಮೂಲವಾಗಿರಬೇಕು ಎನ್ನಲಾಗಿದೆ. ಶೃಂಗಾರ ಕಥೆಗಳ ನೇಯ್ಗೆ, ಪಾತ್ರ ಚಿತ್ರಣ, ಕುಶಲತೆ, ಕಾವ್ಯದ ನಡಿಗೆ ಇವುಗಳು ಸುಲಲಿತವಾಗಿ ಮೂಡಿಬಂದಿದೆ. ಇಲ್ಲಿನ ನಾಯಕ ಹುಟ್ಟಿದಾಗಲೇ ವಿಕ್ರಮ ಜನರ ಕಷ್ಟ ನಿವಾರಣೆಯೇ ಇವನ ಗುರಿ. ಜೊತೆಗೆ ಬರುವ ಪುರುಷ ಪಾತ್ರಗಳು ಆಯಾ ಸನ್ನಿವೇಶಗಳಲ್ಲಿ ಪೂರಕ ಪಾತ್ರಗಳಾಗಿ ನಿಲ್ಲುತ್ತವೆ. ನೇಮಿಚಂದ್ರನ ಲೀಲಾವತಿ

ಕಾವ್ಯದಂತೆ ಇದೊಂದು ವರ್ಣನಾತ್ಮಕ ಕಾವ್ಯ. ಕಥಾಹಂದರಕ್ಕಿಂತಲೂ ವರ್ಣನಾ ವಿನ್ಯಾಸವೇ ವಿಸ್ತಾರವಾದುದು. ಶೃಂಗಾರ ವರ್ಣನೆಗೆ ಪ್ರಾಶಸ್ತ್ಯ ನೀಡಲಾಗಿದೆ. ಕಾವ್ಯಕ್ಕೆ ಒಡಮೂಡಿಸಿರುವ ಪರಿಣಾಮಕಾರಿಯಾದ ಛಂದಃಶೈಲಿಯಾದ ಸಾಂಗತ್ಯವು ಶೃಂಗಾರ ರಸ ಸ್ಥಾನವನ್ನು ಎತ್ತರಕ್ಕೇರಿಸಿದೆ. ಕಾವ್ಯಭಾಷೆ, ಕಥನಕ್ರಮ ಮತ್ತು ವರ್ಣನಾ ವಿನ್ಯಾಸ ಹದಗೊಳಿಸಿದಂತಿದ್ದು ಕವಿಯ ಪರಿಣತಿಯನ್ನು ತೋರಿಸುತ್ತದೆ. ದೇಶಿ ಶಬ್ದಗಳ ಸರಾಗವಾದ ನಡಿಗೆಯೊಂದಿಗೆ ಮೂಡಿಬರುವ ಚಿತ್ರಣಗಳು ಉಜ್ವಲವಾಗಿದ್ದು ಸಾಂಗತ್ಯ ಕೃತಿಗಳ ಆರಂಭದ ಕೃತಿಯಾಗಿದ್ದು, ಯಶಸ್ಸನ್ನು ಪಡೆದಿದೆ.

ದೇಪರಾಜನ ಮತ್ತೊಂದು ಕೃತಿ ಅವರುಕ ಶತಕ. ಇದು ಅನುವಾದ ಕೃತಿ. ಇದು ಸಹ ಶೃಂಗಾರ ರಸಪೂರಿತವಾದುದು. ದೇಪರಾಜನಿಗೆ ಶೃಂಗಾರವೆಂದರೆ ಹೆಚ್ಚಿನ ಇಷ್ಟವೆಂದು ತೋರುತ್ತವೆ. ಈ ಕಾವ್ಯದ ಕಾಲಘಟ್ಟವನ್ನು ಕೆಲವರು ಕಾಳಿದಾಸನ ಕಾಲಕ್ಕೆ ಕೊಂಡೊಯ್ದಿದ್ದರೆ ಮತ್ತೆ ಕೆಲವರು ಕ್ರಿ.ಶ. 800 ರ ವಾಮನನ ಕಾಲಕ್ಕೆ ಕರೆದೊಯ್ಯುವರು. ಇಡೀ ಕಾವ್ಯವನ್ನು ಪರಿವರ್ಧಿನಿ ಷಟ್ಪದಿಯಲ್ಲಿ ರಚಿಸಿರುವುದರಿಂದ ಪರಿವರ್ಧಿನಿ ಷಟ್ಪದಿಯಲ್ಲಿ ರಚಿತವಾಗಿರುವ ಮೊದಲ ಕೃತಿಯೆಂಬ ಹೆಗ್ಗಳಿಕೆಗೂ ಪಾತ್ರವಾಗಿದೆ. ಅವರುಕ ಶತಕ ಈ ಕೃತಿಯ ಸಮಗ್ರ ಪ್ರತಿ ದೊರೆತಿಲ್ಲವಾದ್ದರಿಂದ ಈ ಗ್ರಂಥದಲ್ಲಿನ ಪದ್ಯಗಳ ಸಂಖ್ಯೆಯನ್ನು ಖಚಿತವಾಗಿ ಹೇಳಲು ಸಾಧ್ಯವಾಗಿಲ್ಲ. ಪ್ರಾರಂಭಕ್ಕೆ ಶಿವ-ಪಾರ್ವತಿ ಗಣೇಶ ಸರಸ್ವತಿಯರ ಸ್ತುತಿಯಿಂದ ಆರಂಭಗೊಂಡಿದ್ದು, ವರ್ಣನೆಗಳ ಮಹಾಪೂರವೇ ಹರಿದಿದೆ. ಇದರಲ್ಲಿ ಕವಿ ತನ್ನನ್ನು 'ನವರಸ ಕವಿ' ಎಂತಲೇ ಬಣ್ಣಿಸಿಕೊಂಡಿದ್ದಾನೆ. ''ಅಮರುಕವಿಯ ಕವಿತೆಯ ರಸವನ್ನು ಕರ್ಣಾಟ ಭಾಷೆಯಲ್ಲಿ ತಾನು ಬಿತ್ತರಿಸುವೆನೆಂದು'' ಅಭಿಮಾನದಿಂದ ಹೇಳಿಕೊಂಡಿದ್ದಾನೆ. ದೇಪರಾಜ ಸಂಸ್ಕೃತ ಭಾಷಾ ಪಂಡಿತನಾಗಿದ್ದು ಅಲ್ಲಿನ ಮೂಲಾರ್ಥವನ್ನು ಗ್ರಹಿಸಿ ಸರಿಯಾದ ರೀತಿಯಲ್ಲಿ ಅದನ್ನು ಕನ್ನಡಿಸಿದ್ದಾನೆ. ಇವನ ಎರಡೂ ಕೃತಿಗಳು ಶೃಂಗಾರ ಸದೃಶವಾದ ವರ್ಣನಾ ಪ್ರಧಾನ್ಯತೆಯನ್ನು ಪಡೆದಿರುವುದಷ್ಟೇ ಅಲ್ಲದೆ ಛಂದಸ್ಸು ಮತ್ತು ಕಾವ್ಯ ರಚನಾ ಕ್ರಮದಲ್ಲೂ ಅಪೂರ್ವತೆಯನ್ನು ಸಾಧಿಸಿದ ಕೃತಿಗಳಾಗಿವೆ.

### ಶಿಶುಮಾಯಣ

ಸಾಂಗತ್ಯ ಕವಿಗಳಲ್ಲಿ ಆರಂಭಿಕ ಕವಿಗಳ ಸಾಲಿಗೆ ಸೇರ್ಪಡೆಯಾಗುವ ಕವಿಗಳಲ್ಲಿ ಶಿಶುಮಾಯಣನೂ ಒಬ್ಬ. 13ನೇ ಶತಮಾನದಲ್ಲಿ ಹಾಡಿನ ರೂಪದ ಸಾಂಗತ್ಯ ಗ್ರಂಥಗಳ ರಚನೆಯಾದುವೆಂದು ಕರ್ನಾಟಕ ಕವಿಚರಿತೆಕಾರರು ಹೇಳುತ್ತಾರೆ. ದೇವರಾಜನೇ ಸಾಂಗತ್ಯ ಕವಿಗಳಲ್ಲಿ ಮೊದಲಿಗನೆಂದು ಗುರುತಿಸಿದ್ದರೆ

ಅವನ ಸಮಕಾಲೀನ ಅಥವಾ ಅವನಿಗಿಂತ ಕಿರಿದಂತರದ ಕವಿ ಶಿಶುಮಾಯಣನೆಂದು ತಿಳಿದು ಬರುತ್ತದೆ. ಚಪ್ಪನ್ನ ದೇಶಕ್ಕೆ ಮಣಿಪರ್ವತದಂತೆ ಕಂಗೊಳಿಸುವ ಹೊಯ್ಸಳ ನಾಡು ಶಿಶುಮಾಯಣನ ನಾಡು ಎಂಬುದಾಗಿ ಹೇಳಲಾಗಿರುವುದರಿಂದ ಇದನ್ನು ಕಾವೇರಿ ನದಿಯ ಪಕ್ಕದಲ್ಲಿನ 'ನಯನಾಪುರ' ಇವನ ಹುಟ್ಟೂರು ಎಂಬುದಾಗಿ ಗುರುತಿಸಲಾಗಿದೆ. ಅಲ್ಲಿನ ನೇಮಿಚಂದ್ರ ಜಿನೇಂದ್ರ ದೇವಾಲಯವಿತ್ತು. ಅಲ್ಲಿನ ವರ್ತಕ ಮಾಯಣ ಸೆಟ್ಟಿ ಮತ್ತು ತಾಮರಸಿ ದಂಪತಿಗಳಿಗೆ ಮಗನಾದ ಬೊಮ್ಮ ಶೆಟ್ಟಿ ಮತ್ತು ಅವನ ಮಡದಿ- ನೇಮಾಂಬಿಕೆಯ ಮಗನಾಗಿ ಶಿಶುಮಾಯಣ ಜನಿಸಿದ. ಮೂಲದಲ್ಲಿ ಹಸುಳೆ ಮಾಯಣ, ತರಳೆ ಮಾಯಣ ಎಂಬುದಾಗಿ ಹೆಸರುಗಳಿದ್ದರೂ ವಸುಧೆಯ ಭವ್ಯರಿಗೆಲ್ಲ ಶಿಶುವಾಗಿದ್ದರಿಂದ ತನ್ನನ್ನು ಶಿಶುಮಾಯಣನಾದೆನೆಂದು ಪದ್ಯವೊಂದರಲ್ಲಿ ತನ್ನ ಬಗ್ಗೆ ಹೇಳಿಕೊಂಡಿದ್ದಾನೆ.

'ತ್ರಿಪುರದಹನ ಸಾಂಗತ್ಯ' ಮತ್ತು 'ಅಂಜನಾ ಚರಿತೆ'ಗಳನ್ನು ಬರೆದಿದ್ದನೆಂದು ಹೇಳಲಾಗಿದ್ದರೂ ಅಂಜನಾ ಚರಿತೆ ಕೃತಿಯ ಬಗ್ಗೆ ವಿವರಗಳಷ್ಟೆ ದೊರೆತಿದ್ದು, ಕೃತಿ ಲಭ್ಯವಾಗಿಲ್ಲ. ಇಲ್ಲಿ ತ್ರಿಪುರ ದಹನ ಸಾಂಗತ್ಯದ ಕಾಲವನ್ನು ಕ್ರಿ.ಶ. 1233 ಎಂದು ಕರ್ನಾಟಕ ಕವಿಚರಿತಕಾರರು ಗುರುತಿಸಿದ್ದರೂ 1427 ಆಗಿದ್ದಿರಬೇಕೆಂದು ಗೋವಿಂದ ಪೈಗಳು ಚರ್ಚಿಸಿದ್ದಾರೆ. 1472 ರಲ್ಲಿ ಶಿಶುಮಾಯಣನಿದ್ದ ಎಂಬುದನ್ನು ಗೋವಿಂದ ಪೈಗಳು ಆಧಾರ ಸಮೇತ ಸಮರ್ಥಿಸಿದ್ದಾರೆ. ಆದ್ದರಿಂದಾಗಿ ಶಿಶುಮಾಯಣನ ಕಾಲದ ಬಗ್ಗೆ ಕೆಲವು ಗೊಂದಲಗಳಿವೆ. ತ್ರಿಪುರದಹನದಲ್ಲಿ ಕವಿ ತನ್ನನ್ನು ರನ್ನ, ಪೊನ್ನರ ಜೊತೆಗೆ ಜನ್ನನನ್ನು ಸ್ತುತಿಸಿರುವುದರಿಂದ ಜನ್ನನಿಗಿಂತ ಈಚಿನವನಿರಬೇಕು ಎಂಬ ತರ್ಕವೂ ಇದೆ.

### ತ್ರಿಪುರದಹನ ಸಾಂಗತ್ಯ

ತ್ರಿಪುರ ದಹನದ ಕಥೆ ಮಹಾಭಾರತ, ಭಾಗವತ, ಮತ್ಸ್ಯ ಪುರಾಣ ಇವುಗಳಲ್ಲಿ ಒಂದೇ ರೀತಿಯದಾಗಿದ್ದು, ಶೈವ ಸಂಪ್ರದಾಯದ ಪುರಾಣ ಕಥೆಯಾಗಿ ನೆನಪಿಗೆ ಬರುತ್ತದೆ. ಇದರಲ್ಲಿ ತಾರಕಾಸುರನ ಮಕ್ಕಳಾದ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿಗಳೆಂಬುವರು ತಾರಕಾಸುರನ ಸಂಹಾರವಾದ ಮೇಲೆ ಮಯನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಅಮರತ್ವವನ್ನು ಸಂಪಾದಿಸಿ ತಾರಕಾಸುರನ ಮಕ್ಕಳಿಗೆ ಕಬ್ಬಿಣಪುರ, ಬೆಳ್ಳಿಪುರ, ಸುವರ್ಣಪುರವೆಂಬ ಅಬೇಧ್ಯಪುರಗಳನ್ನು ಕಲ್ಪಿಸಿಕೊಟ್ಟು ದೇವತೆಗಳ ಸಹವಾಸಕ್ಕೆ ಹೋಗಬೇಡಿರೆಂದು ಎಚ್ಚರಿಕೆ ನೀಡಿರುತ್ತಾನೆ. ಕಾಲಕ್ರಮೇಣ ಈ ಮೂವರು ರಾಕ್ಷಸರು ದೇವತೆಗಳ ಮೇಲೆ ಹಾವಳಿಯನ್ನು ಪ್ರಾರಂಭಿಸಿದ್ದರಿಂದ ದೇವತೆಗಳು ಪರಮೇಶ್ವರನ ಮೊರೆಹೊಕ್ಕಾಗ ಶಿವನು ಭೂಮಿಯನ್ನೇ ರಥವನ್ನಾಗಿಸಿ, ನಾಲ್ಕು ವೇದಗಳನ್ನು 4 ಕುದುರೆಗಳನ್ನಾಗಿ

ಮಾಡಿಕೊಂಡು, ಬ್ರಹ್ಮನನ್ನು ಸಾರಥಿ ಮಾಡಿ, ಮಂದರ ಪರ್ವತವನ್ನೇ ಬಿಲ್ಲನ್ನಾಗಿಸಿ, ಆದಿಶೇಷನನ್ನೇ ಹೆದೆಯನ್ನಾಗಿಸಿಕೊಂಡು, ಸಮುದ್ರವನ್ನೇ ಭತ್ತಳಿಕೆಯನ್ನಾಗಿ ಮಾಡಿಕೊಂಡು, ವಿಷ್ಣುವನ್ನೇ ಬಾಣವನ್ನಾಗಿ ಹೂಡಿ, ಪುಷ್ಯ ನಕ್ಷತ್ರ ಯೋಗದಲ್ಲಿ ಮೂರು ಪುರಗಳು ಒಂದು ಕಡೆ ಸೇರಿದ್ದ ಸಮಯ ನೋಡಿ ಒಂದೇ ಬಾಣದಿಂದ ಸುಟ್ಟುಹಾಳು ಮಾಡುತ್ತಾನೆ.

ಶಿಶುಮಾಯಣ ಈ ಕಥೆಯನ್ನು ಬದಲಾವಣೆ ಮಾಡಿ ತನ್ನ ಕೌಶಲ್ಯದಿಂದ ಸ್ವಧರ್ಮಕ್ಕೆ ತಿರುಗಿಸಿ ಹೇಳುತ್ತಾನೆ. ಶೈವಕಥೆ ತ್ರಿಪುರ ದಹನದಲ್ಲಿನಂತೆ ಶಿವ ಏಕೆ ಕಷ್ಟಪಟ್ಟು ಅತ್ಯಂತ ಪ್ರಯಾಸದಿಂದ ಏಕೆ ಸುಡಬೇಕು ? ಅದೂ ಉರಿಗಣ್ಣಿನ ಶಕ್ತಿ ಹೊಂದಿದ ಶಿವ. ಹೀಗಾಗಿ ಲೋಕಪೂಜಿತನಾದ ಹರಿಯು ಅನೇಕ ಪತಿವ್ರತೆಯರ ವ್ರತ ಕೆಡಿಸುವುದು ವಿವೇಕವೂ ಅಲ್ಲ ಮತ್ತು ಮೂರು ಪುರಗಳನ್ನು ನಿರ್ಮಿಸಿದ ಪದ್ಮನಾಭನ ಮುಂದೆ ತನಗೆ ಇದಿರಾಪುರ (ಎದುರಾಗು) ಅರಿಯದೆ ವರಕೊಡುವ ಕ್ರಮ ಶಿಶುಮಾಯಣನಿಗೆ ರುಚಿಸಲಿಲ್ಲ. 14 ಭುವನವೆಲ್ಲ ಪುರುಷೋತ್ತಮನ ಅಂಕೆಯಲ್ಲಿರುವಾಗ ಆ ದೇವರಕ್ಕಸರ ಮೇಲೆ ಸಂಗ್ರಾಮ ಮಾಡುವುದು ಸರಿಯಲ್ಲವೆಂದು ಹೇಳಿ ಪ್ರಸಿದ್ಧ ತ್ರಿಪುರವನ್ನು ಜಾತರೂಪ ಆದೀಶ್ವರನು ಸುಟ್ಟ ಕೌತುಕವನ್ನು ಹೇಳುತ್ತೇನೆಂದು ತನ್ನ ಬದಲಾವಣೆಯ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾನೆ. ಈ ಕಾವ್ಯವನ್ನು ಹಾಡುಗಾರಿಕೆಗೆ ಅನುಕೂಲವಾದ ಸಾಂಗತ್ಯ ರೂಪದ 282 ಪದ್ಯಗಳಲ್ಲಿ ನಿರೂಪಿಸಿದ್ದಾನೆ.

ಜೈನಧರ್ಮಾನುಸಾರವಾಗಿ ಅಲ್ಲಿನ ಹೆಸರಿನ ಪರಿಭಾಷೆಗಳು ಬದಲಾಗುತ್ತವೆ. ಜನನ, ಜರಾ, ಮರಣ ಎಂಬ ಮೂರು ಪುರಗಳನ್ನು ಅವಿನಯವೆಂಬ ವನ, ಜ್ಞಾನಾವರಣೆಯವೆಂಬ ಎಂಟು ದುರ್ಗಗಳು, ಅತಿಕಾಂಕ್ಷೆಯೆಂಬ ಕಂದಕ, ಕೊಲೆಯೆಂಬ ಕೊಟ್ಟಲೆ, ಆಯ್ದು ಸಂಸಾರ ಎಂಬ ಕೋಟೆಯ ಎತ್ತರವಾದ ಗೋಡೆಗಳು, 15 ರೀತಿಯ ಹುಲಿಮುಖಗಳು (ಪ್ರಮಾದಗಳು) ಪರೀಷಹ ಎಂಬ ಕೊತ್ತಳ, 'ಹುಸಿ' ಎಂಬ ಕೋಟೆಯಿಂದ ಆವೃತಗೊಂಡಿದ್ದವು. ಇವನ್ನು ಕಾಯುತ್ತಿದ್ದವರು ಪರಭೀಕರರೆಂಬ ಕಾವಲುಗಾರರು. 'ತಳ' ಎಂಬ ತಳವಾರ ಎಲ್ಲ ಕಾಲದಲ್ಲೂ ತೊಳಲುತ್ತಿದ್ದನು. ಇಂಥ ಪುರವನ್ನು ಭೂಕಾಂತ ಎಂಬ ಮೋಹಾಸುರ ಪಾಲಿಸುತ್ತಿದ್ದ. ಅವನ ಪ್ರಾಣವಲ್ಲಭೆ ರೂಪದಲ್ಲಿ ಇಳಾತಳವನ್ನೇ ಮರುಳುಗೊಳಿಸುವ ಮಾಯೆ. ಈ ಇಬ್ಬರಿಗೆ ನಾರಕ, ನರ, ಸುರ, ತಿರಿಯಂಕ ಎಂಬ ನಾಲ್ಕು ಜನ ಮಕ್ಕಳು. ಇವರಲ್ಲಿ ಒಬ್ಬನಾದ ನಾರಕ - ನರಕಾಸುರನ ರೀತಿಯ ಕ್ರೂರ ರಾಕ್ಷಸ. ಇವನಿಗೆ ಕ್ರೋಧ, ಲೋಭ, ಮಾಯ ಮೊದಲಾಗಿ 4 ಜನ ಮಂತ್ರಿಗಳಿರುತ್ತಾರೆ. ವ್ಯಸನಿಗಳೇ ಭಟರು ಮತ್ತು ಅನೇಕ ಕರ್ಮಗಳು ಅವನ ಸುತ್ತ ಬಳಸಿತ್ತು. ಈ ರಾಕ್ಷಸನು 14 ಲೋಕದ ಗಂಡ ಎಂಬ

ಬಿರುದು ಹೊಂದಿದ್ದ. ಇವನು ಭೂಲೋಕದವರಿಗೆ ತೊಂದರೆ ಕೊಡುತ್ತಿರುತ್ತಾನೆ. ಅವರ ಸಹಾಯಕ್ಕೆ ಬಂದ ಇಂದ್ರನನ್ನೇ ದಿಕ್ಕುಗೆಡಿಸುತ್ತಾನೆ. ಈಶ್ವರನನ್ನೇ ಹುಲ್ಲು ಹಿಡಿಸುತ್ತಾನೆ, ಯಮನನ್ನು ಹೇಡಿಯನ್ನಾಗಿ ಮಾಡುತ್ತಾನೆ, ರಾಕ್ಷಸರನ್ನೇ ಆಳುಗಳನ್ನಾಗಿಸಿಕೊಂಡಿದ್ದಲ್ಲದೆ, ವರುಣ, ವಾಯುವ್ಯ, ಕುಬೇರ ಮುಂತಾದ ಗ್ರಹಗಳನ್ನೆಲ್ಲ ತಾಪಗೊಳಿಸಿರುತ್ತಾನೆ. ಇಂಥ ಸನ್ನಿವೇಶದಲ್ಲಿ ಕೈಲಾಸಾದ್ರಿಯಲ್ಲಿ ಆದಿಜಿನೋತ್ತಮ ಅಮರನಿಕಾಯನಿದ್ದು ಆತನ ಮನೆ ರಜತಾಚಲದ ಮಧ್ಯೆ ಕಂಗೊಳಿಸುತ್ತಿತ್ತು. ವೃಷಭನಾಥನು ಅಥವಾ ಆದಿಜಿನಮಾಲಯವೂ ಸೇರಿ 72 ಜಿನಾಲಯಗಳನ್ನು ನಿರ್ಮಿಸಿ ರಾಜ್ಯಭಾರ ಮಾಡುತ್ತಿರುತ್ತಾನೆ. ಆಗ ಮೋಹಾಸುರನ ಉಪಟಳವನ್ನು ಅಮರರಾವವರು ಬಂದು ತಿಳಿಸುತ್ತಾರೆ. ಅವರ ಮೊರೆಯನ್ನು ಕೇಳಿ ಮೋಹಾಸುರನನ್ನು ಮಣಿಸಲು ದಿಗಂಬರ ರೂಪವನ್ನು ತಾಳಿ ಪದ್ಮಾಸನವೆಂಬ ಅಚ್ಚು, ಆರಾಧನೆಯೆಂಬ ಚಕ್ರ, ಸಮ್ಯಕ್ತ್ವವೆಂಬ ಕೀಲುಗಳು (ಜ್ಞಾನ, ನಡತೆ, ಶೀಲ) 84 ಲಕ್ಷಗುಣಗಳ ಹಗ್ಗ, ಧ್ಯಾನವೆಂಬ ನೊಗದ ರಥಕ್ಕೆ ಸದ್ವ್ರತವೆಂಬ ಕುದುರೆಗಳನ್ನು ಹೂಡಿ, ದಶಧರ್ಮವೆಂಬ ಧನಸ್ಸು, 'ಸ್ಮೃತಿ' ಎಂಬ ಹೊಳೆಯುವ ಹೆದೆ (ಬಿಲ್ಲು) ಅಸಮವೆಂಬ ಪಂಚಾಸ್ತ್ರಗಳು, 'ಕ್ಷಮೆ' ಎಂಬ ಖಡ್ಗವನ್ನು ಸಂಯಮ ಎಂಬ ಬೇಟಕ (ಗುರಾಣಿ) 18000 ಗುಣಶೀಲಗಳ ಸೈನ್ಯ, ಭೂತದಯಾಪರವೆಂಬ ಪ್ರಸಿದ್ಧ ಧರ್ಮಧ್ವಜದ ಸಮೇತನಾಗಿ ಆದಿನಾಥನು ಪುರದ ಉಪವನದಲ್ಲಿ ಬೀಡುಬಿಟ್ಟು ಮೋಹಾಸುರನೊಡನೆ ತಂತ್ರ ಸಮಾಲೋಚಿಸಿದರೂ ಪ್ರಯೋಜನವಾಗದಿದ್ದಾಗ ಆದಿನಾಥನು ಪುರದ ಉಪವನದಲ್ಲಿ ವಾದ್ಯ ಶಬ್ದ ಮಾಡಲು ಕಪ್ಪಾದ ಹೊಗೆಸುತ್ತಿ ಪಟ್ಟಣವನ್ನೆಲ್ಲ ಕಲಕುತ್ತದೆ. ಇದನ್ನು ಕಂಡ ಮೋಹಾಸುರ ದಳಪತಿಯನ್ನು ವಿಚಾರಿಸಲು ಅದಕ್ಕವನು ಇಂದು ನಂದನವನ್ನು ತಾಪಸಿಯೊಬ್ಬನು ಸುಟ್ಟನೆಂದು ತಿಳಿಸುತ್ತಾನೆ. ಆಗ ಮೋಹಾಸುರ ರಣಭೇರಿ ಹೊಡೆಸಿ ಸೈನ್ಯ ಸಜ್ಜುಗೊಳಿಸಿ ಪ್ರತಿರೋಧ ಹೂಡಿದಾಗ ಆದೀಶ್ವರನೇ ಬಂದಿರುವನು ಬೇಡವೆಂದು ಹೇಳಿದರೂ ಕೇಳದೆ ಯುದ್ಧಹೂಡಲು ಭೂಮಿಗೆ ಬರುತ್ತಾನೆ. ಇತ್ತ ಮುಕ್ಕಣ್ಣನ ಪರಿವಾರ ತ್ರಿಪುರಕ್ಕೆ ಬಂದು 1800 ಶೀಲಭಟರು ಪ್ರತಿಭಟಿಸಿದ ವೀರಜೆಟ್ಟಿಗಳನ್ನು ಸೀಳಿ ಯಮಪುರಿಗಟ್ಟುವರು. ಮೋಹಾಸುರ ತನ್ನ ಸಮಸ್ತ ಸೈನ್ಯ ಮಕ್ಕಳು ಪರಿವಾರವೆಲ್ಲ ಹತರಾದರೆಂಬ ಸುದ್ದಿ ತಿಳಿದು ದುರ್ಬಲನಾಗಿ ತ್ರಿಪುರದ ಹಿಂಬಾಗಿಲಲ್ಲಿ ಕೊತ್ತಳದ ಮೇಲೆ ಹತ್ತುವನು. ಆಗ ಆದೀಶ್ವರ ರಥವನ್ನೇರಿ ಶೀಘ್ರಗತಿಯಿಂದ ಪುರದ ಬಾಗಿಲಿಗೆ ಬಂದು 'ಅಷ್ಟಮನೆನಿಪಟ್ಟಳೆಯೊಳಗೆ' ಇದ್ದ ಮೋಹಾಸುರನನ್ನು ನೋಡಿ ಪರಮೇಶ್ವರ ದುರುಳನ ದಿಟ್ಟತನಕ್ಕೆ ಬೆರಗಾಗಿ ನಿಟ್ಟಿಸಿದಾಗ ಆಕಾಶದಲ್ಲಿ ಮೂರು ಪುರಗಳು ಒಂದುಗೂಡದೆ ತಿರುಗುತ್ತವೆ. ದಶಧರ್ಮವೆಂಬ ಬಿಲ್ಲಿನಿಂದ ಅಪರಾಜಿತವೆಂಬ ಬಾಣಬಿಟ್ಟು ತ್ರಿಪುರಕ್ಕೆ ಹೊಡೆದಾಗ ಮೋಹಾಸುರ ಅಪಘನವೆನ್ನುವಂತೆ ಬೀಳುತ್ತಾನೆ.

ಆಗ ಅತಿಕಾಂಕ್ಷೆಯೆಂಬ ಕಂದರ ಪಾತಾಳ ಸೇರಲು ಅದನ್ನು ನಿಷ್ಕಾಂಕ್ಷೆಯೆಂಬ ಧೂಳಿನಿಂದ ಹೂಳುತ್ತಾನೆ. 'ಕೊಲೆ' ಎಂಬ ಕೋಟೆ ಮೂರು ಪುರವನ್ನು ಆವರಿಸಿದಾಗ 'ಹಿಂಸೆ' ಎನ್ನುವ ಹಾರೆಯಿಂದ ಬುಡಮೇಲು ಮಾಡುತ್ತಾನೆ. ಆಗ ಮೋಹಾಸುರ ಭಯದಿಂದ ಮುಂಡದಲ್ಲಿಯೇ ಹಬ್ಬಿ ಬರುವಾಗ ನೋಡಿದ ಭಟರು ಎಡಗೈ ಕಟ್ಟಿ ಆದೀಶ್ವರನ ಪಾದಗಳ ಮೇಲೆ ತಂದು ಕೆಡವುತ್ತಾರೆ. ಹೀಗೆ ಪಾದಗಳಿಗೆರಗಿದ ಮೋಹಾಸುರನಿಗೆ ಅಭಯವನ್ನಿತ್ತು, ಸೇವೆ (ಆಳುಬೆಸನು) ಮಾಡಿಕೊಂಡಿರುವಂತೆ ಹೇಳಿ ಕಳುಹಿಸುತ್ತಾನೆ. ಆಗ ವೃಷಭಾಂಕನ ನೊಸಲೊಳಗೆ ಕೇವಲ ಬೋಧವೆಂಬ ಅಸಮಲೋಚನ ಹುಟ್ಟುತ್ತದೆ. ಅದರಿಂದ ಇನ್ನು ಮೂರು ಪುರಗಳು ಹುಟ್ಟದಂತೆ ಸುಟ್ಟನು. ಈ ಸಮಯಕ್ಕೆ ಹೂಮಳೆಗರೆಯುತ್ತದೆ. ತ್ರಿಭುವನಕೆ ಈತನೆ ಪ್ರಭುವೆಂದು ಅಭಿಷೇಕ, ಪೂಜೆ, ದೇವದುಂದುಭಿಗಳು ಮೊಳಗುತ್ತವೆ. ಈ ರೀತಿ ಪುರು ಪರಮೇಶ್ವರನು ತ್ರಿಪುರವನ್ನು ಸುಟ್ಟು ಮೂರು ಜಗತ್ತಿಗೆ ಪತಿಯಾಗಿ ಮೋಕ್ಷ ಪಡೆದ. ಇದನ್ನು ಕೇಳಿದವರಿಗೆ ಪಾತಕವಿಲ್ಲ. ಅವರು ಊರ್ಧ್ವಮುಖಿಗಳಾಗುತ್ತಾರೆಂಬ ಸಂದೇಶವನ್ನು ಕಾವ್ಯ ಕೊಡುತ್ತದೆ.

ಹೀಗೆ ಜೈನಧರ್ಮ ಸೂತ್ರಕ್ಕನುಸಾರವಾಗಿ ಕನ್ನಡ ಕಾವ್ಯಗಳನ್ನು ಜೈನಕಾವ್ಯವಾಗಿ ಪುನರ್ರಚಿಸುವಲ್ಲಿ ಶಿಶುಮಾಯಣನೂ ಒಬ್ಬನಾಗಿದ್ದಾನೆ. ನಾಗಚಂದ್ರನ ರಾಮಚಂದ್ರ ಚರಿತ ಪುರಾಣ, ರತ್ನಾಕರನ ಭರತೇಶ ವೈಭವ ಇವುಗಳಲ್ಲೂ ಜೈನ ಸಿದ್ಧಾಂತಗಳನ್ನು ಹುದುಗಿಸಿರುವ ಮತ್ತು ಪ್ರಚುರಪಡಿಸಲೆತ್ನಿಸಿರುವ ಪ್ರಯತ್ನಗಳು ಎದ್ದು ತೋರುತ್ತದೆ. ಸಾಂಗತ್ಯ ಕೃತಿಗಳ ಕಾಲಕ್ಕಾಗಲೇ ಜೈನಧರ್ಮ ಹಿಂದೆ ಸರಿಯುತ್ತಿದ್ದ ಕಾಲಘಟ್ಟದಲ್ಲಿ ಜನಪ್ರಿಯವಾದ ಕಥಾನಕಗಳು, ಕಾವ್ಯಗಳು ಪರಿಷ್ಕಾರ ರೂಪದಲ್ಲಿ ಜೈನಧರ್ಮ ಪ್ರಚುರತೆಗೆ ಬಳಕೆಯಾಗಿರುವುದನ್ನು ಕಾಣಬಹುದು. ಶಿಶುಮಾಯಣನು ಅಂಥ ಪ್ರಯತ್ನವನ್ನು ತ್ರಿಪುರದಹನ ಸಾಂಗತ್ಯದಲ್ಲಿ ಮಾಡಿದ್ದಾನೆ. ತನ್ನ ಕಾವ್ಯಕ್ಕೆ ಹೊಸ ದೃಷ್ಟಿಯನ್ನು ನೀಡಿರುವುದು ಮೆಚ್ಚತಕ್ಕ ವಿಷಯವೇ ಆಗಿದೆ. ಪ್ರಜ್ಞಾವಂತ ಕವಿಯೊಬ್ಬ ಮಾಡಬಹುದಾದ ಕೈಚಳಕವನ್ನು ಮೆರೆದಿದ್ದಾನೆ. ಜೈನತತ್ವವನ್ನು ಸಮರ್ಥ ರೀತಿಯಲ್ಲಿ ಅಳವಡಿಸಿದ್ದಾನೆ. ಧಾರ್ಮಿಕ ಕಾವ್ಯಗಳಾಗಿ ಪ್ರಚಾರ ಪಡೆಯಬಹುದಾದರೂ ಇಂಥ ಕಾವ್ಯಗಳು ಶುದ್ಧ ಕಾವ್ಯಗಳಾಗಿ ಯಶಸ್ವಿಗೊಳ್ಳುವುದಕ್ಕೆ ಸಾಧ್ಯವಾಗಲಾರದು.

ಈ ದೃಷ್ಟಿಯಿಂದ ಶಿಶುಮಾಯಣ ಮಹಾಕವಿ ಅಲ್ಲದಿದ್ದರೂ ಜನಸಾಮಾನ್ಯರ ಕವಿ. ಸಾಂಗತ್ಯದಲ್ಲಿ ಇಂಥ ಪ್ರಸಂಗಗಳನ್ನು ಹಾಡಿದಾಗ ಮತ್ತಷ್ಟು ರಸವತ್ತಾಗಿರುತ್ತವೆ. ಮೂಲ ಕಥೆಯನ್ನು ಉದ್ದೇಶಪೂರ್ವಕವಾಗಿ ಬದಲಿಸಿ ಹೇಳಿದ್ದರೂ ಅದನು ನಿರೂಪಿಸುವ ವಿಧಾನದಲ್ಲಿ ತೋರಿರುವ ವಿನಯ ಕವಿಗಿರಬೇಕಾದ ಸಂಯಮವನ್ನು ಸೂಚಿಸುತ್ತದೆ. ಧರ್ಮಸಂಗತಿಗಳನ್ನು ಜನಮನಕ್ಕೆ

ತಲುಪಿಸುವಲ್ಲಿ ಈ ಕ್ರಮಗಳು ಯಶಸ್ವಿಯೂ ಆಗುತ್ತವೆ.

ಉದಾ. ಪೇಳಿದೆನೀ ಕೃತಿಯನು ಬಲ್ಲಂದದಿ ಕೇಳುವ ರಸಿಕಕೋವಿದರು
ಕಾಳು ಮಾಡಿ ನುಡಿಯದೆ ತಪ್ಪತಿದ್ದಿ ಲಾಲಿಸುವುದು

ಎನ್ನುವಲ್ಲಿ ಶ್ರೋತೃ ವರ್ಗವನ್ನುದ್ದೇಶಿಸಿ ಹೇಳುವ ವಿನಯ ತನ್ನ ಕೃತಿ ಸಾಕಾರಗೊಳ್ಳಬೇಕಾದ ಕ್ರಮ ಇವುಗಳನ್ನು ಯಶಸ್ವಿಯಾಗಿ ನಿರೂಪಿಸಿದ್ದಾನೆ. ಶೈವ ಸಂಪ್ರದಾಯದ ಕಥೆಗೆ ಜೈನಧರ್ಮಾನುಸಾರವಾದ ಒಂದು ಹೊಸದೃಷ್ಟಿ ವಿಶಿಷ್ಟವಾದುದಾಗಿದೆ.

ಶಿಶುಮಾಯಣನ ಮತ್ತೊಂದು ಕೃತಿ 'ಅಂಜನಾ ಚರಿತೆ' ಆಂಜನೇಯನು ಜೈನ ಪುರಾಣಗಳಲ್ಲಿ ಬರುವ 24 ಜನ ಕಾಮದೇವರುಗಳಲ್ಲಿ ಹನುಮಂತನೂ (ಅಣುವ) ಒಬ್ಬ. ಅವನ ತಾಯಿ ಅಂಜನಾ ದೇವಿಯ ಚರಿತ್ರೆಯೇ ಅಂಜನಾ ಚರಿತೆಯ ಕಥೆಯಾಗಿದ್ದು ಅಲ್ಲಿನ ವರ್ಣನೆ ತುಂಬಾ ಸೊಗಸಾಗಿ ಮೂಡಿ ಬಂದಿದೆ. ಅಂಜನೆಯೋ ಕಾವ್ಯದ ಕೇಂದ್ರ ಪಾತ್ರ. ಆಕೆಯ ಬದುಕಿನ ಏರಿಳಿತಗಳನ್ನು ಕಷ್ಟದ ಪರೀಕ್ಷೆಯ ದಿನಗಳಲ್ಲಿ ಸಹನಶೀಲತೆಯನ್ನು ಕವಿ ಮನಮುಟ್ಟುವಂತೆ ಚಿತ್ರಿಸಿದ್ದಾನೆ. ಈ ಕೃತಿ ತರಣಿ ಶಶಾಂಕರಿಪ್ಪನ್ನೆಗಂ ಅನೇಕ ಕಾಲ ಮರೆಯಲೆಂದೂ, ಮಳೆಯಿನಿಸುಳಿಯದೆ ಕೊಳಲಿ ಸಕಲವಸ್ತು।ಬೆಳೆಯಲಿಳಾಕಳದೊಳಗೆ ಸುಳಿವ ಮಹಾಮೃತ್ಯು ಮೊದಲಾದ ಕಂಟಕ।ವಳಿದಬಿಳರು ಸುಖಮಿರಲಿ। ಎಂದು ಶಿಶುಮಾಯಣ ಕಾವ್ಯದ ಕೊನೆಗೆ ಆಶಯ ವ್ಯಕ್ತಪಡಿಸಿದ್ದಾನೆ. ಹನುಮಂತನು ಪಂಚಾಣುವ್ರತ ಕೈಗೊಂಡು ತಪಸ್ಸಿನಿಂದ ಪಂಚೇಂದ್ರಿಯಗೆಳನ್ನು ನಿಗ್ರಹಿಸಿ ಮುಕ್ತಿಗೆ ಪಾತ್ರನಾಗುವುದರೊಂದಿಗೆ ಕಾವ್ಯ ಮುಕ್ತಾಯವಾಗುತ್ತದೆ. ಅಂಜನೆಯಂತೆ, ಪವನಾಜಯ, ಹನುಮಂತ ಮೊದಲಾದ ಪ್ರಮುಖ ಪಾತ್ರಗಳು ಹೆಚ್ಚು ಲವಲವಿಕೆಯಿಂದ ಚಿತ್ರಿತವಾಗಿವೆ. ಇಂಥ ಕಾರಣಗಳಿಗಾಗಿಯೇ ಶಿಶುಮಾಯಣ ತನ್ನ ವಿನಯವಂತಿಕೆಯ ನಡುವೆಯೂ ಆತ್ಮಪ್ರತ್ಯಯವನ್ನು ಹೊಂದಲು ಸಾಧ್ಯವಾಗಿದೆ.

**ಚಾಮರಸ**

ಸುಮಾರು ಕ್ರಿ.ಶ. 1430 ರಲ್ಲಿ ಬದ್ಧ ವೀರಶೈವ ಕವಿ ಚಾಮರಸ. ಇವನು 'ಪ್ರಭುಲಿಂಗಲೀಲೆ' ಎಂಬ ಗ್ರಂಥವನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದಾನೆ. ಈತನು ಈ ಕೃತಿ ಬರೆದನೆಂಬ ವಿಷಯ ತಿಳಿದದ್ದು ಅದೃಶ್ಯ ಕವಿ (1580) ಹಾಗೂ ಸಿದ್ಧನಂಜೇಶ (1650) ಎನ್ನುವವರಿಂದ. ಅಲ್ಲಮನ ಜೀವನ ವಿವರಗಳ ಅಸ್ಪಷ್ಟತೆಯಂತೆಯೇ ಚಾಮರಸನ ಜೀವನ ವಿವರಗಳೂ ಅಸ್ಪಷ್ಟ. ಕೆಲವು ವಿದ್ವಾಂಸರು ಪ್ರೌಢದೇವರಾಯನ ಕಾಲದ ವಿರಕ್ತರಲ್ಲಿ ಅವನೂ ಒಬ್ಬನಿರಬಹುದೆಂದು

ಊಹಿಸುತ್ತಾರೆ. ರಂ.ಶ್ರೀ. ಮುಗಳಿ ಯವರು 'ಚಾಮರಸನ ಕೃತಿಯನ್ನು ಗಮನಿಸಿದರೆ ಜ್ಞಾನ ವೈರಾಗ್ಯಗಳ ಮೂರ್ತಿಯೂ ಸ್ವತಂತ್ರ ಸಿದ್ಧಪುರುಷನೂ ಆದ ಅಲ್ಲಮನ ಜೀವಾಳವನ್ನು ಅರಿತು ಬಿತ್ತರಿಸುವುದಕ್ಕೆ ಬೇಕಾದ ವಿರಕ್ತಿ - ಸ್ವತಂತ್ರ ದೃಷ್ಟಿಗಳು ಅವನಲ್ಲಿರಬೇಕೆಂದು' ಊಹಿಸುತ್ತಾರೆ.

ಪ್ರಭುಲಿಂಗಲೀಲೆ 12ನೇ ಶತಮಾನದಲ್ಲಿದ್ದ ಅಲ್ಲಮನ ಜೀವನ, ಸಾಧನೆ, ಸಿದ್ದಿ ಇವುಗಳ ಚಿತ್ರಣವನ್ನು ಕಾವ್ಯದ ವಸ್ತುವಾಗಿ ಹೊಂದಿದೆ. ಅಲ್ಲದೆ ಈ ಕಾವ್ಯವು ತೆಲುಗು, ತಮಿಳು, ಮರಾಠಿ ಮತ್ತು ಸಂಸ್ಕೃತ ಭಾಷೆಗಳಿಗೆ ಭಾಷಾಂತರವಾಗಿರುವುದನ್ನು ಕಾಣಬಹುದು. ಇದು ಚಾಮರಸನ ಕಾವ್ಯ ಶಕ್ತಿ ಮತ್ತು ಜನಪ್ರಿಯತೆಗೆ ಧ್ಯೋತಕ. ಇಲ್ಲಿ ಕವಿಯ ಶಬ್ದ ಸಂಪತ್ತು, ಕಲ್ಪನಾ ಶಕ್ತಿ ಸಹಜವಾಗಿ ಮೂಡಿ ಬಂದಿರುವುದನ್ನು ಗಮನಿಸಬಹುದು. ಅಲ್ಲಮಪ್ರಭುವಿನ ಚರಿತ್ರೆಯನ್ನು ಮೊಟ್ಟ ಮೊದಲು ಬರೆದವನು ಹರಿಹರ. ಅವನ ಪ್ರಭು ದೇವರ ರಗಳೆ ಮತ್ತು ಚಾಮರಸನ 'ಪ್ರಭುಲಿಂಗಲೀಲೆ' ಇವೆರಡರ ಕಥಾನಕ ಕ್ರಮದಲ್ಲಿ ಅನೇಕ ವ್ಯತ್ಯಾಸಗಳಿವೆ. ಚಾಮರಸನ ಸನ್ನಿವೇಶ ರಚನೆ, ಪಾತ್ರ ಚಿತ್ರಣದಲ್ಲಿ ಒಮ್ಮೊಮ್ಮೆ ಮಹಾಕವಿಯಲ್ಲಿರಬಹುದಾದ ಕಾವ್ಯ ಪ್ರತಿಭೆಯನ್ನು ಕಾಣಿಸಿದ್ದಾರೆ. ಕಾವ್ಯಧರ್ಮ ಹಾಗೂ ಧರ್ಮ ಎರಡೂ ಕಾವ್ಯದಲ್ಲಿ ಸಾಮರಸ್ಯವಾಗಿ ಮೂಡಿ ಬಂದಿವೆ. ಮಹಾತ್ಮರ ಜೀವನ ಚರಿತ್ರೆಯನ್ನು ಕಾವ್ಯಾತ್ಮಕವಾಗಿ ಹೇಗೆ ಬರೆಯಬೇಕೆಂಬುದನ್ನು ಪ್ರಭುಲಿಂಗಲೀಲೆಯಲ್ಲಿ ಕಾಣಬಹುದು.

ಹರಿಹರನ ಅಲ್ಲಮ ಕಾಮಲತೆಗೆ ಮರುಳಾಗಿ ವಿರಹದಿಂದ ಬೆಂದು ವೈರಾಗ್ಯ ಪಡೆಯುವನು. ಚಾಮರಸನ ಅಲ್ಲಮ ಮಾಯೆಯನ್ನು ಮರುಳು ಮಾಡಿ ಅವಳ ಕೈಗೆ ಸಿಗದೆ ವೈರಾಗ್ಯ ಮೆರೆಯುವನು. ಹರಿಹರನಲ್ಲಿ ಅಲ್ಲಮ ಕಲ್ಯಾಣಕ್ಕೆ ಹೋದ ಸಂದರ್ಭ ಬರುವುದಿಲ್ಲ. ಮುಕ್ತಾಯಕ್ಕ, ಅಕ್ಕಮಹಾದೇವಿ ಮುಂತಾದವರ ಸನ್ನಿವೇಶಗಳಿಲ್ಲ. ರಂ.ಶ್ರೀ. ಮುಗಳಿಯವರು ''ಹರಿಹರನ ರಗಳೆ ಒಂದು ಬಿರುಗಾಳಿಯ ವೇಗದಿಂದ ಮುಂದುವರೆದು ಮುಗಿಯುತ್ತದೆ. ಚಾಮರಸನ ಲೀಲೆ ಸಲಿಲವಾಗಿ ತುಂಬಿದ ತೊರೆಯಂತೆ ಸಾಗುತ್ತದೆ'' ಎನ್ನುತ್ತಾರೆ. 'ಪ್ರಭುಲಿಂಗಲೀಲೆ' ಎಂಬ ಹೆಸರೇ ಸೂಚಿಸುವಂತೆ ಅಲ್ಲಮಪ್ರಭುವಿನ ರೂಪದಲ್ಲಿ ಲಿಂಗನು ಮಾಡಿದ ಲೀಲೆಯನ್ನು ಚಾಮರಸನು ಬಣ್ಣಿಸಲು ಪ್ರಯತ್ನಪಟ್ಟಂತಿದೆ. ಅದರಂತೆಯೇ ಅವನು ಅಹಂಕಾರವನ್ನು ಬದಿಗೊತ್ತಿ ವಿನಯವನ್ನು ಮೆರೆದಿದ್ದಾನೆ. ಚಾಮರಸ ತನ್ನ ಕಾವ್ಯದಲ್ಲಿ ಹೇಳುವಂತೆ ''ವಿವರಿಸುವಡೀ ಲೀಲೆಯನು ಹೇಳುವನು ದಿಟ ನಾನಲ್ಲ........ ಶಿವನ ನಾಟಕದ ಮಹಿಮೆಯನು ಶಿವನೇ ಬಲ್ಲನು'' ಎಂದು ಹೇಳುತ್ತಾ ಕಾವ್ಯ ಮುಂದುವರೆದಂತೆ ಕಥೆಯ ಮಹತ್ವ ಹಾಗೂ ನಾಯಕನ ಮಹತ್ವವನ್ನು ಕುರಿತು ಇದು ''ಕಾಳಗದ ಕತೆಯಲ್ಲ, ಸತ್ತವರ ಕತೆಯಲ್ಲ'' ಎಂಬ ವಿವರಣೆ ನೀಡುತ್ತಾನೆ.

ಶಿವನು ಪಾರ್ವತಿಗೆ ಅಲ್ಲಮನನ್ನು ಪರಿಚಯ ಮಾಡಿಕೊಡುತ್ತಾ ಅಲ್ಲಮನ ಅಸಾಮಾನ್ಯ ವ್ಯಕ್ತಿತ್ವವನ್ನು ತಿಳಿಸುತ್ತಾನೆ. ಇದು ಅನೇಕ ಸಂದರ್ಭಗಳಲ್ಲಿ ಸತ್ಯವಾಗುವುದನ್ನು ಗಮನಿಸಬಹುದು. ಚಾಮರಸನು ಅಲ್ಲಮನನ್ನು ಪರಬ್ರಹ್ಮ, ಸಿದ್ದಪುರುಷನ ರೂಪದಲ್ಲಿರುವ ಪರಮ ಜ್ಞಾನಿ ಎಂಬುದಾಗಿ ಚಿತ್ರಿಸಿದ್ದಾರೆ. ಅವನು ಮಾಯೆಯ ಸನ್ನಿವೇಶದಿಂದ ಹಿಡಿದು ಕೊನೆಯ ದೃಶ್ಯದವರೆಗೆ ಅಲ್ಲಮನು ತನ್ನನ್ನು ಇದಿರಿಸಿದ ಸನ್ನಿವೇಶಗಳು, ಕಾಡಿದ ವೈರಾಗ್ಯ, ನಿರ್ಲಿಪ್ತತೆ, ಸಮಯಾತೀತತೆ, ಆದರ್ಶ ಗುರುವಿನ ಮಾರ್ಗದರ್ಶನ, ನಿಷ್ಟುರತೆಯಿಂದ ಬೆರೆತ ಪ್ರೇಮಲತೆಯ ವಿಷಯ ಮೊದಲಾದವುಗಳನ್ನು ಸುಂದರವಾಗಿ ಒಡಮೂಡಿಸಿದ್ದಾನೆ. ನರ್ತಿಸುತ್ತಿರುವ ಮಾಯೆಯ ಜೊತೆಗೆ ಮದ್ದಳೆಯನ್ನು ಬಾರಿಸುವ ಅಲ್ಲಮನನ್ನು ಚಾಮರಸ ಈ ರೀತಿ ವರ್ಣಿಸುತ್ತಾನೆ.

ಲಲಿತನಿರ್ಮಳ ಚಂದ್ರಕಾಂತದ
ಶಿಲೆಯ ಹತ್ತಿರ ಲತೆಯ ದಾವಾ
ನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ ।
ತಳಿತ ಕಾಮಜ್ವಾಲೆಯಲ್ಲಮ
ನೊಳಗೆ ಪ್ರತಿಬಿಂಬಿಸಿದುದಾತನೆ ಕಾಮಿಯೆಂಬಂತೆ (5-141)

ಎನ್ನುವ ಹೋಲಿಕೆ ಅತ್ಯಂತ ಸೂಕ್ಷ್ಮವೂ, ಸಮರ್ಪಕವೂ ಆದುದು ಎನ್ನಬಹುದು. ಅವನ ವ್ಯಕ್ತಿತ್ವ ದರ್ಶನ, ಅಸಾಧಾರಣ ಪ್ರತಿಭೆಗಳಿಗೆ ಈ ಪದ್ಯ ಉತ್ತಮ ನಿದರ್ಶನವಾಗಿದೆ.

ಸಿದ್ಧರಾಮ, ಬಸವೇಶ್ವರ ಮೊದಲಾದ ಶರಣರು ಎತ್ತರದ ನೆಲೆಯನ್ನು ಮುಟ್ಟಿದವರಾದರೂ ಅಲ್ಲಮನ ಮುಂದೆ ನಮ್ರರಾಗುತ್ತಾರೆ. ಅವನಿಂದ ಜರೆಯಿಸಿಕೊಂಡು ಅರಿವು ಪಡೆಯುತ್ತಾರೆ. ಸೂಕ್ಷ್ಮ ಪರಿಜ್ಞಾನದಿಂದ ಅಲ್ಲಮನು ಅವರನ್ನು ಜರೆಯುತ್ತಾನೆ. ದಾರಿ ತೋರುತ್ತಾನೆ ಇತ್ಯಾದಿ ಹೀಗೆ ಅಲ್ಲಮನ ಮೂರ್ತಿ ಸ್ವರೂಪವನ್ನು ಚಾಮರಸನು ಸಹಜವಾಗಿ ಸಂಪೂರ್ಣವಾಗಿ ಚಿತ್ರಿಸಿದ್ದಾನೆ.

ಪ್ರಭುಲಿಂಗ ಲೀಲೆಯನ್ನು ಕಾವ್ಯದೃಷ್ಟಿಯಿಂದ ವಿಶ್ಲೇಷಿಸಿದರೆ ಅವನ ಕಲ್ಪನಾ ಸಂಪತ್ತು ಮತ್ತು ಶಬ್ದಶಕ್ತಿ ಸಹಜ ವಿಲಾಸ ಹೆಜ್ಜೆ ಹೆಜ್ಜೆಗೆ ಗೋಚರವಾಗುತ್ತದೆ. ಮಾಯೆಯ ಸೌಂದರ್ಯ ವರ್ಣನೆ, ಶೃಂಗಾರ ವರ್ಣನೆ ಮುಂತಾದವು ಇದಕ್ಕೆ ಉತ್ತಮ ನಿದರ್ಶನ. ಸರಳ ಮತ್ತು ಅಷ್ಟೇ ಪರಿಣಾಮಾತ್ಮಕ ತಿಳಿಗನ್ನಡ ಮಾತುಗಳನ್ನು ಸಹ ಇಲ್ಲಿ ಕಾಣಬಹುದು. ಉದಾ. 'ಅಣ್ಣ ಕೇಳುದಕದಲಿ ಮುಳುಗಿದ ಸುಣ್ಣಕಲ್ಲಂತಾಗಿ ಕುದಿವುತ ಬನ್ನ ಬಟ್ಟಳು ಮಾಯೆ ಕಾಣುತ ನಿನ್ನ ಬೇಟದಲಿ' ಎನ್ನುವ ಮಾತನ್ನು ಗಮನಿಸಬಹುದು.

ಚಾಮರಸನ ಶೈಲಿಯಲ್ಲಿ ಆಡಂಬರವಿಲ್ಲ, ಅತಿ ಅಲಂಕಾರವಿಲ್ಲ, ಸಂಸ್ಕೃತದ ಅತಿರೇಕವಿಲ್ಲ, ಆದಕ್ಕಾಗಿಯೆ ಭಾಮಿನಿ ಷಟ್ಪದಿಯ ನಿರರ್ಗಳವಾದ ಬಳಸುವಿಕೆಯಲ್ಲಿ ಮತ್ತು ರೂಪಕ ಸಂಪತ್ತಿನಲ್ಲಿ ಚಾಮರಸ ಮತ್ತು ಕುಮಾರವ್ಯಾಸ ಒಂದೇ ಎನ್ನುತ್ತಾರೆ. ಇಷ್ಟೆಲ್ಲಾ ಕಾವ್ಯ ಗುಣವಿದ್ದರೂ ಕವಿಯ ಗುರಿ ಕೇವಲ ಕಥಾ ನಿರೂಪಣೆಯಲ್ಲ. ಅಲ್ಪ ಸುಖಕ್ಕೆ ಸೋಲದೆ, ಕಬ್ಬಿನೊಳು ರಸವ ನೆರಸವಿವಗಜದಂತೆ ಭಕ್ತಿಯ ತೆರನ ತಿಳಿದಾಚರಿಸಬೇಕೆಂದರಿವವರ ಲಾಲಿಸುವುದೀ ಪ್ರಭುಲಿಂಗ ಲೀಲೆಯನು ಎಂದಿದ್ದಾನೆ. ಆದ್ದರಿಂದಲೇ ವಿಮರ್ಶಕರು ಕನ್ನಡದ ಶ್ರೇಷ್ಠ ಕವಿಗಳಲ್ಲಿ ಚಾಮರಸ ಒಬ್ಬನು. ಪ್ರಭುಲಿಂಗಲೀಲೆ ಶ್ರೇಷ್ಠ ಚರಿತ್ರ ಕಾವ್ಯವೆಂದೂ ಬಣ್ಣಿಸಿದ್ದಾರೆ.

## ಸಂಚಿಯ ಹೊನ್ನಮ್ಮ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸ್ಥಾನ ಪಡೆದ ಕೆಲವೇ ಮಹಿಳಾ ಬರಹಗಾರರಲ್ಲಿ ಹೊನ್ನಮ್ಮ ಒಬ್ಬರು. ಕನ್ನಡ ಸಾಹಿತ್ಯಕ್ಕೆ ಹೊಸಗನ್ನಡದ ಆರಂಭದ ಕಾಲಘಟ್ಟದಲ್ಲಿ ಅತಿಶಯವಾದ ಪ್ರೋತ್ಸಾಹವನ್ನು ನೀಡಿದ ಮೈಸೂರು ಅರಸರಲ್ಲಿ ಚಿಕ್ಕದೇವರಾಯ ಒಡೆಯರು ಅಗ್ರಗಣ್ಯರಾಗಿದ್ದಾರೆ. 1672 ರಿಂದ 1704 ರವರೆಗೆ ಶ್ರೀರಂಗಪಟ್ಟಣದಿಂದ ಮೈಸೂರು ಸಂಸ್ಥಾನವನ್ನು ಆಳಿದ ಚಿಕ್ಕದೇವರಾಯರ ಕಾಲ ಕನ್ನಡ ನಾಡು-ನುಡಿಯನ್ನು ಬೆಳೆಸುವ ದೃಷ್ಟಿಯಿಂದ ಒಂದು ಪರ್ವಕಾಲ. ಸ್ವತಃ ಚಿಕ್ಕದೇವರಾಯರೇ ಕವಿವರ್ಯರಾಗಿದ್ದು, ತಾನು ಮತ್ತು ತನ್ನ ಆಸ್ಥಾನದಲ್ಲಿ ಸಾಹಿತ್ಯ-ಸಂಸ್ಕೃತಿಗಳ ಸಮ್ಮೇಳನವೇ ನಡೆಯುತ್ತಿದ್ದಿತು. ಇಂಥ ಸನ್ನಿವೇಶದಲ್ಲಿ ಹೊನ್ನಮ್ಮನಿಗೆ ರಾಜ ಮತ್ತು ಆಸ್ಥಾನ ಪಂಡಿತ ಮಂಡಳಿಯ ಪ್ರೋತ್ಸಾಹದಲ್ಲಿ ಕಾವ್ಯರಚನಾ ಸಾಮರ್ಥ್ಯವನ್ನು ಬೆಳೆಸಿಕೊಂಡಳು.

ಚಿಕ್ಕದೇವರಾಯರ ಪಟ್ಟಮಹಿಷಿ ದೇವಮ್ಮನ ಊಳಿಗದವರಲ್ಲಿ ಒಬ್ಬಳಾಗಿದ್ದ ಹೊನ್ನಮ್ಮನ ಹುಟ್ಟೂರು ಯಳಂದೂರು. ರಾಜನ ಊಳಿಗಕ್ಕಾಗಿ ಶ್ರೀರಂಗಪಟ್ಟಣಕ್ಕೆ ಬಂದ ಹೊನ್ನಮ್ಮನ ಭಾಗ್ಯ ಒಳ್ಳೆಯದೇ ಆಯಿತು. ರಾಜನರಮನೆಯಲ್ಲಿ ಪಟ್ಟಮಹಿಷಿಯ ಅಂತಃಪುರ ವೈಭವವನ್ನು ಮುಕ್ತಕಂಠದಿಂದ ವರ್ಣಿಸಿ ತನ್ನ ಕಾವ್ಯದಲ್ಲಿ ದಾಖಲಿಸಿದ್ದಾಳೆ. ರಾಣಿಯ ಊರಿನವಳೇ ಆದ ಹೊನ್ನಮ್ಮ ರಾಣಿಯ ಮಮತೆಯಿಂದ ಬೆಳೆದು ಆಸ್ಥಾನ ಪಂಡಿತರ ಭಕ್ತಿ, ಗೌರವಗಳಿಂದ ನಡೆದುಕೊಂಡು ಅವರಿಂದ ವಿದ್ಯೆಯನ್ನು ಕಲಿತು ಕವಿತಾ ರಚನೆಗೆ ತೊಡಗಿ ಯಶಸ್ಸನ್ನು ಸಾಧಿಸಿದವಳು ಹೊನ್ನಮ್ಮ. ರಾಣಿಯ ಊಳಿಗದಲ್ಲಿ ಸಂಚಿಯ ಕೆಲಸದಾಕೆಯಾಗಿದ್ದ ಹೊನ್ನಮ್ಮ ತನ್ನ ವಿನಯಾದಿ ಗುಣಗಳಿಂದ ರಾಜರ ಮನಸೆಳೆದು ಅವರ ಕೃಪೆಯಿಂದಾಗಿ 'ಕರ್ಬೊನ್ನು ಚಂಬೊನ್ನಾ'ಗಿ ರೂಪ ತಾಳಿತು. ಹೊನ್ನಮ್ಮನ ಸೌಶೀಲ್ಯ, ಜಾಣ್ಮೆಗಳಿಗೆ ಆಕರ್ಷಿತರಾದ ಅಳಸಿಂಗಾರ್ಯರು ಹೊನ್ನಮ್ಮನಿಗೆ ಸಾಹಿತ್ಯ ಸಂಸ್ಕಾರಗಳನ್ನು

ಪರಿಮೂಡಿಸಿದ ಫಲವಾಗಿ 'ಸರಸ ಸಾಹಿತ್ಯ ವರದೇವತೆ' ಎಂಬುದಾಗಿ ಆಸ್ಥಾನದವರಿಂದ ಹೊಗಳಿಸಿಕೊಳ್ಳುವಂತಾದಳು. ಹೀಗೆ ಅರಸನ ದೃಷ್ಟಿಗೆ ಬಿದ್ದ ಹೊನ್ನಮ್ಮನಲ್ಲಿನ ಪ್ರತಿಭೆ ಹೂವಾಗಿ ಅರಳಿ ಸತ್ಕಾವ್ಯ ರಚನಾ ಅಪೇಕ್ಷೆಯನ್ನು ಹೊತ್ತು ಅರಸನ ಅಪ್ಪಣೆ ಪಡೆದು ರಚಿಸಿದ ಕೃತಿಯೇ 'ಹದಿಬದೆಯ ಧರ್ಮ'.

ಹದಿಬದೆಯ ಧರ್ಮ ಸತೀಧರ್ಮವನ್ನು ಕುರಿತು ಹೆಣ್ಣೊಬ್ಬಳು ಅಭಿವ್ಯಕ್ತಿ ಕ್ರಮವನ್ನು ಕಂಡುಕೊಂಡ ವಿಶಿಷ್ಟ ಕೃತಿಯಾಗಿದೆ. ಇದರರ್ಥ ಆಧುನಿಕ ಸ್ತ್ರೀವಾದಿ ಪರಿಭಾಷೆಯ ಹೆಣ್ತನದ ಅಭಿವ್ಯಕ್ತಿ ಕ್ರಮವಲ್ಲ. ತನ್ನ ಸಮಕಾಲೀನ ನೀತಿ-ನಡತೆಗಳ ಹಿನ್ನೆಲೆಯಲ್ಲಿ ಪರಂಪರಾಗತವಾದ ಕಾವ್ಯಾದಿ ಅಲಂಕಾರ ಶಾಸ್ತ್ರಗಳು, ಮಹಾಕಾವ್ಯಗಳಲ್ಲಿನ ಸತೀಶಿರೋಮಣಿ ಸ್ತ್ರೀಪಾತ್ರಗಳ ಆದರ್ಶಗಳು, ಪುರಾಣ ಕಾವ್ಯಗಳ ಶ್ಲೋಕ ಸಮುಚ್ಚಯಗಳು ಸಂಸ್ಕೃತ ಭಾಷೆಯ ಮಹಾಗ್ರಂಥಗಳಲ್ಲಿನ ಸಾರಸಂಗ್ರಹ ರೂಪದ ತಿರುಳನ್ನು ತನ್ನ ಕಾವ್ಯದಲ್ಲಿ ಅಳವಡಿಸಿ 'ಸತಿಯರ ಧರ್ಮದ ಸಾರ' ಎಂಬುದಾಗಿ ಪ್ರತಿಯೊಬ್ಬ ಸ್ತ್ರೀಯು ಅನುಸರಿಸಬೇಕಾದ ಮಾರ್ಗವೆಂಬ ಅಚಲ ನಂಬಿಗೆಯಲ್ಲಿ ತನ್ನ ಕಾವ್ಯವನ್ನು ಬರೆದಿದ್ದಾರೆ. ತನ್ನ ಕಾವ್ಯ ಶಿಲ್ಪಕ್ಕೆ ಹೆಣ್ಣುಮಕ್ಕಳು ಹಾಡಲು ಯೋಗ್ಯವಾದ ಅಚ್ಚಗನ್ನಡ ಸಾಂಗತ್ಯವನ್ನು ಆಯ್ಕೆ ಮಾಡಿಕೊಂಡಿರುವುದು ಔಚಿತ್ಯಪೂರ್ಣವಾಗಿದೆ. ಹದಿಬದೆಯ ಧರ್ಮ ಒಂಬತ್ತು ಸಂಧಿಗಳಿಂದ ಕೂಡಿರುವ ನೀತಿಕಾವ್ಯ. ಪತಿವ್ರತೆಯ ಧರ್ಮಸೂತ್ರಗಳನ್ನು ಮತಬೇಧಗಳ ಮಿತಿಗಳನ್ನು ಕಳಚಿ ಪ್ರತಿಯೊಬ್ಬ ಸತಿಯೂ ಆಚರಿಸಬೇಕಾದ ಅಗತ್ಯವನ್ನು ಕುರಿತು ಹೇಳಲಾಗಿದೆ. ಸಂಸಾರ ಸಂಗದಲ್ಲಿದ್ದು ಪತಿಸೇವೆಯ ಮೂಲಕವೇ ಪರಮಸಿದ್ಧಿಯ ಮಾರ್ಗವನ್ನು ಸೂಚಿಸಿದವಳು ಹೊನ್ನಮ್ಮ. ನಿಸರ್ಗದ ಚೈತನ್ಯ ಶಕ್ತಿಗಳೆಲ್ಲ ಪ್ರಕಟವಾಗುವುದೇ ಪತಿವ್ರತೆಯರ ಬಲದಿಂದ 'ಇವರಿದ್ದೆಡೆ ಪುಣ್ಯತೀರ್ಥ, ಪುಣ್ಯಕ್ಷೇತ್ರ, ಇವರಿದ್ದ ಮನೆ ದೇವಭವನ, ಇವರೇ ಪ್ರತ್ಯಕ್ಷ ದೇವತೆಯರು ದಿಟ' ಎಂಬುದಾಗಿ ಸಾಂಪ್ರದಾಯಿಕ ನೆಲೆಯಲ್ಲಿಯೇ ಸ್ತ್ರೀಯರ ಮಹತ್ವವನ್ನು ಹೇಳಲಾಗಿದೆ.

ಹೆಣ್ಣಾದವಳು ಇನಿಯನನ್ನು ಅನುಸರಿಸಿ ಅವನ ಬೇಕು-ಬೇಡಗಳಿಗೆ ಸಮಯವರಿತು ನಡೆದುಕೊಳ್ಳುವ ಸಂಯಮಶಾಲಿಯಾಗಿರಬೇಕೆ ವಿನಃ ಗರತಿಗೆ ಗರ್ವವೆಂಬುದು ಸಲ್ಲದು. ಗಂಡನ ಪಾದವೇ ಗತಿಯೆಂದು ನಂಬಿ ನಡೆಯುವುದೇ ಉನ್ನತಿಯ ಮಾರ್ಗ. ಅಂತೆಯೇ ಯಾರೇ ಆಗಿರಲಿ ಗಂಡನಿಗಾಗದವರನ್ನು ಆಕೆಯೂ ದೂರವಿಟ್ಟು ಪತಿಯೇ ಪರದೈವವೆಂದು, ದೊರೆಯೆಂದು, ಗುರುವೆಂದು, ನಂಬಿ ಹೆಂಡತಿಯಾದವಳು ನಡೆಯಬೇಕು. 'ಬಳಿವಿಡಿದಿನಿಯನ ಪಾದಾರವಿಂದದ ನೆಳಲಂತೆ ನೇಮದೊಳಿಹುದು'. ಹೀಗಿದ್ದರೆ ಸತಿಯರು ಪತಿಗೆ ಅಂತರಂಗದವರಾಗುತ್ತಾರೆ ಎಂಬುದಾಗಿ ಸತಿಧರ್ಮ ನೀತಿಸಾರವನ್ನು ಬೋಧಿಸುವ ಕೃತಿ ಹದಿಬದೆಯ ಧರ್ಮ.

ಗೃಹಿಣಿಯಾದ ಹೆಣ್ಣು ಅತ್ತೆ ಮಾವಂದಿರನ್ನು ಅಪಮಾನಿಸದೆ, ಅವರಿಗೆ ಕೋಪ ಬಾರದಂತೆ ಅವರಿತ್ತ ಹಿತೋಪದೇಶದಂತೆ ನಡೆಯುವುದೇ ಹೆಣ್ಣಿನ ಧರ್ಮ. ಮನೆ ಮಂದಿಯೆಲ್ಲರೊಂದಿಗೆ ಸೊಸೆಯಾದವಳು ತಾಳ್ಮೆಯರಿತು ನಡೆಯಬೇಕೆಂದು ಬೋಧಿಸಿರುವಂತೆಯೇ ಅತ್ತೆಯ ಧರ್ಮವನ್ನು ತಿಳಿಸಿ ಹೇಳಿದ್ದಾಳೆ. ಅತ್ತೆಯಾದವಳು ಸೊಸೆಯನ್ನು ಬಾಧಿಸದೆ ಅವಳ ಇಷ್ಟಾರ್ಥಗಳನ್ನು ಪೂರೈಸಿ ಸಂತೋಷಪಡಿಸಬೇಕೆಂದು ಮತ್ತು ಸಮಯ ಬಿದ್ದಾಗ ಬುದ್ಧಿ ಹೇಳಲೂ ಹಿಂಜರಿಯಬಾರದೆಂಬ ನೀತಿ ಸಂಹಿತೆಯನ್ನು ನಿರೂಪಿಸಿದ್ದಾಳೆ.

ಹೆಣ್ಣು ಜನ್ಮವನ್ನು ಹೀಗಳೆವ ಸಮಾಜಕ್ಕೆ ಆದರ್ಶಪ್ರಾಯವಾದ ಹಿತವಚನ ಹೇಳುವ ರೀತಿಯಲ್ಲಿ,

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣುಕಾಣದ ಗಾವಿಲರು
ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು ?

ಎಂಬುದಾಗಿ ಹೇಳುವ ಮೂಲಕ ಹೆಣ್ಣು ಹೆತ್ತವರ ಬಳಗ ಬೇಗ ಹೆಚ್ಚುತ್ತದಲ್ಲದೆ ಅವರ ಕೀರ್ತಿಯು ಅಧಿಕವಾಗುವುದೆಂಬ ಆಶಯದಿಂದಾಗಿ ಹೆಣ್ಣನ್ನು ಸಮಾಜವು ಗೌರವದಿಂದ ನಡೆಸಿಕೊಳ್ಳಬೇಕೆಂಬ ಹಿತವಚನವನ್ನು ಹೇಳಲಾಗಿದೆ. ಹೆಣ್ಣು ಗಂಡಿನ ನಡುವೆ ದ್ವೇಷ, ಅಸೂಯೆ, ವಿರಸಗಳಿಗೆ ಅವಕಾಶವಾಗದಂತೆ ವಿವೇಕವರಿತು ನಡೆದುಕೊಳ್ಳಬೇಕೆಂಬ ನೀತಿಬೋಧೆ ಈ ಕಾವ್ಯದ ಮುಖ್ಯ ತಿರುಳು. ಸಂಸಾರ ಸುಖದ ಸುಗ್ಗಿ, ಅನ್ಯೋನ್ಯ ದಾಂಪತ್ಯದಿಂದ ಮಾತ್ರ ಸಾಧ್ಯ. ವಿರಸ ದಾಂಪತ್ಯದಿಂದಾಗಿ ಸಂಸಾರ ನಾಶವಾಗುವುದು ಎಂಬ ಅಂಶವನ್ನು ವಿಷದಪಡಿಸಲಾಗಿದೆ.

ಹದಿಬದೆಯ ಧರ್ಮ ಗ್ರಂಥ ಹೆಣ್ಣಿನ ದೃಷ್ಟಿಯಿಂದ ರಚಿತವಾಗಿದ್ದರೂ ಗಂಡಿನ ಸಹಚರ್ಯದಿಂದ ಮಾತ್ರ ಹೆಣ್ಣಿಗೆ ಸಾಫಲ್ಯ ದೊರೆಯಲು ಸಾಧ್ಯ. ಹೀಗಾಗಿ ಹೆಣ್ಣು ಅರ್ಧಾಂಗಿ, ಸಹಧರ್ಮಚಾರಿಣಿ ಎನ್ನುವ ಸಂಗತಿಯನ್ನು ಸ್ಪಷ್ಟಪಡಿಸಲಾಗಿದೆ. ಗಂಡು-ಹೆಣ್ಣುಗಳ ಸಹಚರ್ಯ ಪ್ರೀತಿ-ಪ್ರೇಮಗಳ ಒಲುಮೆಯ ಬೆಳೆಯನ್ನು ಬೆಳೆಯುವಂತಾಗಿರಬೇಕೆ ವಿನಃ ಬಲಾತ್ಕಾರಯುತವಾಗಿರಬಾರದು. ಸಂಯಮ, ವಿವೇಚನಾ ಮಾರ್ಗದಿಂದಲ್ಲದೆ ಸಂಸಾರದ ಸುಖ ದುಃಖಗಳಲ್ಲಿ ಸಮಭಾಗಿಗಳಾಗಿ ದಾಂಪತ್ಯ ಬದುಕಿನ ಸಾರ್ಥಕತೆಯನ್ನು ಸಾಧಿಸಬೇಕೆಂಬ ನೀತಿಪಾಠ ಹೇಳಿದ್ದು

ಗೃಹಿಣಿಯ ಗೃಹಚರ್ಯೆಯು ಶ್ರೇಷ್ಟತಮವಾದುದು ಎಂಬುದಾಗಿ ಹೆಣ್ಣಿನ ಶ್ರಮವನ್ನು ಶ್ರೇಷ್ಠಗೊಳಿಸಿ ಹೇಳುವುದು ಹದಿಬದೆಯ ಧರ್ಮ. ಮನೆಯೆಂಬ ಪವಿತ್ರ ಸಂಸ್ಥೆಯಲ್ಲಿ ಹೆಣ್ಣು-ಗಂಡುಗಳು ಸಮಪ್ರಮಾಣದಲ್ಲಿ ಆದರ ಘನತೆ, ಗೌರವಗಳನ್ನು ಕಾಪಾಡುವಲ್ಲಿ ಮುಖ್ಯರಾಗಿರುತ್ತಾರೆ. ಹೆಣ್ಣು ಧರ್ಮವನ್ನು ಪಾಲಿಸಿದಲ್ಲಿ ಗಂಡೂ ಸಹ ಅಂಥ ಧರ್ಮ ರಕ್ಷಣಕರ್ತನಾಗಿ ನಡೆದುಕೊಳ್ಳಬೇಕು ಎಂಬ ವಿನಯವನ್ನು ಕಾಯ್ದುಕೊಳ್ಳಲಾಗಿದೆ ಇಡೀ ಕೃತಿಯಲ್ಲಿ.

ಹೊನ್ನಮ್ಮ ತನ್ನ ನೀತಿಬೋಧನೆಗೆ ಆಧಾರವಾಗಿ ಭಗವದ್ಗೀತೆ, ಭಾಗವತ, ರಾಮಾಯಣ, ವಿಷ್ಣು ಪುರಾಣ, ಮಹಾಭಾರತಗಳ ಶ್ಲೋಕಗಳನ್ನು ಪುರಾವೆಯನ್ನಾಗಿಸಿ ಪರಂಪರಾಗತವಾದ ಸ್ತ್ರೀ ನೆಲೆಗಳನ್ನು ಕಾಯ್ದಿಟ್ಟುಕೊಳ್ಳಬೇಕಾದ ಅಂಶಗಳನ್ನು ಪುಷ್ಟೀಕರಿಸುತ್ತಾಳೆ.

ಸ್ತ್ರೀಯರು ಸಾಹಿತ್ಯ ರಚನೆಯಲ್ಲಿ ತೊಡಗುವುದು ಜನಪದದಲ್ಲಿ ಸಾಮಾನ್ಯವಾಗಿದ್ದರೂ ಶಿಷ್ಟ ಸಾಹಿತ್ಯದಲ್ಲಿ ಅದನ್ನು ಸಾಧ್ಯವಾಗಿಸಿದ್ದಲ್ಲದೆ ಜನಪ್ರಿಯತೆಯನ್ನು ಸಾಧಿಸಿದ ಹೆಗ್ಗಳಿಗೆ ಹೊನ್ನಮ್ಮನದಾಗಿದೆ. ಹೊನ್ನಮ್ಮನ ಕಾವ್ಯಕ್ಕೆ ನೀತಿಯೇ ನೆಲೆಗಟ್ಟಾಗಿದ್ದರೂ ಅವನ್ನು ಕಾವ್ಯ ಪ್ರಯೋಜನಗಳಲ್ಲೊಂದಾದ ಕಾಂತಾಸಮ್ಮಿತವಾದ ಉಪದೇಶ ಮಾರ್ಗದಲ್ಲಿ ನೀತಿಯನ್ನು ರಸಮಯವಾಗಿ ಹೇಳಿರುವುದರಿಂದ ಕಾವ್ಯವಾಗಿ ಗ್ರಾಹ್ಯಗೊಳ್ಳುವ ಗುಣ ಹದಿಬದೆಯ ಧರ್ಮಕ್ಕಿದೆ. ಹಾಗೆ ನೋಡಿದರೆ ನಮ್ಮ ಅನೇಕ ಶ್ರೇಷ್ಠ ಕೃತಿಗಳೆಲ್ಲ ಧರ್ಮೋಪದೇಶದ ಮಾರ್ಗವನ್ನೇ ಅನುಸರಿಸಿದೆ. ಮತ್ತೆ ಕೆಲವು ಹಿತೋಪದೇಶಗಳನ್ನು ಮಾಡುತ್ತದೆ. ಪಂಚತಂತ್ರ, ಭರ್ತೃಹರಿಯ ನೀತಿ ಶತಕ, ಸೋಮೇಶ್ವರ ಶತಕಗಳು, ಸರ್ವಜ್ಞನ ವಚನಗಳೂ ಇಂಥ ಜಾತಿಗೆ ಸೇರುತ್ತವೆ. ಈ ದೃಷ್ಠಿಯಿಂದ ಹೊನ್ನಮ್ಮನ ಕಾವ್ಯಕ್ಕೆ ಕಥಾನಕವೊಂದಿಲ್ಲದಿದ್ದರೂ ಸಾಧ್ವಿಯ ದಿನಚರಿಯ ಕಥೆ ನಿರೂಪಿತಗೊಂಡಿದೆ. ಪತಿಯೇ ಪರದೈವವೆಂದು ಸ್ತುತಿಸುವ ಮೌಲ್ಯ ಎಂಥ ಚಾರಿತ್ರಿಕ ಕಾಲಘಟ್ಟದಲ್ಲಿ ರೂಪಿತವಾದುದೆಂದು ಪರಿಶೀಲನೆಗೆ ಅರ್ಹವಾದ ಸಂಗತಿಯಾಗುತ್ತವೆ. ರಾಜಕಾರಣದ ಅನಿಶ್ಚಿತಗಳ ಮಧ್ಯೆ ಅಬಲೆ ಹೆಣ್ಣಿನ ಸಂರಕ್ಷಣೆ ಗಂಡಿನಿಂದಲ್ಲದೆ ಮತ್ತ್ಯಾವ ಶಕ್ತಿಯಿಂದಲೂ ಸಾಧ್ಯವಾಗದ ಸಂದರ್ಭದಲ್ಲಿ ಮಾತ್ರ ಹದಿಬದೆಯ ಧರ್ಮದಂಥ ನೀತಿಕಾವ್ಯ ಹುಟ್ಟಲು ಸಾಧ್ಯ. ಹೀಗಾಗಿಯೇ ಹೊನ್ನಮ್ಮನಂತಹ ಹೆಣ್ಣಿನಿಂದಲೇ ಪುರುಷ ಪಾರಮ್ಯವನ್ನು ಹೇಳುವ ಕೃತಿಯಾಗಿ ಹೊರಹೊಮ್ಮಿದೆ.

## ರತ್ನಾಕರವರ್ಣಿ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರತ್ನಾಕರವರ್ಣಿಗೆ ವಿಶಿಷ್ಟವಾದ ಸ್ಥಾನ. ಷಟ್ಪದಿಯ ಕಾವ್ಯವನ್ನಲ್ಲದ ಶತಕಗಳನ್ನು ರಚಿಸಿ ಸಾಹಿತ್ಯ ಕಾರಣಗಳಿಂದಾಗಿ

ಮಾತ್ರವಲ್ಲದೆ ಧರ್ಮ ಸಂಸ್ಕೃತಿ ಮತ್ತು ಜೀವನದರ್ಶನವನ್ನು ತೆರೆದು ತೋರಿದ ಮಹತ್ವದ ಕವಿ. ರತ್ನಾಕರನ ಕಾಲವನ್ನು ಕ್ರಿ.ಶ. 1557 ರಿಂದ 1660 ರವರೆಗೆ ಆತನ ವಿವಿಧ ಕೃತಿಗಳು ರಚನೆಯಾದ ಕಾಲವನ್ನು ಪರಿಗಣಿಸಿ ಗುರುತಿಸಲಾಗುತ್ತದೆ. ಕ್ರಿ.ಶ. 1500 ರ ಸುಮಾರಿಗೆ ರತ್ನಾಕರನ ಜನ್ಮ ದಿನಾಂಕವನ್ನು ಊಹಿಸಲಾಗಿದೆ. ರತ್ನಾಕರನಿಂದ ರಚಿತವಾದ ಕೃತಿಗಳೆಂದರೆ ಭರತೇಶ ವೈಭವ. ಇದನ್ನು ಕನ್ನಡದ ನವರತ್ನಗಳಲ್ಲಿ ಒಂದೆನ್ನುವಂತೆ ಗುರುತಿಸಲಾಗಿದ್ದು, ರತ್ನಾಕರವರ್ಣಿಗೆ ಯಶಸ್ಸನ್ನು ತಂದುಕೊಟ್ಟ ಕೃತಿ. ಇದರ ಜೊತೆಗೆ ರತ್ನಾಕರಾಧೀಶ್ವರ ಶತಕ,ಅಪರಾಜಿತ ಶತಕ ಮತ್ತು ತ್ರಿಲೋಕ ಶತಕಗಳೆಂಬ ಶತಕತ್ರಯಗಳ ಕೃತಿಗಳನ್ನು ರಚಿಸಿದ್ದಾನೆ.

ರತ್ನಾಕರವರ್ಣಿಯ ಸ್ಥಳ ಮೂಡಬಿದರೆ. ಇದು ತುಳುನಾಡಿನ ಪ್ರದೇಶವಾಗಿದ್ದಿತು. ತ್ರಿಲೋಕ ಶತಕವನ್ನು ತುಳುವ ದೇಶದ ವೇಣುಪುರದಲ್ಲಿ ರಚಿಸಲಾಗಿದೆ ಎಂದಿರುವುದರಿಂದ ರತ್ನಾಕರನ ಊರು ವೇಣುಪುರವಾಗಿರಬಹುದು ಎಂಬ ಸಂದಿಗ್ಧತೆಗೆ ದಾರಿ ಮಾಡಿಕೊಟ್ಟರು. (ವೇಣು-ಬಿದಿರು) ವೇಣುಪುರ ಎಂಬುದು ಮೂಡಬಿದಿರೆಯ ಪರ್ಯಾಯ ರೂಪವೇ ಆಗಿದೆಯಾದ್ದರಿಂದ ರತ್ನಾಕರನ ಸ್ಥಳ ಮೂಡಬಿದಿರೆ ಎಂಬುದನ್ನು ಖಚಿತಪಡಿಸಲಾಗಿದೆ. ಇಮ್ಮಡಿ ವೀರಭೈರಸು ರತ್ನಾಕರನಿಗೆ ಆಶ್ರಯ ಒದಗಿಸಿದ್ದನು. ಸೋಮವಂಶದ ಭೈರಸ ಒಡೆಯರು ಕಾರ್ಕಳ ರಾಜಧಾನಿಯಾಗಿದ್ದ ಮೂಡಬಿದಿರೆಗೆ ಅರಸನಾಗಿದ್ದ ಕಾಲದಲ್ಲಿ ರತ್ನಾಕರನು ಅವರ ಆಶ್ರಯದಲ್ಲಿದ್ದುದರ ಆಧಾರವಾಗಿ ಗೋವಿಂದ ಪೈಗಳು ರತ್ನಾಕರನು ಕಾಲವನ್ನು ಕ್ರಿ.ಶ. 1500 ಎಂಬುದಾಗಿ ಊಹೆ ಮಾಡಿರುತ್ತಾರೆ.

ಭರತೇಶ ವೈಭವದಲ್ಲಿ ರತ್ನಾಕರ ತನ್ನನ್ನು ಕ್ಷತ್ರಿಯ ವಂಶಜನೆಂದು ಕರೆದುಕೊಂಡಿದ್ದಾನೆ. ಈತನಿಗೆ ಇಬ್ಬರು ಗುರುಗಳಾಗಿದ್ದರು ಎಂದು ತಿಳಿದು ಬರುತ್ತದೆ. ತನ್ನ ಭರತೇಶ ವೈಭವ ಕೃತಿಯಲ್ಲಿ ದೀಕ್ಷಾಗುರು ಚಾರುಕೀರ್ತಿ ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಮಹೇಂದ್ರ ಕೀರ್ತಿ ಅಥವಾ ದೇವೇಂದ್ರ ಕೀರ್ತಿಯೆಂಬ ಮತ್ತೊಬ್ಬ ಗುರುವು ಇದ್ದನೆಂದು ರತ್ನಾಕರ ಶತಕದಲ್ಲಿ (ದೇವೇಂದ್ರ ಕೀರ್ತಿ ವ್ರತೀಶ್ವರನ್) ಉಲ್ಲೇಖವಿದೆ. ಭೈರಸ ಒಡೆಯನ ಆಶ್ರಿತನಾಗಿ ಅವನ ಆಸ್ಥಾನದಲ್ಲಿ 'ಶೃಂಗಾರ ಕವಿ' ಎಂಬುದಾಗಿ ಪ್ರಸಿದ್ಧನಾಗಿದ್ದನು. ಶೃಂಗಾರ ಕಾವ್ಯ ರಚಿಸಿ ಇಂತಹ ಬಿರುದನ್ನು ಪಡೆದಿರಲಿಕ್ಕೆ ಸಾಧ್ಯವಿದೆ. 'ಭರತೇಶ ವೈಭವ' ಅಂತಹ ಶೃಂಗಾರ ಕಾವ್ಯ. ತನ್ನ ಕಾವ್ಯಾರಂಭದ ಘಟ್ಟದಲ್ಲಿಯೆ ತನ್ನ ಒಡೆಯನ ಆಸ್ಥಾನ ಕವಿಯಾಗಿ ಶೃಂಗಾರ ಕವಿಯೆಂದೇ ಪ್ರಸಿದ್ಧನಾದ ಮೇಲೆ ಅರಸನ ಕುವರಿಯ ಮೇಲೆ ವ್ಯಾಮೋಹಿತನಾಗಿ ಅರಸನ ಕೋಪಕ್ಕೆ ತುತ್ತಾಗಿ ಅಲ್ಲಿಂದ ಬಹಿಷ್ಕರಿಸಲ್ಪಟ್ಟು ಪಲಾಯನಗೈದಿದ್ದಾನೆ. ಹೀಗೆ ದೇಶಭ್ರಷ್ಟನಾದ ಮೇಲೆ ದೇವೇಂದ್ರ ಕೀರ್ತಿಗಳ ಕೃಪಾರಕ್ಷೆ ದೊರೆತ ನಂತರ ರತ್ನಾಕರಾಧೀಶ್ವರ ಶತಕ ರಚಿಸಿರಬೇಕೆಂದು ತಿಳಿಯುತ್ತದೆ. ಆದ್ದರಿಂದಲೇ

ರತ್ನಾಕರಾಧೀಶ್ವರ ಶತಕದಲ್ಲಿ ದೇವೇಂದ್ರ (ಮಹೇಂದ್ರ) ಕೀರ್ತಿಗಳು ಗುರುಗಳಾಗಿದ್ದರೆಂದು ಪ್ರಸ್ತಾಪವಾಗಿದೆ.

ರತ್ನಾಕರ ಆರಂಭದಲ್ಲಿ ಚಾರುಕೀರ್ತಿಗಳಿಂದ ದೀಕ್ಷಿತನಾಗಿದ್ದರೂ ನಂತರದಲ್ಲಿ ಅವನು ಅದ್ವೈತ ತತ್ವದ ಕಡೆಗೆ ಆಕರ್ಷಿತನಾಗಿ ಶೈವಧರ್ಮೀಯನಾಗಿ ನಾಥಪಂಥದ ಯೋಗಿಯನ್ನು ತನ್ನ ಗುರುವನ್ನಾಗಿ ಸ್ವೀಕರಿಸಿರಬೇಕು ಎಂಬ ವಿಚಾರವು ಪರಿಶೀಲನಾರ್ಹವಾಗಿದೆ. ಅಂತೆಯೇ ಅವನು ತುಳುವ ದೇಶದ ಏನೆಂಬ ಬಗ್ಗೆಯು ಕೆಲವು ಸಂದಿಗ್ಧಗಳಿದ್ದು ಕ್ಷತ್ರಿಯನಾದ ರತ್ನಾಕರನ ಪೂರ್ವಜರು ಕರ್ನಾಟಕದವರಾಗಿದ್ದು, ಭೈರಸ ಒಡೆಯರ ಆಶ್ರಯವನ್ನು ಬಯಸಿ ತುಳುನಾಡಿನಲ್ಲಿ ಬೆರೆತಿರಬೇಕೆಂಬುದನ್ನು ಗಮನಿಸಬೇಕು. ಆದ್ದರಿಂದಲೇ ತುಳುನಾಡಿನವನಾಗಿಯೂ ಕನ್ನಡದ ಉತ್ತಮ ಕಾವ್ಯ ಬರೆಯಲಿಕ್ಕೆ ಸಾಧ್ಯ. ಕನ್ನಡದ ಪೂರ್ವ ಸೂರಿಗಳಂತೆ ಜೈನ ಕಾವ್ಯ ರಚನೆಗೆ ಮುಂದಾದರೂ ತನ್ನ ಕಾಲಧರ್ಮದ ತಳಹದಿಯ ಮೇಲೆ ಜೈನ ಧರ್ಮವನ್ನು ಸುಧಾರಣೆಯ ಮಾರ್ಗದಲ್ಲಿ ರಚನೆ ಮಾಡಿದ್ದು ರತ್ನಾಕರನ ವಿಶೇಷ. ಪಂಪ, ರನ್ನ, ಪೊನ್ನ, ಜನ್ನ ಇವರುಗಳು ಜೈನಕಾವ್ಯ ಬರೆಯುವ ಕಾಲದಲ್ಲಿ ಜೈನಧರ್ಮ ರಾಜಧರ್ಮವಾಗಿತ್ತು. ಆದರೆ ರತ್ನಾಕರ ಕಾವ್ಯರಚನೆ ಮಾಡುವ ಸಂದರ್ಭದಲ್ಲಿ ಜೈನಧರ್ಮ ತನ್ನ ಪ್ರಖರತೆಯನ್ನು ಕಳೆದುಕೊಂಡಿತ್ತು. 16ನೇ ಶತಮಾನದಲ್ಲಿ ಹಿಂದೂ ವೈಧಿಕ ಧರ್ಮ ತನ್ನ ಅಸ್ತಿತ್ವವನ್ನು ಪುನಃ ಸ್ಥಾಪಿಸಿಕೊಂಡಿದ್ದ ಕಾಲವಾಗಿತ್ತು. ಇಂತಹ ಸನ್ನಿವೇಶದಲ್ಲಿ ರತ್ನಾಕರನಿಗೆ ಜೈನಧರ್ಮ ತತ್ವಗಳನ್ನು ಯಥಾಸ್ಥಿತಿಯಲ್ಲಿ ಜನರ ಸಮ್ಮುಖದಲ್ಲಿ ಒಪ್ಪಿಸುವುದು ಪ್ರಯಾಸದಾಯಕ ಆದ್ದರಿಂದಲೇ ಭರತೇಶ ವೈಭವದಲ್ಲಿ ಯೋಗ-ಭೋಗ ಸಮನ್ವಯ ಸಿದ್ಧಾಂತವನ್ನು ಜನಾಕರ್ಷಕವಾಗಿ ಹೇಳಬಯಸಿದ್ದಾನೆ. ಅಲ್ಲದೆ ಜೈನಪುರಾಣಗಳಲ್ಲಿ ಹೆಚ್ಚು ಪ್ರಾಶಸ್ತ್ಯವನ್ನು ಹೊಂದಿಲ್ಲದ ಪ್ರಥಮ ಚಕ್ರೇಶನಾದ ಭರತನ ಕಥೆಯನ್ನು ಶೃಂಗಾರವಾಗಿ ಚಿತ್ರಿಸುತ್ತಾನೆ. ಕಾವ್ಯಬಂಧವನ್ನು ಸಮಕಾಲೀನ ಜನಪ್ರಿಯ ಸಾಂಗತ್ಯ ಪ್ರಕಾರದಲ್ಲಿ ಬರೆಯುತ್ತಾನೆ. ಶ್ರೀಕೃಷ್ಣನ ರಸಿಕತನ, ಶೃಂಗಾರ ಲೀಲಾ ವಿನೋದ ಪ್ರಸಂಗಗಳು ಜನಾಕರ್ಷಕವಾಗಿದ್ದ ಸನ್ನಿವೇಶದಲ್ಲಿ ತನ್ನ ಕಥಾನಾಯಕನಾದ ಭರತನಿಗೂ 96 ಸಾವಿರ ಮಡದಿಯರೆಂದು ಚಿತ್ರಿಸುತ್ತಾ ಅವನು ಭೋಗದ ನಡುವೆಯೂ ಯೋಗ ವಿಜಯವನ್ನು ಸಾಧಿಸುತ್ತಿದ್ದನೆಂದು ಹೇಳುವ ಕ್ರಮದಲ್ಲಿ ತನ್ನ ಕಾವ್ಯನಾಯಕನ ಉದಾತ್ತತೆಯನ್ನು ಸಾರುತ್ತಾನೆ. ಕವಿಗಿರುವ ಸ್ವಾತಂತ್ರ್ಯವನ್ನು ಬಳಸಿ ಕಾಲಧರ್ಮಕ್ಕನುಸಾರವಾಗಿ ಭರತೇಶನಲ್ಲಿಯೇ ಲೌಕಿಕ ಆಗಮಿಕ ಗುಣಗಳನ್ನು ಕಾಣಿಸುವ ಪ್ರಯತ್ನ ಮಾಡಿದ್ದಾನೆ. ಜೈನಧರ್ಮದ ಕ್ಲಿಷ್ಟತೆಗಳನ್ನು ಪರಿಹರಿಸಿ ಶೃಂಗಾರ ಸದೃಶವಾದ ಆಕರ್ಷಕ ರೀತಿಯಲ್ಲಿ ಪುನರ್ ನಿರೂಪಣಾ ಕ್ರಮವೊಂದನ್ನು ರತ್ನಾಕರ 'ಭರತೇಶ ವೈಭವ' ಕಾವ್ಯದಲ್ಲಿ ಮಾಡಿರುವಂತಿದೆ. ಆದ್ದರಿಂದಲೇ ಭೋಗ-ಯೋಗ

ಸಮನ್ವಯ ದೃಷ್ಟಿಯ ಭರತೇಶ ವೈಭವ ಕಾವ್ಯ ಅಪೂರ್ವವೆಂದು ತೋರುತ್ತದೆ.

'ಶತಕ' ಸಾಹಿತ್ಯ ಪ್ರಕಾರಕ್ಕೆ ಬಂದರೆ, ಶುದ್ಧ ಕಾವ್ಯ ನಾಟಕಗಳಷ್ಟು ಪ್ರಸಿದ್ಧವಲ್ಲವಾದರೂ ಹೆಚ್ಚು ಜನಪ್ರಿಯವಾದ ಪ್ರಕಾರ 'ಶತಕ' ಎಂದರೆ ನೂರು ಎಂದರ್ಥ. ಆದರೆ ನೂರು ಪದ್ಯಗಳ ಒಂದು ಸಮುಚ್ಛಯ ಎಂದೇ ಅರ್ಥ. ಆದರೆ ವಾಸ್ತವವಾಗಿ ಶತಕಗಳನ್ನು ರಚಿಸಿದ ಕವಿಗಳಾರೂ ನಿಯಮಬದ್ಧವಾಗಿಯೇ ನಡೆದುಕೊಂಡಿಲ್ಲ. ಇನ್ನು ಇವುಗಳಿಗೇ ಆದ ಪ್ರತ್ಯೇಕ ಛಂದೋಬದ್ಧವಲ್ಲದಿದ್ದರೂ ಕವಿ ಭಾವದ ನಿರೂಪಗೊಳಿಸುವುದಕ್ಕೆ ಯಾವುದೇ ಛಂದವನ್ನಾದರೂ ದುಡಿಸಿಕೊಳ್ಳಬಹುದು. ಸಾಮಾನ್ಯವಾಗಿ ಕನ್ನಡದ ಜನಪ್ರಿಯ ಶತಕಗಳೆನಿಸಿಕೊಂಡಿರುವ ಸೋಮೇಶ್ವರ ಶತಕ, ಪಂಪಾಶತಕ, ರಕ್ಷಾಶತಕ, ಅಪರಾಜಿತೇಶ್ವರ ಶತಕ ಮುಂತಾದವುಗಳೆಲ್ಲವು ಖ್ಯಾತ ಕರ್ನಾಟಕ ವೃತ್ತಗಳಲ್ಲಿಯೇ ರಚಿತವಾಗಿದೆ. ಇವುಗಳು ನೀತಿ ಕಾವ್ಯಗಳಾಗಿ ಪ್ರಚುರಗೊಂಡಿವೆ. ಧರ್ಮ, ನೀತಿ, ವೈರಾಗ್ಯ, ವ್ಯವಹಾರ ಮುಂತಾದವುಗಳ ಬೋಧನೆಯನ್ನು ಗುರಿಯಾಗಿಟ್ಟುಕೊಂಡು ಜನಮನಕ್ಕೆ ಮುಟ್ಟುವಂತೆ ಹೇಳುವಲ್ಲಿ ಯಶಸ್ವಿಯಾದ ಪ್ರಕಾರ. ಆದ್ದರಿಂದ ಇದೊಂದು ರೀತಿಯ ಕವಿದರ್ಶನ ಕೈಪಿಡಿ.

ರತ್ನಾಕರವರ್ಣಿ ರತ್ನಾಕರಾಧೀಶ್ವರ ಶತಕ, ಅಪರಾಜಿತೇಶ್ವರ ಶತಕ ಮತ್ತು ತ್ರಿಲೋಕ ಶತಕಗಳೆಂಬ ಮೂರು ಶತಕಗಳನ್ನು ರಚಿಸಿದ್ದಾನೆ. ರತ್ನಾಕರ ತನ್ನ ಜೀವಮಾನದಲ್ಲಿ ಭೈರಸ ಅರಸನ ಕುಮಾರಿಯೊಡನೆ ಸ್ನೇಹ ಬೆಳೆಸಿದ ವಿಷಯ ಅರಸನಿಗೆ ತಿಳಿದಾಗ ಸಂಸಾರವನ್ನೇ ತೊರೆದು ಸನ್ಯಾಸ ಸ್ವೀಕರಿಸಿದ ಎಂಬ ಸಂಗತಿಯು ಒಂದೆಡೆ ಇದ್ದರೆ, ರತ್ನಾಕರ ಸಂಸಾರಿಯಾಗಿರಲೇ ಇಲ್ಲ ಎಂಬುದಾಗಿ ಹೇಳುವರೂ ಉಂಟು. ಆದರೆ 'ಭರತೇಶ ವೈಭವ'ದಂತ ಕೃತಿಯನು ಸಂಸಾರಿಯಲ್ಲದವನು ರಚಿಸಲಿಕ್ಕೆ ಸಾಧ್ಯವಿಲ್ಲ. ಅಲ್ಲಿನ ಶೃಂಗಾರ ಸನ್ನಿವೇಶಗಳೆಲ್ಲ ಸಂಸಾರಿಯ ಜೀವನ ಸಂಬಂಧಿಯಾದುವೇ ಆಗಿರುವುದರಿಂದ ಶೃಂಗಾರ ಕಾವ್ಯ ರಚನೆಯ ಸಂದರ್ಭಕ್ಕೆ ಸಂಸಾರಿಯಾಗಿದ್ದು, ಭರತೇಶ ವೈಭವ ರಚಿಸಿಯಾದ ಮೇಲೆ ವಿರಕ್ತನಾಗಿ ಶತಕಗಳನ್ನು ರಚಿಸಿರಬೇಕೆಂಬ ವಾದವು ಸಮಂಜಸವಾಗಿ ತೋರುತ್ತವೆ. ಹೀಗಾಗಿ ಜೈನಧರ್ಮದ ಸೂಕ್ಷ್ಮ ವಿಚಾರಗಳನ್ನು ಶತಕಗಳಲ್ಲಿ ಮಂಡಿಸಿದ್ದಾನೆ. ಜೀವಾತ್ಮ ಪರಮಾತ್ಮಗಳೆರಡೂ ಒಂದೇ. ಆತ್ಮ ತನ್ನ ಸ್ವಪ್ರಯತ್ನ ಮತ್ತು ಸಾಧನೆಗಳಿಂದ, ಕರ್ಮಗಳಿಂದ ಮುಕ್ತನಾಗಿ ಪರಮಾತ್ಮನಾಗುತ್ತಾನೆಂಬ ಜೈನಸೂಕ್ತಿಯನ್ನು ಪ್ರತಿಪಾದಿಸಿದ್ದಾನೆ.

ಜೈನಧರ್ಮದ ಗಾಢವಾದ ಪ್ರೌಢವಾದ ವಿಚಾರಗಳನ್ನು ಸರಳವಾಗಿ ಪ್ರತಿಪಾದಿಸಿದ್ದಾನೆ. ಸದಾಕಾಲದಲ್ಲಿಯೂ ಸದ್ಭಾವನೆ, ಸಚ್ಛಾರಿತ್ರವನ್ನು ಪಾಲಿಸಬೇಕಾದ ಅಗತ್ಯವನ್ನು ಕುರಿತು ಮನಮುಟ್ಟುವಂತೆ ಹೇಳಿದ್ದಾನೆ. ಅನ್ಯಧರ್ಮಗಳ ಪರಿಭಾಷೆಗಳನ್ನು ವರ್ಜಿಸದೆ ಸರ್ವಮತ ಸಮನ್ವಯ ದೃಷ್ಟಿಯಿಂದಲೇ

ತನ್ನ ಇಷ್ಟದೈವವನ್ನು ಆರಾಧಿಸುತ್ತಾನೆ. ಜಿನೇಂದ್ರ, ಸಿದ್ಧ, ಶಿವ, ಶಂಭು, ಜಗನ್ನಾಥ, ಹರ, ಶ್ರೀಕಾಂತ, ವಾಣೀಶ ಎಂದೆಲ್ಲ ತನ್ನ ಇಷ್ಟದೈವವನ್ನು ಸ್ಮರಿಸುತ್ತಾನೆ. ಇದು ಸಮನ್ವಯ ಮನೋಧರ್ಮವಾಗಿ ತೋರುತ್ತದೆಯಲ್ಲದೆ ತನ್ನ ಸಮಕಾಲೀನ ಸಂದರ್ಭದ ಒತ್ತಡವಾಗಿಯೂ ಮೂಡಿಬಂದಿರುವ ಸಾಧ್ಯತೆಯನ್ನು ಪರಿಗಣಿಸಬೇಕು.

ಶರೀರವು ಕ್ಷಣಿಕವಾದುದು, ಆತ್ಮವೆಂಬುದು ನಿರಂತರವಾದುದು ಎಂಬ ತತ್ವವಿಚಾರಗಳನ್ನು ಶತಕಗಳಲ್ಲಿ ನಿರೂಪಿಸಿದ್ದಾನೆ. ಜೈನಧಾರ್ಮಿಕ ತತ್ವದನ್ವಯ 14 ಲೋಕಗಳ ಕಲ್ಪನೆಯಿದೆ. ಈ ಲೋಕಗಳಲ್ಲಿನ ಜೀವಿಗಳ ಆಯಸ್ಸು ಗುರುತಿಸುವ ವಿಶಿಷ್ಟವಾದ ಕಾಲಗಣನೆಯ ವಿಚಾರಗಳೂ ಬರುತ್ತವೆ. ಜೈನ ಧಾರ್ಮಿಕವಾದ ಇಂಥ ಪಾರಿಭಾಷಿಕ ವಿಚಾರಗಳನ್ನು ರತ್ನಾಕರವರ್ಣಿ ತನ್ನ ತ್ರಿಲೋಕ ಶತಕದಲ್ಲಿ ಹೇಳಿದ್ದಾನೆ. ಇದರ ಹೆಸರೇ ಹೇಳುವಂತೆ ಲೋಕಗಳನ್ನು ವರ್ಣಿಸುವಂಥದು. ಇದನ್ನೇ ಜೈನಪರಿಭಾಷೆಯಲ್ಲಿ ಲೋಕಾಕಾರವರ್ಣನೆ ಎನ್ನುತ್ತಾರೆ. ಜೈನಪುರಾಣ ಕವಿಗಳು ಜಿನಸೇನಾಚಾರ್ಯರ ಮಾರ್ಗವನ್ನನುಸರಿಸಿ ಲೋಕಾಕಾರವರ್ಣನೆಯನ್ನು ಅವಿಭಾಜ್ಯವಾಗಿ ಬಣ್ಣಿಸಿದ್ದಾರೆ. ಅವರುಗಳು ಕಡ್ಡಾಯವೆಂಬಂತೆ ಸಂಕ್ಷಿಪ್ತವಾಗಿ, ಸೂಚ್ಯವಾಗಿ ಹೇಳಿರುವುದನ್ನು ರತ್ನಾಕರ ಕನ್ನಡದ ಕಂದ ಪದ್ಯಗಳಲ್ಲಿ ವಿಷದವಾಗಿ ಬಣ್ಣಿಸಿರುವುದು ವಿಶೇಷ. ಗೇಯ ಸಾಹಿತ್ಯ ಪ್ರಕಾರಗಳಾದ ಕೀರ್ತನೆಗಳು ಚಾಲ್ತಿಯಲ್ಲಿದ್ದ ಸಂದರ್ಭದಲ್ಲಿ ಕಾವ್ಯ ರಚನೆಗೆ ಮುಂದಾದ ರತ್ನಾಕರವರ್ಣಿ ಸಮಕಾಲೀನ ಪ್ರಭಾವವಾಗ ಶತಕಗಳ ಮೂಲಕ ಆಧ್ಯಾತ್ಮ ಗೀತೆಗಳನ್ನು ರಚಿಸಿರುವುದು ವಿಶೇಷವಾಗಿ ಕಾಣುವುದು.

ರತ್ನಾಕರನ ಇಂಥ ಗೀತೆಗಳು ಧಾರ್ಮಿಕ ಮತ್ತು ಸಾಹಿತ್ಯಕ ಸೀಮೆಗಳನ್ನು ವಿಸ್ತರಿಸಬಲ್ಲವಾಗಿದ್ದು ಜೈನದರ್ಶನವನ್ನು ಜನಪ್ರಿಯ ಮಾರ್ಗದಲ್ಲಿ ಕಾಣುವ ಸಾಧ್ಯತೆಗಳನ್ನು ಹೇಳುತ್ತವೆ. ತ್ಯಾಗ ವೈಭವವನ್ನು ಹೇಳುವುದು ಅವನ ಶತಕಗಳ ಪ್ರಧಾನ ಆಶಯವಾಗಿ ಕಾಣುತ್ತದೆ. ಶತಕಗಳಿಗಿಂತಲೂ ಹೆಚ್ಚಿನದಾದ ಯಶಸ್ಸನ್ನು ತಂದುಕೊಟ್ಟದ್ದು ರತ್ನಾಕರವರ್ಣಿಗೆ 'ಭರತೇಶ ವೈಭವ'. ಇದೊಂದು ಮಹಾಕಾವ್ಯವಾಗಿ ಕವಿಗೆ ಮಹಾಕವಿ ಪಟ್ಟವನ್ನು ತಂದುಕೊಟ್ಟ ಕೃತಿಯೆಂದರೂ ಅತಿಶಯವಾಗಲಾರದು.

## ನಂಜುಡ ಕವಿ

ನಂಜುಂಡ ಕವಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ವಿಶಿಷ್ಟವಾದ ಸ್ಥಾನಕ್ಕೆ ಪಾತ್ರವಾಗಿರುವ ಕವಿಯಾಗಿದ್ದಾನೆ. ಈತನ ಕಾಲ 16ನೇ ಶತಮಾನವೆಂದು ಗುರುತಿಸಲಾಗಿದ್ದು, ವೀರಶೈವ ಕವಿಗಳ ಪರಂಪರೆಯಲ್ಲಿ ವೀರಶೈವ ಮತಾವಲಂಬಿ

ಎಂಬ ಕಾರಣಕ್ಕೆ ಸೇರ್ಪಡೆಯಾದರು ಭಕ್ತಿ ಕಾವ್ಯಕ್ಕಿಂತ ಭಿನ್ನ ಮಾರ್ಗದಲ್ಲಿ ತನ್ನ ಕಾವ್ಯರಥವನ್ನು ದೂಡಿದ ಕವಿಯಾಗಿದ್ದಾನೆ. ಹರಿಹರನಂಥ ಕವಿ ಚಾರಿತ್ರಿಕ ವ್ಯಕ್ತಿಗಳನ್ನು ಪುರಾಣದ ನೆಲೆಗೇರಿಸಿ ಅವರ ಮಹಿಮೆಗಳನ್ನು ಕೊಂಡಾಡಿದ್ದರೆ ನಂಜುಂಡ ಕವಿ ತನ್ನ ಕಾವ್ಯಕ್ಕೆ ಚಾರಿತ್ರಿಕ ವ್ಯಕ್ತಿತ್ವದಲ್ಲಿನ ಸಾಹಸಚರ್ಯೆಗಳನ್ನು ಕೊಂಡಾಡಿ ಪುರಾಣ ಸದೃಶ ಪರಾಕ್ರಮ ತೋರಿದ ನಾಯಕನ ಔಚಿತ್ಯವನ್ನು ಮೆರೆದಿದ್ದಾನೆ.

ಜೈನ ಕವಿಗಳ ಮಾರ್ಗ ಪರಂಪರೆಯನ್ನು ನಿರಾಕರಿಸಿದ ಹರಿಹರ ಮತ್ತಿತರ ವೀರಶೈವ ಕವಿಗಳ ಪರಂಪರೆಯನ್ನು ನೋಡಿಯೂ ನಂಜುಂಡ ಕವಿ ಮಹಾಕಾವ್ಯ ಲಕ್ಷಣದ ಗುಣಗಳನ್ನು ಅಳವಡಿಸಿಯೂ ಜಾನಪದ ಹಾಡುಗಾರಿಕೆಗೆ ಒಗ್ಗುವ ಸಾಂಗತ್ಯ ಪ್ರಕಾರದಲ್ಲಿಯೇ ವೀರಕಾವ್ಯರಚನೆಯ ಸಾಹಸವನ್ನು ಮಾಡಿದ್ದಾನೆ. ಪುರಾಣ ಪ್ರಪಂಚವನ್ನು ತೊರೆದು ಕಾವ್ಯರಚನೆ ಸಾಧ್ಯವಿಲ್ಲವೆಂಬ ಕಾಲಘಟ್ಟದಲ್ಲಿ ಚಾರಿತ್ರಿಕ ನೆಲೆಯನ್ನು ಸಮರ್ಥವಾಗಿ ಕುಮಾರರಾಮನ ಚರಿತ್ರೆಯ ಕಥೆಯಾಗಿಸಿ ಕಾವ್ಯದ ಕುಲುಮೆಯಲ್ಲಿ ಅದಕ್ಕೆ ಪುಟವಿಕ್ಕಿ ವೀರಶೈವ ಕವಿಗಳ ಪಂಕ್ತಿಯಲ್ಲಿ ನಂಜುಂಡನು ಅಪರೂಪದ ಕವಿಯಾಗಿದ್ದಾನೆ. ಈ ದೃಷ್ಟಿಯಿಂದ ಕನ್ನಡದಲ್ಲಿ ನಿಜವಾದ ಐತಿಹಾಸಿಕ ಕಾವ್ಯ ರಚನೆಯ ಪ್ರಾರಂಭಿಕ ಕವಿ ನಂಜುಂಡ. ಅಂತೆಯೇ ಸಾಂಗತ್ಯ ಕಾವ್ಯ ರಚನೆಯಲ್ಲೂ ಮೊದಲಿಗನಾಗಿದ್ದಾನೆ.

**ಕುಮಾರರಾಮನ ಸಾಂಗತ್ಯ**

ಕಾವ್ಯದ ಶೀರ್ಷಿಕೆಯೇ ಹೇಳುವಂತೆ ಕಾವ್ಯ ನಾಯಕ ಕುಮಾರರಾಮನನ್ನು ಕುರಿತ ಸಾಂಗತ್ಯ ಕಾವ್ಯ ಕುಮಾರರಾಮ ತನ್ನ ಸಮಕಾಲೀನ ಚಾರಿತ್ರಿಕ ವ್ಯಕ್ತಿಯಾಗಿದ್ದು, ಕಾವ್ಯನಾಯಕನಾಗುವ ಅರ್ಹತೆಯನ್ನು ಅವನಲ್ಲಿ ಕಂಡುಕೊಂಡ ಕವಿ. ಕಾವ್ಯಗುಣ ಸಂಪನ್ನಗೊಳಿಸುವ ಪ್ರತಿಭಾ ವ್ಯಾಪಾರದಲ್ಲಿಯೂ ಯಶಸ್ವಿಯಾಗಿದ್ದಾನೆ. ಕಾವ್ಯನಾಯಕ ಕುಮಾರರಾಮ ಮಹಾಪರಾಕ್ರಮಶಾಲಿ ಯಾಗಿಯೂ ಅತ್ಯಲ್ಪ ಕಾಲದಲ್ಲಿಯೇ ಅವಸಾನವನ್ನಪ್ಪಿದ್ದರಿಂದ ಚರಿತ್ರೆಯ ಪುಟ ಸೇರದೆ ಕಣ್ಮರೆಯಾದ ವೀರ. ಆದರೆ ಚರಿತ್ರೆಯನ್ನು ನಿರ್ಮಿಸಿದ ವಿಜಯನಗರದ ಸ್ಥಾಪನೆಗೆ ಕಾರಣವಾದ ವ್ಯಕ್ತಿಗಳೊಂದಿಗೆ ಕುಮಾರರಾಮನ ಸಂಬಂಧವಿದ್ದುದರಿಂದ ಈತನ ಘಟನಾವಳಿಗಳು ಚರಿತ್ರೆಯಲ್ಲಿ ಪ್ರಮುಖವಾಗಿವೆ. ವಿಜಯನಗರದ ಸಂಸ್ಥಾಪಕನೆನ್ನಲಾದ ಹರಿಹರ ಕಪಿಲನ ಮಗನೆಂಬುದು ಚರಿತ್ರೆಯಿಂದ ವ್ಯಕ್ತವಾಗುತ್ತದೆ. ಅದಕ್ಕೂ ಪೂರ್ವದಲ್ಲಿ ಕರ್ನಾಟಕದ ವೈಭವವನ್ನು ಮೆರೆದ ಹೊಯ್ಸಳರು ಅವನತಿ ಹೊಂದಿ ದೆಹಲಿ ಸುಲ್ತಾನರ ಅಂಜಿಕೆಯಲ್ಲಿ ನಡುಗುತ್ತಿದ್ದ ಕಾಲಕ್ಕೆ ದೆಹಲಿ ಸುಲ್ತಾನನ ಆಗ್ರಹಕ್ಕೆ ಸಿಕ್ಕ ಬಹದ್ದೂರ್ ಖಾನನು ಸುಲ್ತಾನನಿಂದ

ತಲೆತಪ್ಪಿಸಿಕೊಂಡು ಬಂದು ದಕ್ಷಿಣದಲ್ಲಿ ಕಂಪಿಲನ ಮೊರೆಹೊಕ್ಕಾಗ ಕಂಪಿಲನ ಮಗ ಕುಮಾರರಾಮ ಸುಲ್ತಾನನ ವಿರುದ್ಧ ಬಹದ್ದೂರ್ ಖಾನನಿಗೆ ಆಶ್ರಯ ಒದಗಿಸಿ, ಹಿಂದೂ ವೀರರ ಸಂಸ್ಕೃತಿಯನ್ನು ಮೆರೆದದ್ದಲ್ಲದೆ ಸುಲ್ತಾನನ ಸೈನ್ಯವನ್ನು ಹಿಮ್ಮೆಟ್ಟಿ ಪರಾಕ್ರಮವನ್ನು ಮೆರೆಯುತ್ತಾನೆ. ಇಂಥ ಸನ್ನಿವೇಶದಲ್ಲಿ ದೆಹಲಿ ಸುಲ್ತಾನನ ಮಗಳಿಗೆ ಸಾಹಸಿ ಕುಮಾರರಾಮನ ಮೇಲೆ ಉತ್ಕಟವಾದ ಪ್ರೇಮವುಂಟಾಗುತ್ತದೆ. ಇದನ್ನು ತಿಳಿದ ಸುಲ್ತಾನ ಕುಮಾರರಾಮನನ್ನು ತನ್ನ ಆಸ್ಥಾನಕ್ಕೆ ಆಹ್ವಾನ ಕೊಟ್ಟು ಆಗ್ರಹ ಪಡಿಸಿದರೂ ಕುಮಾರರಾಮ 'ಪರನಾರೀ ಸೋದರ' ನಾಗಿ ಕ್ಕರಿಸುತ್ತಾನೆ. ಇದಕ್ಕಾಗಿ ಸುಲ್ತಾನನು ಕ್ಷುದ್ರನಾಗಿ ಕುಮಾರರಾಮನನ್ನು ಮತ್ತಷ್ಟು ಕೆಣಕುತ್ತಾನೆ. ಅಸಂಖ್ಯಾತ ಸೈನ್ಯವನ್ನು ಪರಾಕ್ರಮಿ ಕುಮಾರರಾಮ ಎದುರಿಸಿ ತನ್ನ ವೀರತ್ವವನ್ನು ಮೆರೆಯಲು ಅವಕಾಶವೊದಗಿ ಬರುತ್ತವೆ. ಕಾವ್ಯಕ್ಕೆ ಇಂಥ ಸನ್ನಿವೇಶಗಳು ಪೋಷಕವಾಗಿ ಪಡಿಮೂಡಿವೆ. ಕಾವ್ಯ ನಾಯಕನ ಮಹೋನ್ನತ ಗುಣ ಪ್ರಕಟವಾಗುತ್ತದೆ.

ಮತ್ತೊಂದು ಸನ್ನಿವೇಶದಲ್ಲಿ ರತ್ನಾಜಿ ತನ್ನ ತಂದೆಯ ಕಿರಿಯ ರಾಣಿ ಕುಮಾರರಾಮನ ಮೇಲೆ ಮೋಹಗೊಂಡರೂ ನಿರಾಕರಿಸುವ ನಾಯಕನ ಧರ್ಮನಿಷ್ಠೆ. ವೀರತನ ಮತ್ತು ಪರಿಶುದ್ಧ ಚಾರಿತ್ರ್ಯವನ್ನು ಚಿತ್ರಿಸಲು ನಂಜುಂಡನಿಗೆ ಸಮರ್ಥ ಕಾವ್ಯಸಾಮಗ್ರಿ ಒದಗಿ ಬಂದಂತಾಗಿದೆ. ರತ್ನಾಜಿಯ ಮನಸಿಚ್ಛೆಗೆ ಒಲಿಯದ ಕಾರಣ ರಾಜ ಕಂಪಿಲನ ಬಳಿ ಕುಮಾರರಾಮನ ಬಗ್ಗೆ ಆರೋಪ ಹೊರಿಸಿ ಮರಣ ದಂಡನೆಗೆ ಒಳಪಡಿಸುವುದು, ನಿರಪರಾಧಿಯಾಗಿ ರಾಜಶಾಸನವನ್ನು ಧಿಕ್ಕರಿಸದೆ ವಿನಯದಿಂದ ಸ್ವೀಕರಿಸುವುದು. ಮಂತ್ರಿ ಬೈಚಪ್ಪನ ಚಾತುರ್ಯದಿಂದಾಗಿ ನೆಲಮಾಳಿಗೆಯಲ್ಲಿ ವಾಸವಾಗಿರಿಸಿ ಮಾಯ ಶಿರಸ್ಸನ್ನು ತೋರಿಸಿ ಪಾರಾಗಿಸುವ ಪ್ರಕ್ರಿಯೆಗಳು ವಿಸ್ಮಯಕಾರಕವಾಗಿ ಕೊನೆಯಲ್ಲಿ ಸುಲ್ತಾನನೊಡನೆ ಯುದ್ಧದಲ್ಲಿ ವಿಭಿನ್ನ ಹೋರಾಡಿ ರಸಪಾಕವನ್ನು ತಯಾರಿಸಲು ಕವಿಗೆ ಸಹಾಯಕವಾಗಿದೆ.

ಈ ರೀತಿಯ ವಸ್ತುವನ್ನು ಸಮಕಾಲೀನವಾಗಿ ಸಾಮ್ರಾಜ್ಯ ರಕ್ಷಣೆ ಮತ್ತು ಶುದ್ಧ ವ್ಯಕ್ತಿತ್ವ ನಿರೂಪಣೆಯ ಅಗತ್ಯವರಿತ ನಂಜುಂಡ ಕವಿ ಕರ್ನಾಟಕ ಪ್ರದೇಶದ ಬಗ್ಗೆ ಅಭಿಮಾನಧನನಾಗಿ ಹಿಂದಿನ ಕವಿಗಳ ಮಾರ್ಗದಲ್ಲಿ ನಾಡಿನ ವೈಭವದ ವರ್ಣನೆಗೆ ಮುಂದಾಗಿದ್ದಾನೆ. ತನ್ನ ಕಾವ್ಯದಲ್ಲಿ ಕಂಪಿಲನೇ ಚಕ್ರವರ್ತಿಯಾಗಿದ್ದರೂ ಕಥಾನಾಯಕ ಯುವರಾಜ ಕುಮಾರರಾಮನೇ ಆಗಿದ್ದಾನೆ. ಕುಮಾರರಾಮನು ಕಂಪಿಲನ ಪಟ್ಟದರಸಿ ಹರಿಯಾಲ ದೇವಿಯ ಸುಪುತ್ರನಾಗಿದ್ದರೂ ಪೂರ್ವ ಜನ್ಮದಲ್ಲಿ ಅರ್ಜುನನೇ ಆಗಿದ್ದವನೆಂದು ಅವನ ವೀರತ್ವಕ್ಕೆ ಪುರಾಣವನ್ನು ಸಮೀಕರಿಸುವುದು ಪಾವಿತ್ರ್ಯವನ್ನೊದಗಿಸುವುದು ದೈವಕೃಪೆಯ ಕಾರಣಿಕತನವನ್ನು ಹೇಳುವುದು ಕಾವ್ಯದ ದೃಷ್ಟಿಯಿಂದ ಅಪೇಕ್ಷಣೀಯವಾಗಿದ್ದರೂ ಚಾರಿತ್ರಿಕ ಸಂಗತಿಗಳಿಗೆ ಬಾಧೆಯಿಲ್ಲವೆನ್ನುವುದೇ ಇಲ್ಲಿನ ವಿಶೇಷ. ಮಹಾಕಾವ್ಯ ಮಾದರಿಯಲ್ಲಿ ನವರಸ

ವಿವರಣೆ ಅಷ್ಟಾದಶ ವರ್ಣನೆಗಳಿಗೆ ತೊಡಗಿಯೂ ದೇಸಿಯ ಛಂದಸ್ಸನ್ನು ತೊಡಿಸುವ ಮೂಲಕ ಹರಿಹರನ ಪ್ರಭಾವಲಯದಿಂದಲೂ ಪಾರಾಗಿರುವ ಕ್ರಾಂತಿಕವಿ ಎನ್ನಿಸಿಕೊಂಡಿದ್ದಾನೆ ನಂಜುಂಡ.

ಕುಮಾರರಾಮನ ಸಾಂಗತ್ಯ ವಸ್ತು ಮತ್ತು ಬಂಧದ ದೃಷ್ಟಿಯಿಂದ ಮಾತ್ರ ವಿಶಿಷ್ಟವೆನ್ನಿಸಿಲ್ಲ ಸಮಕಾಲೀನ ಜೀವನವನ್ನು ದಾಖಲಿಸುವ ಕಾರಣದಿಂದಲೂ ಇದು ಉತ್ತಮ ಕೃತಿಯಾಗಿದೆ. ಐತಿಹಾಸಿಕ ಕಾವ್ಯವಾದ ಕಾರಣ. ಅಂದಿನ ಜನಜೀವನ ಚಿತ್ರಣಕ್ಕೆ ಸಹಜವಾಗಿಯೇ ಅವಕಾಶವೊದಗಿದೆ. ಅಂದಿನ ಸಂಸ್ಕೃತಿ, ಆಚಾರ ವಿಚಾರಗಳು, ಉಡುಗೆ ತೊಡುಗೆ, ಹಬ್ಬ ಹುಣ್ಣಿಮೆ, ಉತ್ಸವ ಮುಂತಾಗಿ ಜಾನಪದೀಯವಾಗಿ ನಾಮವಾಚಕಗಳು. ಗಾದೆ ಮಾತುಗಳನ್ನು ಸೇರಿಸಿ ಕಾವ್ಯರಚನಾ ಕೌಶಲ್ಯವನ್ನು ತೋರಿರುವುದರಿಂದ ಕರ್ನಾಟಕ ಜನಜೀವನ ದರ್ಶನವೂ ಇವರಿಂದ ದೊರೆಯುತ್ತದೆ. ಪರಾಕ್ರಮ ಪ್ರಧಾನ ವೀರಕಾವ್ಯವಾಗಿರುವುದರಿಂದ ಯುದ್ಧ ಸಾಧನಗಳು, ವಾಹನ, ಆಯುಧಗಳು, ಯುದ್ಧನೀತಿ ಮುಂತಾದವುಗಳನ್ನು ತಿಳಿಯಲು ಒಂದು ಆಕರ ಗ್ರಂಥವೂ ಆಗಿದೆ.

ನಂಜುಂಡನ ಕಾಲಕ್ಕಾಗಲೇ ಕುಮಾರರಾಮ ಅವಕಾಶ ಪುರುಷನಾಗಿ ಜನಮನದಲ್ಲಿ ಬೇರೂರಿರಬೇಕು. ಆದ್ದರಿಂದಲೇ ಕುಮಾರರಾಮನ ವಸ್ತು ಕುರಿತು ವಿಭಿನ್ನ ಪಾಠಗಳು, ಜನಪದ ಕಾವ್ಯಗಳು, ಯಕ್ಷಗಾನ ಪ್ರಸಂಗಗಳು ಧಾರಾಳವಾಗಿ ದೊರೆಯುತ್ತವೆ. ಹೀಗಾಗಿ ನಂಜುಂಡನ ಕಾವ್ಯದಲ್ಲಿನ ಸಂವಿಧಾನದಲ್ಲಿನ ವರ್ಣನೆ ಸಾಹಸೋನ್ನತೆಯ ವಿವರಗಳಲ್ಲಿ ಕವಿಕಲ್ಪಿತ ಸ್ವತಂತ್ರ ರಚನೆಗಳನ್ನು ವಿಂಗಡಿಸುವುದು ಕಷ್ಟವಾಗುತ್ತದೆಯಾದರೂ, ಕನ್ನಡ ಸಾಹಿತ್ಯದಲ್ಲಿ ಚಾರಿತ್ರಿಕ ವೀರನನ್ನು ಕುರಿತು ಕಾವ್ಯ ರಚಿಸಿದ ಮೊದಲಿಗ ನಂಜುಂಡನೆನಿಸಿಕೊಂಡಿದ್ದಾನೆ.

ವೀರ ರೌದ್ರ ರಸಗಳಿಗೆ ಒಗ್ಗದ ಸಾಂಗತ್ಯವನ್ನು ಸಾಧ್ಯವಾದಷ್ಟು ಸಮರ್ಪಕವಾಗಿ ಬಳಸಿರುವ ನಂಜುಂಡ ಕವಿ ಡಿ.ಎಲ್. ನರಸಿಂಹಾಚಾರ್ ಅಂಥವರೂ ಮೆಚ್ಚಿಕೊಂಡಿದ್ದಾರೆ. ತನ್ನ ಕಾವ್ಯಕ್ಕೆ ತೊಡಿಸಿದ ಛಂದಸ್ಸು ಬಳಸಿಕೊಂಡ ವಸ್ತು ನಿರೂಪಣಾ ಕ್ರಮ. ಕಾವ್ಯದ ಉದ್ದೇಶ ಈ ಎಲ್ಲ ದೃಷ್ಟಿಯಲ್ಲೂ ಕ್ರಾಂತಿಕಾರರ ಕವಿಯೇ ಆಗಿದ್ದಾನೆ. ನಂಜುಂಡನಿಂದಾಗಿ ಸಾಂಗತ್ಯ ಯುಗವೊಂದು ಪ್ರಾರಂಭಗೊಂಡು ಮುಂದಿನ ಕವಿಗಳಿಗೆ ಮಾರ್ಗದರ್ಶಕನೂ ಆಗಿದ್ದಾನೆ. ಚಿಕ್ಕದೇವರಾಜ ವಿಜಯ, ಕಂಠೀರವ ನರಸರಾಜ ವಿಜಯ, ಕೆಳದಿ ನೃಪವಿಜಯ ಮುಂತಾದ ಕಾವ್ಯ ರಚನೆಗಳಿಗೆ ಮಾದರಿ ನಂಜುಂಡನ ಕಾವ್ಯವೇ ಆಗಿರಬೇಕು. ಈ ದೃಷ್ಠಿಯಿಂದಾಗಿ ನಂಜುಂಡ ಕನ್ನಡ ಸಾಹಿತ್ಯದಲ್ಲಿ ಶ್ರೇಷ್ಠ ಕವಿಯೆನ್ನಿಸದಿದ್ದರೂ ಉತ್ತಮ ಕವಿಯಾಗಿ ಜನಮೆಚ್ಚಿದ ಕವಿಯಾಗಿ ಪಂಡಿತರಿಗೂ ಪ್ರಿಯವಾಗುವ ಹಾದಿಯಲ್ಲಿ ಸಾಗಿದ್ದಾನೆನ್ನಬಹುದು.

## ಸರ್ವಜ್ಞ

ಸರ್ವಜ್ಞ ಕನ್ನಡಿಗರಿಗೆಲ್ಲ ಚಿರಪರಿಚಿತನಾದ ಕವಿ. ಈತ ತನ್ನ ಕೃತಿ ರಚನೆಗೆ ಉಪಯೋಗಿಸಿಕೊಂಡ ಛಂದೋವಾಹಿನಿ ತ್ರಿಪದಿ. ಈ ತ್ರಿಪದಿ ಸರ್ವಜ್ಞನ ಕಾಲಕ್ಕಿಂತ ಹಿಂದೆ ಸುಮಾರು ಹತ್ತು ಶತಮಾನಗಳ ಕಾಲ ಕ್ವಚಿತ್ತಾಗಿ ಶಾಸನಗಳಲ್ಲೂ ಹಾಗೂ ಜನಪದ ಸಾಹಿತ್ಯದಲ್ಲೂ ಪ್ರಚುರವಾಗಿದ್ದಿತು. ಆದರೂ ಸರ್ವಜ್ಞ ತನ್ನ ಭಾವನೆಗಳ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡು ತ್ರಿಪದಿಗೆ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾದ ಸ್ಥಾನವನ್ನು ಗಳಿಸಿಕೊಟ್ಟರು. ಪಂಪನಿಂದ ಚಂಪೂವಿಗೆ, ಹರಿಹರನಿಂದ ರಗಳೆಗೆ, ರಾಘವಾಂಕ-ಕುಮಾರವ್ಯಾಸನಿಂದ ವಾರ್ಧಕ-ಭಾಮಿನಿ ಷಟ್ಪದಿಗಳಿಗೆ, ರತ್ನಾಕರವರ್ಣಿಯಿಂದ ಸಾಂಗತ್ಯಕ್ಕೆ ಲಭಿಸಿದ ಗೌರವಗಳಂತೆ ಸರ್ವಜ್ಞನಿಂದ ತ್ರಿಪದಿಗೆ ಒಂದು ಅತಿಶಯತೆ ಪ್ರಾಪ್ತವಾಯಿತು.

ಸರ್ವಜ್ಞ ತನ್ನ ತ್ರಿಪದಿ ಸಂಗ್ರಹವನ್ನು ಪದ್ಧತಿಗಳನ್ನಾಗಿ ವಿಭಾಗಿಸಿದ್ದು ಅವುಗಳಲ್ಲಿ ಮೊದಲನೆಯದಾಗಿ 'ಜಾತಿ ಸ್ಮರಣ ಪದ್ಧತಿ' ಬರುತ್ತದೆ. ಇದರಲ್ಲಿ ಸರ್ವಜ್ಞ ತನ್ನ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ತಿಳಿಸಿದ್ದಾನೆ. ಅಲ್ಲದೆ ಕನ್ನಡ ವಿದ್ವಾಂಸರು ಈತನ ಜೀವನದ ಬಗೆಗೆ ಹಲವಾರು ಸಂಗತಿಗಳನ್ನು ವ್ಯಕ್ತಪಡಿಸಿದ್ದಾರೆ. ''ಜಾತಿ ಸ್ಮರಣ ಪದ್ಧತಿ'' ಯ ಉಲ್ಲೇಖದಂತೆ ಈತ ಮೊದಲು ಪನ್ನಗಧರನಾಳಾಗಿದ್ದ. ಪುಷ್ಪದತ್ತ ಮುಂದೆ ವರರುಚಿಯಾಗಿ ಆನಂತರ ದೇವಸಾಲೆ ಸರ್ವಜ್ಞನಾದನು. ಮಕ್ಕಳಿಲ್ಲದ ಅಕ್ಕಮಲ್ಲಮ್ಮ ತನ್ನ ದುಃಖವನ್ನು ಗಂಡ ಬಸವರಸನಿಗೆ ಹೇಳಲು ಆತ ಕಾಶಿಯ ಮುಕ್ಕಣ್ಣನ ಪ್ರಸಾದವನ್ನು ಹೊಂದಲು ಕಾಶಿಗೆ ಹೋದನು. ಕಾಶಿಯಲ್ಲಿ ಮಾಸನೂರು ಬಸವರಸ ಈಶನಿಂದ ಪ್ರಸಾದವನ್ನು ಪಡೆದು ಹಿಂತಿರುಗಿ ಬರುವಾಗ ದಾರಿಯ ನಡುವೆ ಮಳೆಯ ಕಾರಣದಿಂದ ಅಂಬಲೂರಿನ ಕುಂಬಾರ ಶಾಲೆಯಲ್ಲಿ ತಂಗಿದ. ಅಲ್ಲಿದ್ದ ಮಾಳಿಯೊಡನೆ ಬಸವರಸ ಸಮಾಗಮವನ್ನು ಹೊಂದಿ ಮಾಳಿ ಬಸುರಾದಳು. 8-10 ತಿಂಗಳುಗಳ ನಂತರ ಮಾಳಿ ಹೆತ್ತಳು. ಮಗು ಬೆಳೆಯತೊಡಗಿತು. ಒಂದು ಸಾರಿ ಮಾಳ ಮಾಳಿಯರು ಮಗುವನ್ನು ನೀನಾರ ಮಗನೆಂದು ಕೇಳಿದಳು. ಆಗ ಮಗು ತಾನು ಶಿವನ ಮೇಳದನುಣಗನೆಂದು ಹೇಳಿದು ದಲ್ಲದೆ, ತಂದೆ ಹಾರುವನಲ್ಲ, ತಾಯಿ ಮಾಳಿಯೂ ಅಲ್ಲ. ಚಂದ್ರಶೇಖರನವರ ಪುತ್ರನಾಗಿದ್ದು, ನಾನಿಮ್ಮ ಕಂದನಲ್ಲವೆಂದು ದೃಢವಾಗಿ ತಿಳಿಸಿ ತನ್ನ ಜನನ ಸಮಸ್ಯೆಗಳಿಗೆ ಇತಿಶ್ರೀ ಹಾಡಿದ ಸರ್ವಜ್ಞ. ಸರ್ವಜ್ಞನ ಜೀವನ ದೇಶಾದಿಗಳ ಬಗೆಗೆ ವಿಶೇಷವಾದ ಅಭ್ಯಾಸ ಮಾಡಿರುವ ಶ್ರೀ ಜಿ.ಎಂ. ಉಮಾಪತಿ ಶಾಸ್ತ್ರಿಗಳು ಸರ್ವಜ್ಞನ ಪುರಾತನ ಶಿವಶರಣರ ಕುಂಬಾರ ಗುಂಡಯ್ಯನ ಕುಲದವನಾಗಿದ್ದಿರಬಹುದೆಂದು ಊಹಿಸಲು ಬರುವಂತಿದೆ ಎಂದೂ ಸರ್ವಜ್ಞನ ಕುಂಬಾರ ಸಾಲೆಯಲ್ಲಿ ಹುಟ್ಟಿದವನಾದರೂ ದೇವಸಾಲೆಯ ಮನೆತನದಲ್ಲಿ ಬೆಳೆದಿರುವುದು ಸಂಭಾವ್ಯವೆನಿಸಿದೆ. (ಪ್ರಸ್ತಾವನೆ

ಸರ್ವಜ್ಞಮೂರ್ತಿಯ ವಚನಗಳು ಸಂ. ಎಂ.ಜಿ. ಉಮಾಪತಿಶಾಸ್ತ್ರಿ).

ಸರ್ವಜ್ಞ ಗತಿಸಿದ ಸ್ಥಳ ಮತ್ತು ಕಾಲಗಳ ಬಗೆಗೆ ಏನೂ ತಿಳಿದು ಬಂದಿಲ್ಲ. ಸರ್ವಜ್ಞ ತಾನು ಜನಿಸಿದ ಪ್ರದೇಶವನ್ನು ಕುರಿತು ''ಜಾತಿ ಸ್ಮರಣ ಪದ್ಧತಿ''ಯಲ್ಲಿ ಈ ಕೆಳಕಂಡ ತ್ರಿಪದಿಗಳಲ್ಲಿ ಖಚಿತವಾಗಿ ತಿಳಿಸಿದ್ದಾನೆ.

ಮಾಸನೂರು ಬಸವರಸ / ಕೂಸನೀಶನ ಕೇಳಲು
ಕಾಶಿಯೀಶನೊಳು ಪಡೆದವರ - ವದು ನಡುವೆ
ಸೂಸಿ ತೆಂತೆನಲು ಪಾರಮಾರ್ಥ -
ಅಂಬಲೂರೊಳಗೆಸೆವ / ಕುಂಬಾರಸಾಲೆಯಲಿ
ಇಂಬಿನ ಕಳೆ(ಯ) ಮಾಳಿಯೊಳು - ಬಸವರಸ
ನಿಂಬಿಟ್ಟನೆನ್ನ ಪರಮಾರ್ಥ.
(ಪಾರಮಾರ್ಥ - ಡಾ॥ ಎಲ್.ಬಸವರಾಜು, ಕ್ರಮಾಂಕ 4.7)

ಇದರಿಂದ ಸರ್ವಜ್ಞ ಮಾಸನೂರು ಬಸವರಸ ಮತ್ತು ಅಂಬಲೂರ ಮಾಳಿಯವರಿಗೆ ಜನಿಸಿದ ಸಂಗತಿ ಸ್ಪಷ್ಟವಾಗುತ್ತದೆ. ಮೇಲೆ ಉಕ್ತವಾಗಿರುವ ಮಾಸನೂರು, ಅಂಬಲೂರು ಇಂದಿನ ಧಾರವಾಡ ಜಿಲ್ಲೆಯಲ್ಲಿದ್ದು ಅವುಗಳಿಗೆ ಪರಸ್ಪರ 6 ಮೈಲಿಗಳ ಅಂತರವಿದೆ. ಅಂಬಲೂರಿಗೆ ಇಂದು ಅಬ್ಬಲೂರೆಂದು ಹೆಸರಿದ್ದು, ಇದು ಪ್ರಾಚೀನ ಐತಿಹಾಸಿಕ ಸ್ಥಾನವಾಗಿದ್ದುದಲ್ಲದೆ ಜೈನ ಮತ್ತು ಶೈವರಿಗೆ ಸುಪ್ರಸಿದ್ಧ ಕ್ಷೇತ್ರವಾಗಿತ್ತು.

ಸರ್ವಜ್ಞನ ಕಾಲದ ಬಗ್ಗೆ ಹೇಳಬೇಕೆಂದರೆ, ಸರ್ವಜ್ಞ ತನ್ನ ತ್ರಿಪದಿಗಳನ್ನು ರಚಿಸಿದ ಕಾಲದ ಬಗೆಗೆ ಏನನ್ನೂ ತಿಳಿಸಿಲ್ಲ. ಅಲ್ಲದೆ ಕೃತಿಯ ಮೊದಲಿಗೆ ತನಗೆ ಪೂರ್ವಭಾವಿಯಾಗಿ ಕೃತಿ ರಚನೆ ಮಾಡಿದ ಕವಿಗಳಾರನ್ನೂ ಹೆಸರಿಸಿಲ್ಲ. ಹೀಗಾಗಿ ಸರ್ವಜ್ಞನ ಕಾಲನಿರ್ಣಯ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಸಮಸ್ಯೆಯಾಗಿದೆ.

ಸರ್ವಜ್ಞನ ಕಾಲ ನಿರ್ಣಯಿಸಲು ಪ್ರಯತ್ನಿಸಿರುವ ಕನ್ನಡ ವಿದ್ವಾಂಸರು ಸರ್ವಜ್ಞನ ಕಾಲದ ಬಗ್ಗೆ ವಿಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

1) 15ನೆಯ ಶತಮಾನ - ಸಿದ್ಧಯ್ಯ ಪುರಾಣಿಕ (ಉದ್ಧೃತ ಸರ್ವಜ್ಞಮೂರ್ತಿ ವಚನಗಳು - ಸಂ. ಜಿ.ಎಂ. ಶಾಸ್ತ್ರಿ ಪ್ರಸ್ತಾವನೆ ಪುಟ - 28)
2) 15ನೆಯ ಶತಮಾನ - ಜಿ.ಎಂ. ಉಮಾಪತಿಶಾಸ್ತ್ರಿ ಅಡಿ ಟಿಪ್ಪಣಿ 7 ರಂತೆ ಪ್ರಸ್ತಾವನೆ ಪುಟ 28-3
3) ಕ್ರಿ.ಶ. 1560 ರಿಂದ 1600 - ಡಾ॥ ಎಲ್. ಬಸವರಾಜು ಸರ್ವಜ್ಞನಿಗೊಬ್ಬ ಲೇಖಕ ಶಿಷ್ಯ, ಪ್ರಬುದ್ಧ ಕರ್ನಾಟಕ 54, ಪುಟ 533)

| | | |
|---|---|---|
| 4) 1600 ಕ್ಕಿಂತ ಮೊದಲು | - | ಆರ್. ನರಸಿಂಹಾಚಾರ್<br>ಕರ್ನಾಟಕ ಕವಿಚರಿತೆ (ಸಂಪುಟ 2) ಪುಟ 533 |
| 5) 16ನೇ ಶತಮಾನ | - | ಚೆನ್ನಪ್ಪ ಉತ್ತಂಗಿ<br>ಪ್ರಸ್ತಾವನೆ - 26 |
| 6) ಕ್ರಿ.ಶ. 1600 | - | ಇ.ಪಿ. ರೈಸ್<br>A History of Kanarese Literature, ಪುಟ - 73. |
| 7) ಕ್ರಿ.ಶ. 1700 | - | ರಂ.ಶ್ರೀ. ಮುಗಳಿ<br>ಕನ್ನಡ ಸಾಹಿತ್ಯ ಚರಿತ್ರೆ, ಪುಟ - 216 |
| 8) ಕ್ರಿ.ಶ. 1800 | - | ಎಫ್. ಕಿಟ್ಟಲ್<br>(ಜೆ.ಎಂ. ಉಮಾಪತಿಶಾಸ್ತ್ರಿ ಪ್ರಸ್ತಾವನೆ, ಪುಟ-24) |

ಈ ಮೇಲಿನಂತೆ ಸರ್ವಜ್ಞನ ಕಾಲಾವಧಿ ಹದಿನೈದನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೆ ಸುಮಾರು 4 ಶತಮಾನಗಳಷ್ಟು ಕಾಲವನ್ನು ವ್ಯಾಪಿಸಿದೆ.

ಸರ್ವಜ್ಞನ ತ್ರಿಪದಿಗಳು ದೊರೆತಿರುವ ಹಸ್ತಪ್ರತಿಗಳಲ್ಲಿ ಏಕರೂಪತೆ ಇಲ್ಲ. ಪ್ರತಿಯಿಂದ ಪ್ರತಿಗೆ 'ಪದ್ಧತಿ'ಗಳ ವಿಭಾಗದಲ್ಲಿ ಮತ್ತು ಪದ್ಯಸಂಖ್ಯೆಯಲ್ಲಿ ವ್ಯತ್ಯಾಸಗಳಿವೆ. ಅಲ್ಲದೆ ಸರ್ವಜ್ಞನ ಅಂಕಿತದಲ್ಲಿ ಬೇರೆ ಬೇರೆಯವರಿಂದ ರಚಿತವಾದ ಅನೇಕಾನೇಕ ಪ್ರಕ್ಷೇಪ ತ್ರಿಪದಿಗಳು ಕಾಲದಿಂದ ಕಾಲಕ್ಕೆ ಹಸ್ತಪ್ರತಿಗಳಲ್ಲಿ ಹಾಗೂ ಅಚ್ಚಿನ ಪ್ರತಿಗಳಲ್ಲಿ ಸೇರಿಹೋಗಿವೆ.

ಡಾ|| ಎಲ್. ಬಸವರಾಜು ಅವರು ಕ್ರಿ.ಶ. 07-03-1636 ರಲ್ಲಿ ವೆಂಕನಿಂದ ಪ್ರತಿಮಾಡಲ್ಪಟ್ಟ ಸರ್ವಜ್ಞ ಹಸ್ತಪ್ರತಿಯೊಂದನ್ನು ವಿದ್ವಾಂಸರ ಗಮನಕ್ಕೆ ತಂದಿರುವುದಲ್ಲದೆ ಅದನ್ನು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ 19 ಪದ್ಧತಿಗಳಿದ್ದು, 937 ತ್ರಿಪದಿಗಳಿವೆ. ತ್ರಿಪದಿಗಳ ಒಂದು ಗಮನಾರ್ಹ ಅಂಶವೆಂದರೆ, ಇಲ್ಲಿನ ತ್ರಿಪದಿಗಳ ಅಂಕಿತ 'ಸರ್ವಜ್ಞ' ಎನ್ನುವುದಕ್ಕೆ ಬದಲಾಗಿ ಪರಮಾರ್ಥ ಎಂದಿದೆ. ಈ ಪ್ರತಿಯ ಆಧಾರದಿಂದ ಸರ್ವಜ್ಞ ಕವಿ ಕ್ರಿ.ಶ. 1636 ರ ಪೂರ್ವದಲ್ಲಿ ಇದ್ದನೆಂಬುದು ಸ್ಪಷ್ಟ.

ಸರ್ವಜ್ಞ ಎಂಬುದು ಒಬ್ಬ ವ್ಯಕ್ತಿಯ ಹೆಸರಲ್ಲ, ಅದೊಂದು ಕಾವ್ಯ ಪದ್ಧತಿಗೆ ಇಟ್ಟ ಹೆಸರು ಎಂದರೆ ಸರ್ವಜ್ಞನೆಂದು ನಾವು ಒಪ್ಪಿಕೊಂಡಿರುವ ಈ ತ್ರಿಪದಿಗಳಲ್ಲಿ ಅಷ್ಟನ್ನೂ ವಾಸ್ತವವಾಗಿ ರಚಿಸಿದ ಕವಿಯೊಬ್ಬ ಈ ಪದ್ಧತಿಯ ಮೂಲದಲ್ಲಿ ಇದ್ದಿರಲಿಲ್ಲವೆಂದು ಈ ಮಾತಿನ ಅರ್ಥವಲ್ಲ. ಖಂಡಿತ ಇದನ್ನು ಬರದ ವ್ಯಕ್ತಿಯೊಬ್ಬ

ಇದ್ದಿರಬೇಕು. ಪ್ರಭು 'ಪ್ರಭುದೇವ' ಎಂಬ ಹೆಸರಿನಂತೆ 'ಸರ್ವಜ್ಞ' ಎಂಬುದು ವ್ಯಕ್ತಿಯ ಹೆಸರಾಗಿದ್ದಿರಬೇಕು ಎನ್ನುತ್ತಾರೆ. ಇಂತ ಕವಿಯ ಕಾಲ ದೇಶಾದಿ ಸಂಗತಿಗಳನ್ನು ನಾವು ನಿರ್ದಿಷ್ಟವಾಗಿ ಚೌಕಟ್ಟಿಸಿ ಹೇಳಲು ಸಾಧ್ಯವಿಲ್ಲ. ಆದರೆ ಇಷ್ಟು ಮಾತ್ರ ಸತ್ಯ. ವಚನಕಾರರ ಕಾಲದಿಂದ ಈಚೆಗೆ ಹದಿನಾರನೆಯ ಶತಮಾನದೊಳಗಿನ ಅವಧಿಯಲ್ಲಿ ಇದ್ದಂತ ವ್ಯಕ್ತಿತ್ವ ಅದು.

ಈ ವ್ಯಕ್ತಿತ್ವ ಅನಿಕೇತನವಾದದ್ದು. ನಿಂತಲ್ಲಿ ನಿಲ್ಲದೆ ಗಾಳಿಯಂತೆ ಅಲೆದವನು ಇವನು. 'ಮಂಡೆ ಬೋಳಿಸಿಕೊಂಡು ತುಂಡುಗಂಬಳಿ ಹೊದೆದು ಹಿಂಡನಗಲಿದ ಗಜದಂತೆ' ಸುತ್ತಿದವನು. ಕೈಯಲ್ಲೊಂದು ಕಪ್ಪರವನ್ನು ಹಿಡಿದು ಹಿರಿದಾದ ನಾಡು ಎದುರಿಗಿರುವಾಗ, ಪರಮೇಶನೆಂಬ ನಾಮವನ್ನು ಮೆಚ್ಚಿತಿರಿಯುತ್ತಲೇ, ಊರೂರು ಸುತ್ತಿದ ಚಾರಣ ಕವಿ ಈತ. ಅಲ್ಲಮ ಪ್ರಭುವನ್ನು ಬಹುಮಟ್ಟಿಗೆ ನೆನಪಿಗೆ ತರುವ ಈ 'ಜಂಗಮ'ನಿಗೆ ನೆಲವೇ ಹಾಸಿಗೆ, ಆಕಾಶವೇ ಹೊದಿಕೆ. ಅವನ ವೈಯಕ್ತಿಕ ವಿಚಾರಗಳ ಬಗ್ಗೆ ನಿಖರವಾಗಿ ನಮಗೆ ತಿಳಿಯದಿದ್ದರೂ ಈ ತ್ರಿಪದಿಗಳನ್ನು ಬರೆದವನು ಅಚ್ಚ ಕನ್ನಡಿಗ. ಅವನು ಬದುಕಿದ್ದು ವಚನಕಾರರ ಕಾಲದ ನಂತರ, ಅವನೊಬ್ಬ ಚಾರಣ ಕವಿ. ಅತ್ಯಂತ ನಿರ್ಲಿಪ್ತವಾಗಿ ನಿಂತರೂ ಜೀವನ ಪ್ರೀತಿಯನ್ನು ಕಳೆದುಕೊಳ್ಳದ ಮನೋಧರ್ಮದವನು. ಯಾರ ಹಂಗಿಗೂ ಒಳಗಾಗದೆ ವಿಮರ್ಶಕನ ಕಣ್ಣಿಂದ ಲೋಕವನ್ನು ನೋಡಿದವನು.

'ಸರ್ವಜ್ಞ' ಎಂದು ಜನಜನಿತವಾಗಿರುವ ಈ ವ್ಯಕ್ತಿ ಒಬ್ಬ ಕವಿ ಕಂಡದ್ದನ್ನು ಕಂಡೊಡನೆಯೆ ಪದ್ಯರೂಪದಲ್ಲಿ ಕಟ್ಟಿ ನಿಲ್ಲಿಸುವ ಕೌಶಲವಿರುವ ಕಾರಣ ಈತ ಒಬ್ಬ ಕವಿ ಎನ್ನಬಹುದು. ಈ ಕವಿಯ ಕಾವ್ಯ ವಚನರೂಪದ್ದು. 'ವಚನ' ಎಂದರೆ ಕೂತು ಬರೆದದ್ದು ಎನ್ನುವುದಕ್ಕಿಂತ ಸುಮ್ಮನೆ ಹೇಳಿದ್ದು, ಮಾತನಾಡಿದ್ದು ಎಂದು ಅರ್ಥವಾಗುತ್ತದೆ. ಇದರ ಜತೆಗೆ ಇವುಗಳನ್ನು ವಿಂಗಡಿಸಿ 'ಪದ್ಧತಿ' ಎಂದು ಕರೆಯಲಾಗಿದೆ. 'ದಾನ ಪದ್ಧತಿ', 'ರಾಜನೀತಿ ಪದ್ಧತಿ' 'ಸ್ತ್ರೀ ಪದ್ಧತಿ', 'ದೈವ ಪದ್ಧತಿ', 'ಯೋಗ ಪದ್ಧತಿ' ಹೀಗೆ ಈತನ ತ್ರಿಪದಿಗಳನ್ನು ವಿಷಯಾನುಸಾರಿಯಾಗಿ ಉತ್ತಂಗಿಯವರು ವಿಂಗಡಿಸಿದ್ದಾರೆ. ಇದು ಎಲ್ಲಾ ಹಸ್ತಪ್ರತಿಗಳಲ್ಲಿ ಸರ್ವಜ್ಞನ ಅತ್ಯಂತ ಪ್ರಾಚೀನತಮ ಪ್ರತಿಯಲ್ಲಿಯೂ ಹೀಗೆಯೇ ಇದೆ ಎನ್ನುವುದು ಎಲ್. ಬಸವರಾಜು ಸಂಪಾದಿಸಿ ಪ್ರಕಟಿಸಿರುವ ಪಾರಮಾರ್ಥದಲ್ಲಿಯೂ ಕಾಣುತ್ತದೆ.

ಈ ವಚನ ಕವಿ ತನ್ನ ವ್ಯಕ್ತಿತ್ವವನ್ನು ಕುರಿತು –

ಮಂಡೆ ಬೋಳಿಸಿಕೊಂಡು, ತುಂಡುಗಂಬಳಿ ಹೊದೆದು
ಹಿಂಡನಗಲಿದ ಗಜದಂತೆ ಇಪ್ಪವನ
ಕಂಡು ನಂಬುವುದು ಸರ್ವಜ್ಞ.

ಎಂದು ಹೇಳಿಕೊಂಡಿದ್ದಾನೆ. ಎಲ್ಲದರಿಂದ ಕಳಚಿಕೊಂಡು ನಿರ್ಭಯ

ಏಕಾಕಿತನವನ್ನು ಸಾಧಿಸಿದವನ ಚಿತ್ರವೊಂದು ಈ ಪದ್ಯದಲ್ಲಿದೆ. ಇದರ ಜೊತೆಗೆ,

ಕರದಿ ಕಪ್ಪರವುಂಟು ಹಿರಿದೊಂದು ನಾಡುಂಟು
ಹರನೆಂಬ ದೈವ ನನಗುಂಟು, ತಿರಿವರಿಂ
ಸಿರಿವಂತರಾರು ಸರ್ವಜ್ಞ!

ಎಂಬ ಸಾಲಿನಲ್ಲಿ ಈ ವಿಸ್ತಾರವಾದ ಜಗತ್ತು ಅದರ ಉದಾರತೆಯ ಬಗ್ಗೆ ಭರವಸೆ, ಈ ಎಲ್ಲವನ್ನೂ ನಡೆಯಿಸುವ ಯಾವುದೋ ಒಂದು ದೈವ ಇವು ಸಾಕು ತನ್ನನ್ನು ನಡೆಸಲು ಎಂಬ ಧೈರ್ಯವೇ ಈ ವ್ಯಕ್ತಿತ್ವದ ಮೂಲ ದ್ರವ್ಯವೆಂಬಂತೆ ಹೇಳಲಾಗಿದೆ. ಇಂಥ ಕವಿ ತನ್ನ ಕಾವ್ಯದ ಪ್ರೇರಣೆಯ ಬಗ್ಗೆ 'ಎನ್ನ ಮನಸಿಗೆ ನೆನಹ ಪನ್ನಗಧರ ಕೊಟ್ಟ' ಎಂದು ಹಿಂದಿನ ಎಲ್ಲಾ ಕವಿಗಳಂತೆ ಹೇಳಿಕೊಂಡಿದ್ದಾನೆ. ಅವನ ಈ ನೆನಹ ಅಥವಾ ಕಾವ್ಯ ನಿರ್ಮಾಣ ಶಕ್ತಿಯಾದ ಪ್ರತಿಭೆ ಅನುಭವದ ಉಗ್ರಾಣದಿಂದ ನೆನಪುಗಳನ್ನು ಆಯ್ದು ಕಟ್ಟುವ ಕಲೆಗಾರಿಕೆ ತನಗೆ ದೈವೀಕೃಪೆಯಿಂದ ಬಂದದ್ದು ಎನ್ನುತ್ತಾನೆ. ಅವನು ಆಗೀಗ ಅಂದದ್ದು ಕಂಡು ಅಲ್ಲಿನ ಜನ ಮೆಚ್ಚಿ ಇನ್ನಷ್ಟು ಹೇಳು ಎನಲು ಹೇಳಿದೆನು ಎನ್ನುತ್ತಾನೆ. 'ಹೇಳಲರಿಯನು ನಾನು, ಹೇಳೆನಲು ಹೇಳಿದೆನು ಎನ್ನುತ್ತಾನೆ. ಈ ಹೇಳಿದ ಕಾವ್ಯ ಗಮನಿಸಬೇಕು. ಒಂದೆಡೆ ಕೂತು ಬರೆದ ಕಾವ್ಯ ಅಲ್ಲ ಸರ್ವಜ್ಞನದು. ಈ ಕವಿ ಹೇಳಿದ್ದನ್ನು ಕೇಳಿದ ಜನ ಅವನ ವಿಷಯದ ಬಾಹುಳ್ಯವನ್ನು ಕಂಡು ಬೆರಗಾಗಿ ಅವನನ್ನು ಸರ್ವಜ್ಞ ಎಂದು ಕರೆದಿದ್ದಿರಬಹುದು. ಆದರೆ ಈ ಕವಿ ಅದನ್ನು ನಿರಾಕರಿಸಿ 'ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ'.

ಸರ್ವಜ್ಞನೆಂಬುವನು ಗರ್ವದಿಂದಾದವನೆ
ಸರ್ವರೊಳಗೊಂದು ನುಡಿಗಲಿತು ವಿದ್ಯೆಯ
ಪರ್ವತವೇ ಆದ ಸರ್ವಜ್ಞ!

ಎಂದು ಹೇಳುವುದರ ಮೂಲಕ ಉತ್ತರ ಕೊಟ್ಟು ತನ್ನ ವಿನಯವನ್ನು ಎತ್ತಿ ಹಿಡಿದಿದ್ದಾನೆ.

ಸಾಹಿತ್ಯ ಪರಂಪರೆಯ ದೃಷ್ಟಿಯಿಂದಲೂ ಸರ್ವಜ್ಞ ಏಕಾಂಗಿಯಾಗಿಯೇ ತೋರುತ್ತಾನೆ. ಯಾಕೆಂದರೆ ಅವನು ತನ್ನನ್ನು ತನಗಿಂತಲೂ ಹಿಂದಿನ ಕನ್ನಡ ಸಾಹಿತ್ಯದೊಂದಿಗೆ ಬೆಸೆದುಕೊಳ್ಳುವುದೇ ಇಲ್ಲ. ವಚನ ಮನೋಧರ್ಮಕ್ಕೆ ಹೊರತು ತನಗಿಂತ ಹಿಂದೆ ಒಂದು ಸಾಹಿತ್ಯ ಪರಂಪರೆ ಇದೆ. ತಾನು ಅದರದೊಂದು ಭಾಗ, ತಾನು ಬರೆಯುತ್ತಿರುವುದು ಸಾಹಿತ್ಯವೇ ಎಂಬ ಯಾವ ಅರಿವಿನಿಂದಲೂ ಈತ ಬದ್ಧನಲ್ಲ.

ಹೀಗಾಗಿ ಸರ್ವಜ್ಞವೆಂದು ಹೇಳಲಾದ ತ್ರಿಪದಿಗಳು, ಕಾವ್ಯ ಎನ್ನಲು ಏನಿರಬೇಕು ಎಂದುಕೊಂಡಿದ್ದೇವೆಯೋ ಅದೆಲ್ಲವನ್ನೂ ಗಾಳಿಗೆ ತೂರುತ್ತದೆ. ಸಾಹಿತ್ಯ ಜೀವನದ ವಿಮರ್ಶೆ (Literature is the criticism of life) ಎಂಬ

ಮ್ಯಾಥ್ಯೂ ಆರ್ನಾಲ್ಡ್‌ನ ಮಾತು ಸರ್ವಜ್ಞನ ಕೃತಿಗೆ ಅನ್ವಯಿಸುತ್ತದೆ. ಅಂದಂದು ಅನ್ನಿಸಿದ್ದಕ್ಕೆ ಅಂದಂದೇ ಮಾತುಕೊಟ್ಟು ನಿಲ್ಲಿಸಿದ ಪದ್ಧತಿ ಇದು. ಈ ಬಗೆಯ ಅಭಿವ್ಯಕ್ತಿ ಹಿಂದಿನ ಸಾಹಿತ್ಯದಲ್ಲಿ ನಿದರ್ಶನಗಳಿಲ್ಲ. ಸರ್ವಜ್ಞನು ತ್ರಿಪದಿಗಳಲ್ಲಿ ಹೇಳಿಕೆ (Statement)ಗಳೇ ಪ್ರಧಾನವಾಗಿ, ಹಿಂದಿನ ಕವಿಗಳಿಗಿದ್ದಂಥ ಯಾವ ಕಥಾ ಸಂದರ್ಭದ ನೆರವನ್ನೂ ಕೋರದೆ ನೇರವಾಗಿ ಅಂದಂದಿನ ಅನುಭವದ ಸಂದರ್ಭಗಳಲ್ಲಿ ಕಾಣಿಸಿಕೊಳ್ಳುತ್ತವೆ. ನಿದರ್ಶನಕ್ಕೆ;

> ಊರಿಂಗೆ ದಾರಿಯನು ಆರು ತೋರಿದರೇನು ?
> ತುಪ್ಪವಾದಾ ಬಳಿಕ ಹೆಪ್ಪನೆರೆದವರುಂಟೆ ?
> ಶ್ವಾನ ತೆಂಗಿನಕಾಯ ತಾನು ಮಲಬಲ್ಲುದೆ ?
> ಬೆಟ್ಟಕರ್ಪುರ ಉರಿದು ಬೊಟ್ಟಿಡಲು ಬೂದಿಲ್ಲ
> ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೇ ?
> ಕುರಿ ಕಬ್ಬಿನೊಳು ಹೊಕ್ಕು ಅರಿವುದೇ ತನಿರಸವ ?
> ಆನೆ ನೀರಾಟದಲ್ಲಿ ಮೀನ ಕಂಡಂಜುವುದೇ ?
> ಉಣ್ಣೆ ಕೆಚ್ಚಲೊಳಿರ್ದು ಉಣದದು ನೊರೆವಾಲ
> ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಹೊಯ್ಯುವರೆ ?

ಈ ಕೆಲವು ಹೇಳಿಕೆಗಳನ್ನು ನೋಡಬಹುದು. ಈ ಹೇಳಿಕೆಗಳು ಹಿಂದಿನ ಕಾವ್ಯಗಳಲ್ಲಾಗಿದ್ದರೆ, ಯಾವುದೋ ಒಂದು ಸಂದರ್ಭದಲ್ಲಿ ಒಂದು ಆ ಸಂದರ್ಭದ ಅರ್ಥವಂತಿಕೆಗೆ ಪೂರಕವಾಗಬಹುದಾದವು. ಆದರೆ ಇಲ್ಲಿ ಅಂಥ ಸಂದರ್ಭ ಇಲ್ಲ. ಆದರೆ ಇಂಥ ಮಾತನಾಡಿದ ಅನುಭವದ ಸಂದ್ರರ್ಭ ಯಾವುದೆಂದು ಊಹಿಸಬಹುದು.

ಸರ್ವಜ್ಞನದು ಮನಸ್ಸನ್ನು ರಂಜಿಸುವ ಅಥವಾ ಅರ್ಥರಮ್ಯತೆಯನ್ನು ವ್ಯಂಜಿಸುವ ಉಕ್ತಿವಿಧಾನವಲ್ಲ. ಮನಸ್ಸನ್ನು ಕೆದಕುವ ಹೊಡೆದೆಬ್ಬಿಸುವ ಉಕ್ತಿವಿಧಾನ, ಪ್ರಶ್ನಿಸುವ ವಿಧಾನ.

> ದಂಡಿಸದೇ ದೇಹವನು ಖಂಡಿಸದೆ ಕರಣವನು
> ಉಂಡುಂಡು ಸ್ವರ್ಗವೇರಲಿಕೆ ಅವನೇನು
> ರಂಡೆಯಾಳುವಳೆ ಸರ್ವಜ್ಞ!
> ಉಣ್ಣದೊಡವೆಯ ಗಳಿಸಿ ಮಣ್ಣಿನೊಳು ಬಚ್ಚಿಟ್ಟು
> ಚೆನ್ನಾಗಿ ನೆಲವ ಸಾರಿಸಿದವನ ಬಾಯೊಳಗೆ
> ಮಣ್ಣುಕಾಣಯ್ಯ ಸರ್ವಜ್ಞ.

ಎಂಬಂಥ ಉಕ್ತಿಗಳನ್ನು ಗಮನಿಸಬಹುದು. ಈ ಎರಡೂ ಬದುಕಿನ ಎರಡು

ಧೋರಣೆಗಳನ್ನು ಕುರಿತ ವಿಮರ್ಶೆಯಾಗಿದೆ. ಪರದ ಮೇಲೆ ಕಣ್ಣಿಟ್ಟ ಸೋಮಾರಿ ಸಾಧಕ ಮತ್ತು ಜಿಪುಣನ ಧೋರಣೆಗಳನ್ನು ವಿಡಂಬಿಸಲಾಗಿದೆ. ಮೂಲತಃ ಸರ್ವಜ್ಞನದು ಜೀವನ ವಿಮರ್ಶೆ. ಕೆಲವು ವಚನಕಾರರ, ವಚನಗಳಲ್ಲಿರುವ ಕಾವ್ಯಗುಣ ಸರ್ವಜ್ಞನಲ್ಲಿಲ್ಲ. ಕೆಲವು ವಚನಕಾರರಲ್ಲಿರುವ ಅನುಭವದ ಕಾವು ಅದು ತಾನೇ ತಾನಾಗಿ ವ್ಯಕ್ತವಾಗಿರುವ ಘನೀಭವನ ಕ್ರಮ (Process of Crystalisation) ಬಹುಕಾಲದ ಪರಿಭಾವನೆಗೆ ನಿಲ್ಲುವ ಸಾಮರ್ಥ್ಯ ಸರ್ವಜ್ಞನ ತ್ರಿಪದಿಗಳಲ್ಲಿ ಇಲ್ಲ.

ಹಬ್ಬಕ್ಕೆ ತಂದು ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯುತಿತ್ತು
ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ ?
ತನುವ ತೋಂಟವ ಮಾಡಿ, ಮನವ ಗುದ್ದಲಿ ಮಾಡಿ
ಅಗೆದು ಕಳೆದೆನಯ್ಯಾ ಭವದ ಬೇರನು.

ಇಂಥ ವಚನ ಭಾಗದಲ್ಲಿ ದಟ್ಟೈಸಿದ ಅನುಭವ ಓದಿದ ನಂತರ ಅವುಗಳು ಉಂಟು ಮಾಡುವ ರಸಾಸ್ವಾದ ಹಾಗೂ ಜೀವನದ ಬಗ್ಗೆ ಹೊಸ ತಿಳುವಳಿಕೆ ಸರ್ವಜ್ಞನ ಉಕ್ತಿಗಳಲ್ಲಿ ತೀರಾ ವಿರಳ. ಸರ್ವಜ್ಞನದು ಮುಖ್ಯವಾಗಿ ಜೀವನ ಪ್ರೀತಿಯಿಂದ ಹುಟ್ಟಿದ ಮಾನವ ಧರ್ಮದ ಸುತ್ತಣ ಬದುಕನ್ನು ಹಸನು ಮಾಡುವ ಸುಧಾರಕತನ ಅವನ ಅಭಿವ್ಯಕ್ತಿಯ ಮೂಲ ಪ್ರೇರಣೆ. ಇದರಿಂದಾಗಿ ಅವನ ಅಭಿವ್ಯಕ್ತಿ ದೃಷ್ಟಾಂತ ಹಾಗೂ ಹೇಳಿಕೆಗಳ ರೂಪದ್ದಾಗುತ್ತದೆ. ನಿದರ್ಶನಕ್ಕೆ -

ಆನೆ ನೀರಾಟದಲಿ ಮೀನ ಕಂಡಂಜುವುದೇ ?
ಹೀನ ಮಾನವನ ದುರ್ನುಡಿಗೆ ತತ್ವದ
ಜ್ಞಾನಿಯಂಜುವನೆ ಸರ್ವಜ್ಞ.

ಈ ಪದ್ಯದಲ್ಲಿ ನೀತಿ ಕಾವ್ಯದ ಸಮಸ್ತ ಲಕ್ಷಣಗಳನ್ನು ಹಾಗೂ ದೌರ್ಬಲ್ಯಗಳನ್ನು ಗುರುತಿಸಬಹುದು. ಮೊದಲ ಪಂಕ್ತಿ ಒಂದು ಪ್ರಶ್ನೋಕ್ತಿ. ಆಧುನಿಕ ಅರ್ಥದಲ್ಲಿ ನಿಜವಾಗಿಯೂ ಹರಳುಗೊಂಡ ಒಂದು ಕಾವ್ಯ ಪ್ರತಿಮೆ (Poetic Image) ಯಾಗಿದೆ. ಅದೊಂದು ಪಂಕ್ತಿ ಸಾಕು ಏನೆಲ್ಲವನ್ನು ಧ್ವನಿಸಲು. ಆದರೆ ಮುಂದಿನ ಎರಡು ಪಂಕ್ತಿಗಳು ಮೊದಲ ಪಂಕ್ತಿ ಧ್ವನಿಸುತ್ತಿದ್ದ ಅರ್ಥ ಪರಂಪರೆಯನ್ನು ವಿವರಣಾತ್ಮಕವಾದ ಉಪದೇಶದ ಧಾಟಿಯಲ್ಲಿ ಒಂದು ಪರಿಮಿತಾರ್ಥಕ್ಕೆ ಇಳಿಸಿ ಬಿಡುತ್ತದೆ. ಹೀಗಾಗಿ ನಿಜವಾದ ಕಾವ್ಯಗುಣ ನೀತಿ ಬೋಧನೆಗೆ ನೈವೇದ್ಯವಾಗುತ್ತದೆ.

ಸರ್ವಜ್ಞನ ಉಕ್ತಿಗಳಲ್ಲಿ ನೆನಪಿನ ನಾಲಗೆಯ ಮೇಲೆ ರಸವೂರಿಸುವ ಎಷ್ಟೋ ಪಂಕ್ತಿಗಳು ದೊರಕುತ್ತವೆ ಎಂಬುದು ಸಮಾಧಾನದ ಸಂಗತಿ. 'ಬಳ್ಳಿಗರುಡರು

ಕೂಡಿ ಹಳ್ಳವನು ಬಿದ್ದಂತೆ, ಧನಕನಕ ಉಳ್ಳನಕ ದಿವಸಕರನಂತಕ್ಕುಂ' ಧನಕನಕ ಹೋದ ಮರುದಿವಸ ಹಾಳೂರ ಶುನಕ ನಂತಕ್ಕು ಎಂಬ ಎರಡು ಹೋಲಿಕೆಗಳ ವೈದೃಶ್ಯದ ಸ್ವಾರಸ್ಯ ಸೊಗಸಾದದ್ದು. 'ಉಣ್ಣೆಕೆಚ್ಚಲೊಳಿರ್ದು ಉಣ್ಣದದು ನೊರೆವಾಲ' ಎಂಬುದು ಸಂಪತ್ತಿದ್ದು ಅದನ್ನೂ ಉಣ್ಣಲಾರದ ನಿರ್ಭಾಗ್ಯರನ್ನು ಕುರಿತ ಉಚಿತವಾದ ಟೀಕೆಯಾಗಿದೆ. 'ಅನ್ನ ದೇವರ ಮುಂದೆ ಇನ್ನು ದೇವರು ಇಲ್ಲ' ಮನದಲ್ಲಿ ನೆನೆವಂಗೆ ಮನೆಯೇನು ? ಮಠವೇನು ? 'ಅಡಿಯ ಮುಂದಿಡೆ ಸ್ವರ್ಗ, ಹಿಂದಿಡೆ ನರಕ, ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೇ ? ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು, ಊರಿಂಗೆ ದಾರಿಯನು ಯಾರು ತೋರಿದರೇನು ? ಚಿತ್ತವಿಲ್ಲದೆ ಗುಡಿಯ ಸುತ್ತಿದರೆ ಫಲವೇನು ? ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ. ಇಂಥ ಎಷ್ಟೊಂದು ಹೇಳಿಕೆಗಳು ಸರ್ವಜ್ಞನ ತ್ರಿಪದಿಗಳ ತುಂಬಾ ಚದುರಿಕೊಂಡು ಮಿನುಗುತ್ತಿವೆ. ಈ ಹೇಳಿಕೆಗಳ ಸಂಕ್ಷಿಪ್ತಾಭಿವ್ಯಕ್ತಿ, ಅವುಗಳ ಹಿಂದಿರುವ ಲೋಕಾನುಭವ, ದಿನನಿತ್ಯದ ವ್ಯವಹಾರಕ್ಕೆ ಬರುತ್ತದೆ. ಇಂಥ ಕಾವ್ಯಾಭಿವ್ಯಕ್ತಿಗೆ ತಿರುವು ಕೊಟ್ಟು ವ್ಯಂಗ್ಯ, ಕಟಕಿ, ವಿನೋದ, ಸಹಾನುಭೂತಿ ಇತ್ಯಾದಿ ವೈವಿಧ್ಯಗಳಲ್ಲಿ ಜನರ ಬದುಕನ್ನು ತಿದ್ದುತ್ತಾ, ನಿಜವಾದ ಅರ್ಥದಲ್ಲಿ ಜನತೆಯ ಕವಿಯಾದ ಸರ್ವಜ್ಞ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ತನ್ನ ವಿಶಿಷ್ಟ ವ್ಯಕ್ತಿತ್ವದಿಂದ ಕನ್ನಡ ಜನಮನದಲ್ಲಿ ಮನೆಮಾಡಿಕೊಂಡಿದ್ದಾನೆ.

## ಪಠ್ಯಕೃತಿಗಳ ಪರಾಮರ್ಶನ

### ಹಳಗನ್ನಡ : ಆದಿ ಪುರಾಣ ಸಂಗ್ರಹ (ಎಲ್. ಗುಂಡಪ್ಪ)

ಕನ್ನಡದ ರತ್ನತ್ರಯರಲ್ಲಿ ಪಂಪನೂ ಒಬ್ಬ. ಪಂಪ ಕವಿ ಚಕ್ರವರ್ತಿಯಲ್ಲ. ಅವನ ದೊರೆ ಸಾಮಂತ. ಪಂಪನಿಗೆ ಕನ್ನಡದ ಕವಿಗಳಲ್ಲಿ ಅಗ್ರಸ್ಥಾನ. ಆದಿಕವಿಯೆಂದು ಕೀರ್ತಿಗೆ ಭಾಜನನಾದವನು. ಜೈನರಲ್ಲದವರೂ ಕೂಡ ಪಂಪನನ್ನು ನೆನೆದು ಕಾವ್ಯ ರಚನೆಗೆ ಕೈಹಾಕಿದ್ದಾರೆ. ಪಂಪನ ಕಾವ್ಯಗಳು ಹೊರ ಬಂದ ಮೇಲೆ ಹಿಂದಿನ ಕಾವ್ಯಗಳು ಸೂರ್ಯೋದಯದ ನಂತರದ ಚಂದ್ರ, ನಕ್ಷತ್ರಗಳಂತೆ ಮಸುಳಿಹೋದವು. ಮುಂದಿನ ಕವಿಗಳಿಗೆ ಆದರ್ಶಪ್ರಾಯವಾದನು.

ಆದಿಪುರಾಣದ ಕಡೆಯಲ್ಲಿ ಅದನ್ನು ತಾನು ಮುಗಿಸಿದ್ದು, ''ಶಕವರ್ಷಮೆಂಟು ನೂರಕ್ಕೆ ಕಡೆಯೊಳಐವತ್ತೂ‌ರು ಸಂದುದು'' ಪ್ಲವ ಸಂವತ್ಸರದ ಕಾರ್ತಿಕ ನಂದೀಶ್ವರದಲ್ಲಿ ಎಂದು ಹೇಳಿದ್ದಾನೆ. ಕ್ರಿ.ಶ. 863ಕ್ಕೆ ಕ್ರಿ.ಶ. 941 ಸರಿಹೊಂದುತ್ತದೆ. ಪಂಪ ಕೊಟ್ಟಿರುವ ''ಸಿತಪಕ್ಷದ ಪಂಚಮಿ ದಿನಪತಿವಾರಂ ಶುಭದ ಮೂಲನಕ್ಷತ್ರದೊಳನ್ವಿತಮಾಗೆ'' ಎಂಬ ತಿಥಿವಾರ ನಕ್ಷತ್ರಗಳು 941ನೇ ವರ್ಷಕ್ಕೆ ಸರಿಹೊಂದುವುದಿಲ್ಲ. 942ನೇ ಅಕ್ಟೋಬರ್ 16ನೇ ತಾರೀಖು ಭಾನುವಾರಕ್ಕೆ

ಸರಿಹೊಂದುವುದೆಂದು ಗೋವಿಂದ ಪೈ ಅಭಿಪ್ರಾಯಪಡುತ್ತಾರೆ.

ಪಂಪ ಜೈನನಾದರೂ ಅವನ ಹಿರಿಯರು ವೈದಿಕ ಬ್ರಾಹ್ಮಣರು, ಪೂರ್ವಿಕರು ವೆಂಗಿಮಂಡಲದ ವೆಂಗಿಪಳುನಲ್ಲಿ ವಾಸಿಸುತ್ತಿದ್ದರು. ಪಂಪ ಪ್ರೌಢ ವಯಸ್ಸಿನಲ್ಲಿ ಕಲಿಯಾಗಿ, ಸತ್ಕವಿಯಾಗಿ ಶಾಸನದ ಅಗ್ರಹಾರವನ್ನು ಪಡೆದು ರಾಜಸನ್ಮಾನಿತನಾದನು. ಪಂಪಭಾರತದ ಅರ್ಜುನನ ಬಾಯಲ್ಲಿ ಬನವಾಸಿ ದೇಶವನ್ನು ಕುರಿತು ಕೆಳಗಿನಂತೆ ಹೇಳಿಸುತ್ತಾನೆ.

''ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
ಯಂ ಕಿವಿವೊಕ್ಕಡಂ ಬಿರಿದ ಮಲ್ಲಿಗೆಗಂ ಡೊಡಮಾದ ಕೆಂದಲಂ
ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬಸವಾಸಿ ದೇಶಮಂ''

ಎಂದು ಈ ನಾಡಿನ ಬಗ್ಗೆ ಪ್ರೀತಿಯನ್ನು ತೋರಿಸುತ್ತಾನೆ. ಮನುಷ್ಯನಾಗಿ ಹುಟ್ಟಲು ಪುಣ್ಯವಿಲ್ಲದಿದ್ದರೂ ಮರಿದುಂಬಿಯಾಗಿ, ಕೋಗಿಲೆಯಾಗಿ ಹುಟ್ಟ ಬಯಸುವ ಪಂಪನ ಮನಸ್ಥಿತಿಯ ನಿಷ್ಠೆ, ಶ್ರದ್ಧೆ, ಪ್ರೀತಿಯನ್ನು ಕಾಣುತ್ತೇವೆ. ತಾಯ್ನಾಡನ್ನು ತೊರೆದು ಹೋದವನ ಹಂಬಲಿಕೆಯಂತಿದೆ. ತನ್ನ ಕಾವ್ಯದಲ್ಲಿ ಪುಲಿಗೆರೆಯ ತಿರುಳ್ಗನ್ನಡವನ್ನು ಬಳಸಿದ್ದಾನೆಂದು ಹೇಳಿಕೊಂಡಿದ್ದಾನೆ. ಬನವಾಸಿ ಪುಲಿಗೆರೆಯ ನಾಡಾದ್ದರಿಂದ ಪಂಪ ಬನವಾಸಿಯವನೆಂಬುವುದರಲ್ಲಿ ಎರಡು ಮಾತಿಲ್ಲ. ಅರಿಕೇಸರಿಯ ರಾಜನಾದಿ ಪುಲಿಗೆರೆಯಲ್ಲ, ಲೆಂಬುಳಪಾವಕ. ಈಗಿನ ಕರೀಂನಗರ ಜಿಲ್ಲೆಯ ವೇಮುಲವಾಡ. ಪುಲಿಗೆರೆ ಅರಿಕೇಸರಿಯ ವಂಶಸ್ಥರಿಗೆ ಅಧೀನವಾಗಿರಲಿಲ್ಲ ಎನ್ನುತ್ತಾರೆ. ಗೋವಿಂದ ಪೈ ಆದಿಪುರಾಣವನ್ನು ಬರೆಯುವ ಹೊತ್ತಿಗೆ ಪಂಪ ಆಸ್ಥಾನ ಕವಿಯಾಗಿ ಕವಿತಾ ಗುಣಾರ್ಣವ ಎಂಬ ಬಿರುದು ಪಡೆದಿದ್ದನೆಂದು ತಿಳಿದು ಬರುತ್ತದೆ.

ಆದಿಪುರಾಣ ಪೀಠಿಕೆಯಲ್ಲಿ ಕವಿಯ ವ್ಯಕ್ತಿಚಿತ್ರವನ್ನು ಕುರಿತ ಈ ಮಾತನ್ನು ಕಾಣುತ್ತೇವೆ.

ಕದಳೀ ಗರ್ಭಶ್ಯಾಮಂ
ಮೃದು ಕುಟಿಲ ಶಿರೋರುಹಂ ಸರೋರುಹವದನಂ
ಮೃದು ಮಧ್ಯಮತನು ಹಿತಮಿತ
ಮೃದು ವಚನಂ ಲಲಿತ ಮಧುರ ಸುಂದರವೇಷಂ.

ಬಾಳೆಯ ಸುಳಿಯಂತೆ ನಸುಗಪ್ಪಾದ ಮೈಬಣ್ಣ, ಮೃದುವಾದ ಗುಂಗುರು ಕೂದಲು, ತಾವರೆಯಂತ ದುಂಡುಮುಖ, ಎತ್ತರವೂ, ಕುಳ್ಳು ಅಲ್ಲದ ಮಧ್ಯಮ ತರದ ಆಕೃತಿ, ಹಿತಮಿತವಾದ ಮೃದುಮಾತು ಹೀಗೆ ಅವನ ಚೆಲುವು ಆಕರ್ಷಕವಾಗಿತ್ತು. ಕವಿತೆಯಿಂದ ಪಡೆಯ ಬಯಸುವ ಲಾಭ, ಪೂಜೆ, ಕೀರ್ತಿ.

ಆದರೆ ಜಿನೇಂದ್ರ ಸ್ತುತಿಯಿಂದ ಇಂದ್ರಪೂಜೆ, ಭುವನಸ್ತುತವಾದ ಕೀರ್ತಿ ಮುಕ್ತಿಲಾಭ, ಇವು ತಾನಾಗಿಯೇ ಬರುತ್ತದೆ. ಹೇಗಿರುವರಲ್ಲಿ ಪೆರರೀವುದೋಂ, ಪೆರರಿಂದಪ್ಪುದೇಂ ಎನ್ನುವುದು ಪಂಪನ ಅಭಿಮಾನ. ಬೇರೆ ಕವಿಗಳ ವಿಷಯದಲ್ಲಿ ನಿರ್ಮತ್ಸರನಾಗಿದ್ದನು. ರಸಿಕನಾಗಿ ಸಂಸಾರ ಸುಖವನ್ನು ಅನುಭವಿಸುತ್ತ ರಾಜಮನ್ನಣೆ ಪಡೆದು, ಸಂಪತ್ತಿನಲ್ಲಿ ಮೆರೆಯಬಹುದಾಗಿದ್ದರೂ ವಿನಯಶಾಲಿ, ದೈವಭಕ್ತ, ಕುಲಪರಂಪರೆಯ ವೈಧಿಕಧರ್ಮದ ಸಾರ ಜೈನಧರ್ಮದ ಸಾರವೆರಡನ್ನು ಮೈಗೂಡಿಸಿಕೊಂಡವನು.

> 'ವ್ಯಾಸಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆಂ ಕವಿ
> ವ್ಯಾಸನೆನೆಂಬ ಗರ್ವಮೆನಗಿಲ್ಲ ಗುಣಾರ್ಣವನೊಳ್ಪು ಮನ್ಮನೋ
> ವಾಸಮನೆಯ್ದೆ ಪೇಳ್ದಿಪನಲ್ಲದೆ ಗರ್ವಮೆ ದೋಷಮಳ್ತೆಗಂ
> ದೋಷಮೆ ಕಾಣೆನೆನ್ನಳಿವ ಮಾಳ್ಕೆಯೆ ಪೇಳ್ವೆನಿದಾವ ದೋಷಮೇ' ಎಂದು

ವಿನಯವನ್ನು ಪ್ರಕಟಿಸಿದ್ದಾನೆ. ಮಾರ್ಗಪರಂಪರೆಯ ದಾರಿಯೊಂದು ಕಡೆ ದೇಸೀಯಚೆಲ್ವು ಮತ್ತೊಂದೆಡೆ ಎರಡನ್ನು ಆಸ್ವಾದಿಸುತ್ತ ಕೃತಿ ರಚಿಸಿದವನು. ನಂತರದ ಕವಿಗಳಿಗೆ ಮಾರ್ಗಪ್ರಾಯನಾದನು. ಪ್ರಸಿದ್ಧ ಕವಿಗಳೆಲ್ಲ ಇವನ ಪಂಕ್ತಿಯನ್ನೇ ಅನುಸರಿಸಿ ಲೌಕಿಕ ಮತ್ತು ಆಗಮಿಕ ಕಾವ್ಯಗಳನ್ನು ರಚಿಸಿದರು.

ಆದಿಪುರಾಣ ಜಿನಾಗಮವನ್ನು ಬೆಳಗುವ ಕೃತಿ. ಕಾವ್ಯ ಧರ್ಮದೊಂದಿಗೆ ಧರ್ಮವನ್ನು ಬೆರೆಸಿ ಹೇಳಿರುವುದೇ ಇಲ್ಲಿಯ ವಿಶೇಷ. ಸಂಸ್ಕೃತ ಮಹಾಪುರಾಣ ಅಥವಾ ಪೂರ್ವ ಪುರಾಣದ ಕತೆಯನ್ನು ಅಡಕವಾಗಿ ಮೂಲಕ್ಕೆ ಧಕ್ಕೆ ಬರದಂತೆ ವಿಸ್ತರಿಸುವೆಡೆ ವಿಸ್ತರಿಸಿ ಕುಗ್ಗಿಸುವೆಡೆ ಕುಗ್ಗಿಸಿ ರಚಿಸಿದ್ದಾನೆ. ಇದೊಂದು ಜೈನಧರ್ಮದ ಕೈಪಿಡಿಯಂತೆಯೇ ಜೀವ ವಿಕಾಸ ಪರಂಪರೆಯ ಕೊನೆಯ ಹಂತ ತೀರ್ಥಂಕರತ್ವ. ಇದನ್ನು ದಾಟಿದಾಗ ಮುಕ್ತಿ ದೊರೆಯುತ್ತದೆ. ತೀರ್ಥಂಕರತ್ವ ಪಡೆಯಲು ಆಯಾ ಜೀವ ಹಿಂದಿನ ಜನ್ಮಗಳಲ್ಲಿ ಮಾಡಿಕೊಂಡ ಸಿದ್ಧತೆಯನ್ನು ವರ್ಣಿಸುವ ಭವಾವಳಿ ಒಬ್ಬೊಬ್ಬರಿಗೆ ಒಂದೊಂದು ವಿಧ. ಜೀವ ವಿಕಾಸ ಕ್ರಮವನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದರೆ ಸಾಂಪ್ರದಾಯಿಕ ಪಂಚ ಕಲ್ಯಾಣ ವರ್ಣನೆಗಿಂತ ಸಿದ್ಧಿಗೆ ಒಯ್ಯುವ ಸಾಧನ ಮಾರ್ಗವನ್ನು ತೋರಿಸುವ ಭವಾವಳಿಯೇ ಮುಖ್ಯವೆನಿಸುತ್ತದೆ.

## ಭವಾವಳಿಗಳು

ತೀರ್ಥಂಕರನಾಗುವ ಹಿಂದಿನ ಬದುಕು ಭವಾವಳಿ. ತೀರ್ಥಂಕರತ್ವಕ್ಕೇರಲು ವ್ಯಕ್ತಿ ಹಿಂದಿನ ಜನ್ಮಗಳಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ. ಒಂದರ್ಥದಲ್ಲಿ ಭವಾವಳಿ ಅತ್ಯವಶ್ಯಕವೆಂದೂ ಹೇಳಬಹುದು. ಕಾವ್ಯ ಪ್ರಾರಂಭದಲ್ಲಿ

ಪಂಪ ಮುಕ್ತಿಶ್ರೀಯನ್ನು ಪಡೆಯಲು ದೇವೇಂದ್ರ ಮುನಿಗಳನ್ನು ಪ್ರಾರ್ಥಿಸುತ್ತಾನೆ. ಮೂವತ್ತಾರು ಗುಣಗಳನ್ನು, ಐದು ಆಚಾರ (ದರ್ಶನ, ಜ್ಞಾನ, ಚಾರಿತ್ರ್ಯ, ತಪ, ವೀರ್ಯ) ಗಳನ್ನು ಕುರಿತು ವರ್ಣಿಸುತ್ತಾ, ಮುಕ್ತಿ ಸಿಗುವವರೆಗೆ ದಯಾರಸವನ್ನು ಕರುಣಿಸು ಎಂದು ಬೇಡಿಕೊಳ್ಳುತ್ತಾನೆ.

''ಪರಮ ಜಿನೇಂದ್ರವಾಣಿಯೆ ಸರಸ್ವತಿ ಬೇಡಿದು ಪೆಣ್ಣರೂಪಮಂ
ಧರಿಯಿಸಿ ನಿಂದುದಲ್ತುದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ
ದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ
ರ್ಕೆರೆದಪೆನಾ ಸರಸ್ವತಿಯ ಮಾಳ್ಕೆಮಗಿಲ್ಲಿಯೆ ವಾಗ್ವಿಳಾಸಮಂ''
(1-6)

ಸರಸ್ವತಿಯ ಮಾತುಗಳನ್ನು ಜಿನೇಂದ್ರವಾಣಿ ಎಂದು ಹೇಳುವ ಪಂಪ ಹೆಣ್ಣು ರೂಪವನ್ನು ಧರಿಸಿ ಬಂದವಳು, ಸರಸ್ವತಿಯ ಮಾತುಗಳನ್ನು ಕೇಳುವ, ಆಧರಿಸುವ ಮಾನವಕೋಟಿಗೆ ನಿರಂತರ ಸುಖವನ್ನು ನೀಡಲಿ ಎಂದು ಬೇಡುವುದರ ಮೂಲಕ ಪೂರ್ವ ಕವಿಗಳ ಸತ್ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿದ್ದಾನೆ.

ಕವಿಪರಮೇಷ್ಠಿ, ಪೂಜ್ಯಪಾದ, ಸುಮಂತಭದ್ರ ಪಾದಗಳಿಗೆ ನಮಸ್ಕರಿಸುವುದರ ಮೂಲಕ ಮೋಕ್ಷವನ್ನು ಸಂಪಾದಿಸಲೆಂದು ಬಯಸುತ್ತಾನೆ. ಕಥಾನಾಯಕನಾದ ಪುರುದೇವನ ಕಥೆಯನ್ನು ಉದಾಸೀನ ಮಾಡಲಾಗದು. ಈ ಕಥೆ ವೀರಸೇನ, ಜಿನಸೇನಾಚಾರ್ಯ ಪರ್ಯಂತ ಪರಂಪರೆಯಿಂದ ಬಂದಿರುವ ಕಥೆಯಿಂದ 'ಜ್ಞಾನ ಸಂಪಾದಿಸಿ ಕಥಾ ಸಮುದ್ರವನ್ನು ಈಸುವೆ'ನೆನ್ನುತ್ತಾನೆ.

''ಕವಿತೆಯೊಳಾಸೆಗೆಯ್ವ ಫಲಮಾವುದೋ ಪೂಜೆ, ನೆಗಳ್ತೆ ಲಾಭಮೆಂ
ಬಿವೆ ವಲಮಿಂದ್ರ ಪೂಜೆ ಭುವನಸ್ತುತಮಪ್ಪ ನೆಗಳ್ತೆ ಮುಕ್ತಿಸಂ
ಭವಿಸುವ ಲಾಭಮೆಂಬಿವು ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ
ರವೆ ಪೆಳೆರೀವುದೇಂ ಪೆಳೆರ ಮಾಡುವುದೇ ಪೆಳೆರಿಂದಮಪ್ಪುದೇಂ''.

ಕಾವ್ಯ ಪ್ರಯೋಜನವನ್ನು ಕುರಿತು, ಅದರಿಂದ ದೊರೆಯುವ ಕೀರ್ತಿ, ಗೌರವ, ಲಾಭ ಇವೆಲ್ಲವನ್ನು ಜಿನೇಂದ್ರಸ್ತುತಿಯಿಂದ ಬರುತ್ತದೆ. ಬೇರೆಯವರು ಕೊಡುವ ದಾನದಿಂದ, ಸಹಾಯದಿಂದ ದೊರೆಯಲಾರವು ಎನ್ನುತ್ತಾರೆ. ಪರರಿಂದ ಸಿಗುವ ಲಾಭಕ್ಕಿಂತ ಜಿನೇಂದ್ರಸ್ತುತಿಯಿಂದ ಅಥವಾ ಲೌಕಿಕ ಸುಖಕ್ಕಿಂತ ಅಲೌಕಿಕ ಸುಖ, ಕೀರ್ತಿ ಶ್ರೇಷ್ಠವಾದುದು ಎನ್ನುತ್ತಾನೆ.

ಮೂರು ಲೋಕದ ಮಧ್ಯದಲ್ಲಿ ಮಧ್ಯಮಲೋಕವಿದೆ. ಅದರ ಮಧ್ಯದಲ್ಲಿ ಲವಣ ಸಮುದ್ರವಿದೆ. ಅದರಿಂದ ಸುತ್ತುವರಿದಿರುವುದು ಜಂಬೂದ್ವೀಪ. ಈ ದ್ವೀಪದ ನಡುವೆ ಮಂದರ ದಿಕ್ಕಿನಲ್ಲಿ ವಿದೇಹವಿದೆ. ಆ ಪಶ್ಚಿಮ ವಿದೇಹಕ್ಕೆ ಅಲಂಕಾರವಾದ ಸೀತೋದ ನದಿಯ ಉತ್ತರ ಭಾಗದಲ್ಲಿ ಗಂಧಿಳ ದೇಶದ ನಡುವೆ

ವಿಜಯಾರ್ಧ ಪರ್ವತವಿದೆ. ಈ ಪರ್ವತದಲ್ಲಿ ಕೆಂದಳಿರಿನಲ್ಲಿರುವ ಮೊಗ್ಗು, ಎಳೆಯ ಮಾವು, ಮಾವನ್ನು ಬಗ್ಗಿಸುವ ಕೋಗಿಲೆ, ಕೋಗಿಲೆಯೊಂದಿಗಿರುವ ದುಂಬಿ, ತುಂಬಿಯೊಂದಿಗಿನ ತಂಗಾಳಿ, ಇವೆಲ್ಲ ವಸಂತರಾಜನ ಮನೆಯಂಗೆ ಕಣ್ಣುಗಳಿಗೆ ತೋರುತ್ತಿವೆ ಇಲ್ಲಿಯ ನಂದನವನಗಳು. ಹೀಗೆ ಶೋಭಾಯಮಾನವಾಗಿರುವ ಉತ್ತರ ಭಾಗದಲ್ಲಿ ಅಲಕಾಪುರ ಎನ್ನುವ ಪಟ್ಟಣ, ಅದನ್ನಾಳುತ್ತಿರುವವನು ಅತಿಬಲನೆಂಬುವನು. ಅವನ ಪತ್ನಿ ಮನೋಹರಿ. ಇವರಿಬ್ಬರ ಮಗ ಮಹಾಬಲ. ಮಹಾಬಲನಿಗೆ ಯುವರಾಜ ಪದವಿಯನ್ನು ಕೊಟ್ಟು ರಾಜ್ಯಭಾರ ಮಾಡುತ್ತಿದ್ದನು.

ಒಂದು ದಿನ ಅತಿಬಲನಿಗೆ ಬಿಳಿಕೂದಲು ಕಾಣಿಸಿಕೊಳ್ಳಲಾಗಿ ಮಹಾಬಲನಿಗೆ ಪಟ್ಟಕಟ್ಟಿ ಗುಣಧರ ಕೇವಲಿಗಳಲ್ಲಿ ತಪಸ್ಸನ್ನು ಕೈಗೊಳ್ಳುತ್ತಾನೆ. ಇತ್ತ ಮಹಾಬಲ ಸ್ವಯಂಬುದ್ಧ, ಮಹಾಮತಿ ಸಂಭಿನ್ನಮತಿ, ಶತಮತಿಗಳೆಂಬ ನಾಲ್ವರು ಮಂತ್ರಿಗಳನ್ನು ನೇಮಿಸಿಕೊಂಡು ನಿರಾತಂಕವಾಗಿರುವಾಗ ಒಂದು ದಿನ ಒಡ್ಡೋಲಗವನ್ನು ಏರ್ಪಡಿಸುತ್ತಾನೆ.

ಸ್ವಯಂಬುದ್ಧ ಸಂಸಾರಸಾಗರದಲ್ಲಿ ಮುಳುಗುವುದಕ್ಕಿಂತ ದಯೆ, ದಮೆ. ದಾನ, ತಪಸ್ಸು, ಶೀಲ ಮುಂತಾದವುಗಳ ಮೂಲಕ ಮುಕ್ತಿಯನ್ನು ಪಡೆದು ದೇವೇಂದ್ರನಾಗು ಎಂದು ಧರ್ಮ ವಿಷಯವನ್ನು ಕುರಿತು ಮಹಾಮತಿ ಲೋಕಾಯತಿಕವನ್ನು ಸಂಭಿನ್ನಮತಿ ಯೋಗಾಚಾರವನ್ನು, ಶತಮತಿ ಮಾಧ್ಯಮಿಕ ಮತಚಾರ ಜೀವವನ್ನು ಕುರಿತು ತಿಳಿಸುತ್ತಾರೆ.



''ಒಡಲೊಳಿ ಜೀವಮಿರ್ದುಗಡ ಸಂಚಿಸುತಿರ್ಪುದು ಪುಣ್ಯಪಾಪಮಂ
ಗಡ ಬಳಿಕತ್ತ ಬೇರೆ ಪೊಂದೊಡಲೊಳ್ ಗಡ ತಾನೆ ನಿಂದೊಡಂ
ಬಡುವುದು ಧರ್ಮಕರ್ಮ ಫಲಮಂ ಗಡ ಸತ್ತನೆ ಮತ್ತೆ ಪುಟ್ಟುವಂ
ಗಡ ಪುಸಿ ಕಾಣಡಂಬಮಿದು ಖೇಚರ ನೀನಿದನೆಂತು ನಂಬಿದೋ''.

ಜೀವವೆಲ್ಲಿದೆ, ಪಾಪಪುಣ್ಯವೆಲ್ಲಿದೆ, ಪರಲೋಕವೆಂಬುದು ಯಾವುದು ? ಸತ್ತವರು ಮತ್ತೆ ಹುಟ್ಟುತ್ತಾರೆನ್ನುವುದು ಸುಳ್ಳು. ನೀನಿದನೆಲ್ಲ ಎಂತು ನಂಬಿದೆ ಎಂದು ಪ್ರಶ್ನಿಸುತ್ತಾರೆ. ತಲೆಯ ಕೂದಲನ್ನು ಕಿತ್ತುಕೊಂಡು ದೇವಲೋಕದ ಸುಖಭೋಗಗಳನ್ನು ಅನುಭವಿಸುತ್ತೇನೆನ್ನುವವರ ಮಾತು ಕೇಳದಿರು. ಇಂದ್ರಿಯಾಸಕ್ತಿಯನ್ನು ಈಡೇರಿಸಿಕೊಂಡು ಬದುಕು ಎಂದು ಹೇಳುತ್ತಾರೆ. ಬುದ್ಧನನ್ನು ಗುರುವಾಗಿ ಮಾಡಿಕೊಂಡು ಮೂವತ್ತಾರು ಲಕ್ಷ ವರ್ಷಗಳಕಾಲ ರಾಜ್ಯವಾಳುತ್ತಾನೆ.

ಪಂಪ ಚಾರ್ವಾಕನೂ ಅಲ್ಲ, ನಾಸ್ತಿಕನೂ ಅಲ್ಲ. ಬದುಕಿನ ಬಗ್ಗೆ ಅಪಾರ ಪ್ರೀತಿಯಿರುವವನು. ಪಲಾಯನವಾದಿಯಲ್ಲ. ಸ್ವಯಂಬುದ್ಧೋಪದೇಶದ ಸಂದರ್ಭದಲ್ಲಿ ಮಹಾಮತಿ, ಸಂಭಿನ್ನಮತಿ ಶತಮತಿಗಳು ಹೇಳುವ ಮಣ್ಣಿನ ಹಾಡು,

'ಭೂಮಿಗೀತ' ಪಂಪನ ವಾಸ್ತವದ ಕುರುಹು. ಪಂಪನೇ ಇಲ್ಲಿಯ ಪ್ರಶ್ನೆಗಳಿಗೆ ಉತ್ತರಿಸಲಾಗದೆ ಪುನರಾವಲೋಕವನರಿದಂತೆ ಚಿತ್ರಿಸಿದ್ದಾನೆ.

ಸ್ವಯಂಬುದ್ಧ ಭಕ್ತಿಯಿಂದ ಚೈತ್ಯಾಲಯಗಳನ್ನು ಪ್ರವೇಶಿಸಿಕೊಂಡು ಬರುವಾಗ ಅರಿಂಜಯರೆಂಬ ಅವಧಿ ಜ್ಞಾನಿಗಳನ್ನು ಮಹಾಬಲನ ಮುಂದಿನ ಬದುಕನ್ನುಕುರಿತು ಹೇಳಿ ಎಂದು ಕೇಳುತ್ತಾನೆ. ಆಗ ಆ ಮುನಿಗಳು ಆತನು ಭವ್ಯವಾಗಿ ಆಸನ್ನ ಭವ್ಯವಾಗಿದ್ದಾನೆ ಎಂದು ಅವನ ಮುಂದಿನ ಭವಾವಳಿಯನ್ನು ಹೇಳುತ್ತಾರೆ.

**ಜಯವರ್ಮ**

ಜಂಬೂದ್ವೀಪದ ವಿದೇಹದಲ್ಲಿ ಗಂಧಿಳವೆನ್ನುವುದು ದೇಶ. ಅದನ್ನಾಳುತ್ತಿರುವವನು ಶ್ರೀಷೇಣನೆಂಬ ರಾಜ. ಅವನ ಪತ್ನಿ ಸೌಂದರಿ ಎಂಬುವಳು. ಜಯವರ್ಮ ಶ್ರೀವರ್ಮ ಎಂಬುವರು ಮಕ್ಕಳು. ಚಿಕ್ಕವನಾದವನು ಪರಿವಾರ ತಂದೆಗನುಗುಣವಾಗಿ ಬೆಳೆಯುತ್ತಾನೆ. ಶ್ರೀಷೇಣ ತಪಸ್ಸಿಗೆ ಹೊರಡುವಾಗ ಜಯವರ್ಮನಿಗೆ ಪಟ್ಟಕಟ್ಟದೆ ಶ್ರೀವರ್ಮನಿಗೆ ಪಟ್ಟ ಕಟ್ಟುತ್ತಾನೆ. ಇದರಿಂದ ಜಯವರ್ಮ ಸ್ವಯಂಪ್ರಭ ಗುರುಗಳಲ್ಲಿ ಜೈನದೀಕ್ಷೆಯನ್ನು ಕೈಗೊಳ್ಳುತ್ತಾನೆ. ತನ್ನ ತಲೆಯ ಕೂದಲನ್ನು ಕಿತ್ತುಕೊಂಡು ಅವುಗಳನ್ನು ಹುತ್ತದಲ್ಲಿ ಮಡಗಲೆಂದು ಕೋವಿಯಲ್ಲಿ ಕೈಯಿಟ್ಟು ಹಾವಿನಿಂದ ಕಚ್ಚಿಸಿಕೊಳ್ಳುತ್ತಾನೆ. ಆ ವೇಳೆಗೆ ಮಹೀಧರನೆಂಬ ವಿದ್ಯಾಧರನನ್ನು ಕಾಣುತ್ತಾನೆ. ಅವನಲ್ಲಿ ಮನಸ್ಸೂ ಸೂರೆಗೊಳ್ಳುತ್ತದೆ. ಅವನ ವಿಮಾನದಲ್ಲಿಯೇ ಮನಸ್ಸನ್ನು ನೆಡುತ್ತಾನೆ. ಹೀಗೆ ಅಲ್ಪಸುಖಕ್ಕೆ ಮನಸೋತು ಸಾವಿನಲ್ಲಿಯೂ ಆಸೆಯನ್ನು ಬಿಡದೆ ಅತಿಬಲನಿಗೆ ಮಹಾಬಲನಾಗಿ ಹುಟ್ಟಿದ್ದಾನೆ ಎಂದು ಹೇಳುತ್ತಾನೆ.

ಆತನಿಗೆ ಉಳಿದಿರುವುದು ಇನ್ನು ಒಂದು ತಿಂಗಳು ಆಯುಷ್ಯ. ಮುಂದೆ ಮಹಾಬಲ ಲಲಿತಾಂಗನಾಗಿ, ವಜ್ರಜಂಘನಾಗಿ, ಶ್ರೀಧರದೇವನಾಗಿ, ವಜ್ರನಾಭಿಯಾಗಿ ನಂತರ ಆದಿದೇವನಾಗುತ್ತಾನೆ ಎಂದು ಹೇಳುತ್ತಾನೆ. ನೀನು ಮೂರನೆಯ ಜನ್ಮದಲ್ಲಿ ಸಂಸಾರದಿಂದ ಬಿಡುಗಡೆ ಹೊಂದುತ್ತೀಯ ಎಂದು ತಿಳಿಸುತ್ತಾರೆ.

ವಿದ್ಯಾಧರ ರಾಜ್ಯ ವೈಭವದಲ್ಲಿದ್ದಾಗ ತಾನು ಬಯಸಿ ಬಯಸಿ ಪಡೆದ ಭೋಗ ಸುಖಗಳನ್ನು ಅನುಭವಿಸುತ್ತ ಅದರಲ್ಲಿಯೇ ಮೈಮರೆಯುತ್ತಿದ್ದನು. ಸ್ವಯಂಬುದ್ಧನ ಉಪದೇಶದ ಮಾತುಗಳು, ಉಳಿದ ಮೂವರು ಮಂತ್ರಿಯ ಮಾತುಗಳನ್ನು ಮೀರಿ ಮಹಾಬಲನ ಮನಸ್ಸನ್ನು ಆಕ್ರಮಿಸಿದರೂ ಭೋಗಲಾಲಸೆ ಬಿಡಲಿಲ್ಲ. ತಿಂಗಳು ಆಯಸ್ಸಿರುವಾಗ ಸ್ವಯಂ ಬುದ್ಧನ ಮಾತು ಹಿಡಿಸಿತು. ಆದರೆ ಸಾಯುವಾಗ ಮನಸ್ಸಿನಲ್ಲಿ ಹೀಗಂದುಕೊಳ್ಳುತ್ತಾನೆ,

''ಮಿಡಿದನಿತು ಬೇಗದಿಂದಲೆ
ಪೊಡಲನಿದಂ ಪೊಗೆ ನೂಂಕಿ ಚೆಲ್ವಪೊಡಲಂ
ಪಡೆದಪೆಯಾಗಳೆ ಬಿಲ್ವಿಡಿ
ಮಿಡಿದು ಶರಣ್ಬುಗು ಜಿನೇಂದ್ರಪದ ಸರಸಿಜಮಂ''.

ನಾಶ ಹೊಂದುವ ದೇಹವನ್ನು ಬೇಗ ನಾಶಗೊಳಿಸಿ ಸುಂದರವಾದ ಜಿನೇಂದ್ರ ಪದವಿಗೆ ಶರಣಹೊಂದುವ ದೇಹವನ್ನು ಪಡೆಯುವಾಸೆ ಮೂಡುತ್ತದೆ. ಮುಂದೆ ಶ್ರೀಪ್ರಭ ವಿಮಾನದಲ್ಲಿ ಲಲಿತಾಂಗದೇವನಾಗಿ ಹುಟ್ಟುತ್ತಾನೆ.

## ಲಲಿತಾಂಗ

ಲಲಿತಾಂಗ ನಿದ್ರೆಯಿಂದ ಎಚ್ಚೆತ್ತವನಂತೆ ಈಶಾನಕಲ್ಪದಲ್ಲಿ ಹುಟ್ಟಿದಾಗ ದೇವಲೋಕದ ದುಂಬಿಗಳು ಹೂಮಳೆಗಳೆರಗಿದವು. ತಂಪಾದ ಸುವಾಸನೆಯ ಗಾಳಿ ಬೀಸಿತು. ಹೂಬಳ್ಳಿಗಳಿಗೆರಗುವ ದುಂಬಿಗಳು, ದೇವಲೋಕದ ದೇವತೆಗಳು ಬಂದು ಸೇರಿದರು. ಮಹತ್ತರ ದೇವಿಯರು ಬಂದು ನಮಸ್ಕರಿಸಿದರು.

''ಇದು ನಿಜ ಪೂರ್ವ ಪುಣ್ಯಫಲದಿಂ ದೊರೆಕೊಂಡ ವಿಮಾನಮಾ ವಿಮಾ
ನದೊಳನುಬಂಧಿಸಿರ್ದುದಿದು ದೇವನಿಕಾಯಮಿದೀ ತದ್ವಂಘ್ರಿ ಪ
ದ್ಮದ ಬಳಸಿರ್ಪ ದಿವ್ಯ ಗಣಿಕಾಜನಮಿಂದಿದನಾಳ್ದು ದೇವ ರಾ
ಗದೊಳಿರು ನೀನುಮಿಲ್ಲಿ ಲಲಿತಾಂಗತೆಯಿಂ ಲಲಿತಾಂಗದೇವನಯ್''.

ಪೂರ್ವ ಪುಣ್ಯದ ಫಲದಿಂದ ದೊರೆತ ದೇಹ ಸುಂದರವಾಗಿರುವಂತೆ ಅತ್ಯಂತ ಸುಂದರವಾಗಿದೆ. ಇಂತಹ ದೇಹವನ್ನು ಪಡೆದು ಸುಖವನ್ನು ಅನುಭವಿಸುತ್ತ ಕಾಲವನ್ನು ಕಳೆಯುತ್ತಿರುತ್ತಾನೆ. ಅದನ್ನು ಕುರಿತು ಪಂಪ ಹೀಗೆ ಹೇಳುತ್ತಾನೆ.

''ಇದು ಸುಖದೊಂದು ತುತ್ತತುದಿ ರಾಗದ ಮೊತ್ತಮೊದಲ್ ನಿರಂತರಾ
ಭ್ಯುದಯದ ಸಾಗರಂ ವಿಭದದಾಗರಮಾ ದಿವಿಜೇಂದ್ರ ರುಂದ್ರ ಲೋ
ಕದೊಳವಿದೊಂದೆ ಸಾರಮಿದು ಜೈನ ಪದಾಬ್ಜ ಪರ ಪ್ರಸಾದದಾ
ದುದು ನಿನಗಪ್ಪ ಕಾರಣದಿನೀಗಳೆ ಪೂಜಿಸು ಚೈತ್ಯರಾಜಿಯಂ''.

ಸುಖಸಾಗರದಲ್ಲಿ ತೇಲಿಹೋದಂತೆ, ಅನುರಾಗದ ಮೊದಲ ಕ್ಷಣಗಳಂತೆ ಕಳೆದ ದಿನಗಳನ್ನು ನೆನಪಿಸುತ್ತ ಈಗ ಜೈನ ಯತಿಗಳನ್ನು ಪೂಜಿಸು ಎನ್ನುವುದರ ಮೂಲಕ ಭೋಗ ಯೋಗದ ಕಲ್ಪನೆಯನ್ನು ಒತ್ತಟ್ಟಿಗೆ ತರುತ್ತಾನೆ. ಹೀಗೆ ಲಲಿತಾಂಗ ಭೋಗ ಜೀವನದಲ್ಲಿ ನಾಲ್ವರು ಪತ್ನಿಯರಾದ ಸ್ವಯಂಪ್ರಭೆ, ಕನಕಲತೆ, ಕನಕಮಾಳೆ, ವಿದ್ಯುಲ್ಲತೆಯರೊಂದಿಗೆ ಕಾಲ ಕಳೆಯುತ್ತಿರುತ್ತಾನೆ. ಇವರಲ್ಲಿ ಸ್ವಯಂಪ್ರಭೆಯಲ್ಲಿ ಅನುರಾಗ ಹೆಚ್ಚು. ಸ್ವಯಂಪ್ರಭೆಯ ವರ್ಣನೆಯನ್ನು ಪಂಪನ ಮಾತುಗಳಲ್ಲಿ

ನೋಡುವುದಾದರೆ,

"ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾ
ಳ್ಮೊದಲದು ಚಿತ್ತಜಂಗೆ ಕುಲದೈವಮದಂಗಜ ಚಕ್ರವರ್ತಿಗೆ
ತ್ತಿದ ಪೊಸವಟ್ಟದುಂತದು ಮನೋಜನ ಕೈಪಿಡಿಯೆಂದು ಮಾಣ್ಡೆ
ಸುದತಿಯ ರೂಪನಿನ್ ಪೆಳಿತನೆಂದೊಡೆ ಚಿಃ
ಕರಮೆಗ್ಗಣಗನೇ".(1-40)

ಎಂದು ಹೇಳುವುದರ ಮೂಲಕ ಅದು ಸುಖದ ಮುದ್ದೆ, ಪುಣ್ಯದ ಬೆಳಕು, ಮನ್ಮಥನಿಗೆ ಕುಲದೈವ ಚಕ್ರವರ್ತಿಗೆ ಎತ್ತಿದ ಆರತಿ ಮನ್ಮಥನ ಕೈದೀವಿಗೆ ಎನ್ನುವಂತಿರುವ ಸ್ವಯಂಪ್ರಭೆಯನ್ನು ತಿರಸ್ಕರಿಸಿದರೆ ಹೆಡ್ಡನಾಗನೇ ಎಂದು ಹೇಳುತ್ತಾನೆ. ಸ್ವಯಂಪ್ರಭೆಯ ರೂಪ ಎಂತಹವರನ್ನು ಆಕರ್ಷಿಸುತ್ತದೆ. ಹೀಗೆ ಸ್ವಯಂಪ್ರಭೆಯೊಂದಿಗೆ ಜೀವನ ಸಾಗಿದುದೇ ತಿಳಿಯುವುದಿಲ್ಲ. ಉಳಿದಿರುವುದು ಆರು ತಿಂಗಳು ಮಾತ್ರ.

ಪಾರಿಜಾತದ, ಮಂದಾರದ, ರುದ್ರಾಕ್ಷಿಯ ಮಾಲೆಗಳು ಬಾಡುತ್ತವೆ. ಕಣ್ಣಿಗೆ ಸೌಂದರ್ಯ ಹಿಡಿಸುವುದಿಲ್ಲ. ಮನಸ್ಸಿನಲ್ಲಿ ಉದ್ವೇಗ ಉಂಟಾಗುತ್ತಿದೆ. ತನ್ನ ಅವಸಾನ ಕಾಲ ಸಮೀಪಿಸಿತೆಂದು ತಿಳಿಯುತ್ತಾನೆ. ತನ್ನ ಸ್ಥಾನ ತೀವ್ರತೆಯನ್ನು ಅನುಭವಿಸುತ್ತಾನೆ. ಕಲ್ಪವೃಕ್ಷ, ನಂದನವನಗಳು, ದೇವಾಲಯಗಳು, ಅಲ್ಲಿನ ಪರಿವಾರ ಎಲ್ಲವೂ ನನ್ನನ್ನು ಉಪೇಕ್ಷಿಸುತ್ತಿದ್ದಾರೆಂದು ಭಾವಿಸುತ್ತಾನೆ. ಸಂತೋಷವನ್ನು, ಅಮೃತವನ್ನು ಅನುಭವಿಸುತ್ತಿರುವ ನನ್ನನ್ನು ದೂರ ಮಾಡುತ್ತಿರುವುದರಿಂದ, ನಮ್ಮಿಬ್ಬರ ಭೋಗ ಜೀವನಕ್ಕೆ ತಡೆಯೊಡ್ಡುವ ಅಂತಕನನ್ನು ತಡೆಯಲು ಸಾಧ್ಯವಿಲ್ಲವೇ ಎಂದು ಸ್ವಯಂಪ್ರಭೆಯನ್ನು ಪ್ರಶ್ನಿಸುತ್ತಾನೆ. ಆಗ ಲಲಿತಾಂಗನನ್ನು ಸಮಾಧಾನ ಪಡಿಸುತ್ತಾರೆ.

"ನಿನಗೋರ್ವಂಗಲ್ಲವಸ್ಥಾಂತರಮಮರಜನಕ್ಕೆಲ್ಲಮೀ ಪಾಂಗೆ ಕಾರು
ಣ್ಯ ನಿನಾದಂ ನಿನ್ನವಾದಂ ನಗಿಸುಗುಮೆಳೆದುಯ್ದಂತಕಂಗಿಲ್ಲ ದೇವಾಂ
ಗನೆಯರ್ ಮಾಂಪರೇ ಪೇಳ್ ಜನನಮೃತಿ ಜರಾತಂಕ ಶೋಕಾಗ್ನಿಯಿಂ
ವನುಮೀ ಸಂಸಾರದೊಳ್ ಬೇಯನದನೊಳನೆ ಶರಣ್
ಧರ್ಮದಿಂದೊಂದು ಮುಂಟೇ". (47)

ಸಾವು ಎನ್ನುವುದು ನಿನಗೊಬ್ಬನಿಗಲ್ಲ ಇಡೀ ದೇವಸಮೂಹಕ್ಕೆ ಬರುವಂತಹುದು. ನಿನ್ನನ್ನುಳಿಸಲು ದೇವತೆಗಳ ಸಮೂಹಕ್ಕೂ ಸಾಧ್ಯವಿಲ್ಲ. ಜನನ, ಮರಣ, ಶೋಕ ಇವು ಸಂಸಾರದಲ್ಲಿ ಬರುವಂತಹವು. ಅವುಗಳನ್ನು ಸಹಿಸುವುದೇ ಧರ್ಮ ಎಂದು ಹೇಳುತ್ತಾರೆ. ಆರು ತಿಂಗಳ ನಂತರ ಜಳಧರ ರೂಪದಿಂದ ಅದೃಶ್ಯನಾಗುತ್ತಾನೆ.

**ವಜ್ರಜಂಘ**

ಉತ್ಪಳಬೇಟ ಪಟ್ಟಣ ಅದನ್ನು ಆಳುತ್ತಿರುವವನು ವಜ್ರಬಾಹು ಎನ್ನುವ ಅರಸ. ಆತನ ಪತ್ನಿ ವಸುಂಧರೆ. ಇವರ ಹಿರಿಯ ಮಗ ವಜ್ರಜಂಘ. ಸುಂದರನಾದ ವಜ್ರಜಂಘ ದೇವಲೋಕದ ಸೌಂದರ್ಯವನ್ನು ಮೀರಿಸಿದಂತೆ ರೂಪು ಯೌವ್ವನ ತುಂಬಿಕೊಳ್ಳುತ್ತದೆ. ಹೀಗಿರುವಾಗ ಹಿಂದಿನ ಜನ್ಮದ ಸ್ವಯಂಪ್ರಭೆಯ ನೆನಪು ಮರುಕಳಿಸುತ್ತದೆ.

''ಕುಡುಮಂಚಂ ಮಸೆದನ್ನರಪ್ಪಪಲರೊಳ್ವೆಂಡಿರ್ ಮನಂಗೊಂಡು ಬಂ
ದೊಡಮಾ ರಾಜಕುಮಾರನೊಲ್ಲನೆ ದಳನ್ಮಂದಾರಿಕಾ ಮಾಲೆಯಾಳ್
ಕಡುಗಂಪಂ ಸವಿದೊಂದು ತುಂಬಿ ಪಸಿವಿಂ ಮೆಳ್ವಟ್ಟು ಬಂಡುಣ್ಣದಿ
ರ್ಪೊಡಮರ್ಕುಂ ಬೀಸಿಕೆಂತುಮನ್ಯ ಕುಸುಮಾವೋದಕ್ಕೆ ಮೆಯ್ದರ್ಕುವೇ''.
(50)

ಮನಸ್ಸನ್ನು ಸುಂದರವಾದ ನೆನಪಿರುವಾಗ ಬೇರೆ ಹೆಣ್ಣುಗಳನ್ನು ನೋಡುವಾಗ ಅವರನ್ನು ಒಲ್ಲದೆ, ದುಂಬಿಯೊಂದು ತಾನು ಪ್ರತಿನಿತ್ಯ ಜೇನನ್ನು ಕುಡಿಯುವ ಹೂವನ್ನು ಬಿಟ್ಟು ಬೇರೆ ಹೂವಿನಲ್ಲಿ ಜೇನನ್ನು ಕುಡಿಯದಂತೆ ಆ ಹೂವಿಗೇ ಮನಸೋಲುವಂತೆ ವಜ್ರಜಂಘ ಸ್ವಯಂಪ್ರಭೆಗೆ ಮನಸೋತ ಎನ್ನುವಾಗ ಅವರಿಬ್ಬರ ನಡುವಿನ ಜೀವನ ಎಂತಹ ಶ್ರೇಷ್ಠವಾದುದು ಎನ್ನುವುದರ ಅರಿವಾಗುತ್ತದೆ.

ಇತ್ತ ಲಲಿತಾಂಗನನ್ನು ನೆನಪಿಸಿಕೊಂಡು ಸ್ವಯಂಪ್ರಭೆ ಶೋಕಾರ್ತಳಾಗುತ್ತಾಳೆ. ನೋಡುತ್ತಿರುವಾಗಲೇ ನಿನ್ನ ದೇಹ ಕರಗಿ ಹೋಗಿದೆ. ಹೀಗೆ ಶೋಕದಿಂದ ನನ್ನ ದೇಹ ಕರಗುತ್ತಿದೆ. ನೀನೆಲ್ಲಿರುವೆ ಎಂದು ಶೋಕಪಡುತ್ತಾಳೆ. ಅವನನ್ನು ನೆನಪಿಸಿಕೊಂಡು ಪ್ರಲಾಪಿಸುತ್ತಾಳೆ.

''ಮದನನ ಕೈದುವೆಲ್ಲಿದನನಂಗನ ಕೈಪೊಡೆಯೆಲ್ಲಿದಂ ವಿಳಾ
ಸದ ಕಣಿಯೆಲ್ಲಿದಂ ಚದುರ ಪುಟ್ಟಿದನೆಲ್ಲಿದಂ ವಿನೋ
ದದ ಮೊದಲೆಲ್ಲಿದಂ ಸೊಬಗಿನಾಗರವೆಲ್ಲದನಿಚ್ಛೆಯಾಣ್ಮನೆ
ಲ್ಲಿದನೆರ್ದೆಯಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ''. (52)

ಮನ್ಮಥನ ಆಯುಧ ಎಲ್ಲಿದೆ. ವಿಳಾಸದ ಗಿಣಿಯಲ್ಲಿದ್ದಾನೆ. ಎಲ್ಲಿ ಹುಟ್ಟಿದ್ದಾನೆ. ಹಾಸ್ಯಕ್ಕೆ ಮೂಲಕಾರಣನಾದವನೆಲ್ಲ, ಸೊಗಸಿನ ಆಗರವಾದವನೆಲ್ಲಿ ನನ್ನ ಹೃದಯದರಸ ಲಲಿತಾಂಗ ಎಲ್ಲಿ ಎಂದು ಸ್ವಯಂಪ್ರಭೆ ಪ್ರಲಾಪಿಸುತ್ತಾಳೆ. ಆಗ ಮಹತ್ತರ ದೇವಿಯರು ಬಂದು ಜಿನಪತಿಯನ್ನು ಪೂಜಿಸಿದರೆ ಮುಂದಿನ ಜನ್ಮದಲ್ಲಿ

ಲಲಿತಾಂಗನನ್ನು ಪಡೆಯುವೆ ಎಂದಾಗ ಹಾಗೆಯೇ ಮಾಡುತ್ತಾಳೆ. ಮುಂದೆ ಪುಂಡರೀಕಿಣಿ ಪಟ್ಟಣವನ್ನಾಳುವ ವಜ್ರದಂತ ಲಕ್ಷ್ಮೀಮತಿ ದೇವಿಗೆ ಶ್ರೀಮತಿ ಎನ್ನುವ ಮಗಳಾಗಿ ಹುಟ್ಟಿ ಯೌವ್ವನ ಮತ್ತು ಪಾಂಡಿತ್ಯವನ್ನು ಪಡೆಯುತ್ತಾಳೆ. ಅವಳ ರೂಪವನ್ನು ಕುರಿತು ಪಂಪ

''ಅಲರ್ವ ಪದಕ್ಕೆ ಬಂದಲೆವ ತಂಬೆಲರಿಲ್ಲದೆ ಮಾಣ್ದ ಮಲ್ಲಿಕೋ
ಜ್ವಲ ಮದಾಳಿಯುಲ್ದಿನಿಸಂ ತಡೆದಂತರಸಿರ್ದ ಪದ್ಮಕು
ಟ್ಮಲ ವಿಭವಕ್ಕಮೇಂ ದೊರೆಗೆ ವಂದುದೋ ಯೌವನದೇಳ್ಗೆ ಕನ್ನೆಯಾ''
(53)

ಹೂವಿನ ಜೇನಿಗೆ ಅಲೆಯುವ ದುಂಬಿರಬೇಕು. ಮಲ್ಲಿಗೆ ಹೊಸಕಂಪನ್ನು ಬೀರುತ್ತಿರುವಾಗ ಅದನ್ನು ಸೇವಿಸಿ ನಲಿವ ಮದಿಸಿದ ದುಂಬಿಯಿರಬೇಕು. ರೂಪವತಿಯಾದವಳಿಗೆ ರೂಪವಂತ ಪತಿಯಿರಬೇಕು ಹೊಂದಾಣಿಕೆ ಇಲ್ಲದಿದ್ದರೆ ನಿಷ್ಪ್ರಯೋಜಕ ಎಂದು ಹೇಳುವುದರ ಮೂಲಕ ಪಂಪ ರಸಿಕತನದ ತುತ್ತತುದಿಗೆ ಕೊಂಡೊಯ್ಯುತ್ತಾನೆ.

ಒಂದು ದಿನ ಅಂತಃಪುರದಲ್ಲಿ ಮಲಗಿರುವಾಗ ನಿದ್ರೆಯಲ್ಲಿ ತಕ್ಷಣ ಎಚ್ಚರವಾಗಿ ಯಶೋಧರ ಗುರುಗಳ ಕೇವಲ ಜ್ಞಾನ ಉತ್ಸವಕ್ಕೆ ನೆರೆದ ದೇವಸಮೂಹವನ್ನು ನೋಡುತ್ತಾಳೆ. ಹಿಂದಿನ ನೆನಪಾಗಿ ದೇವಲೋಕದ ಲಲಿತಾಂಗದೇವನನ್ನು ನೆನೆದು ಮೂರ್ಛೆ ಹೋಗುತ್ತಾಳೆ. ಪರಿಚಾರಿಕೆಯರು ಜ್ಞಾನ ಬರಿಸುತ್ತಾರೆ. ಮನದಲ್ಲಿ ದುಗುಡ ತುಂಬಿಕೊಂಡವಳಾಗಿ ಯಾರೊಂದಿಗೂ ಹೆಚ್ಚು ಮಾತನಾಡದೆ ಬದುಕುತ್ತಾಳೆ. ವಜ್ರದಂತ ಲಕ್ಷ್ಮೀಮತಿಗೆ ಇದರಿಂದ ಭಯವಾಗುತ್ತದೆ. ಕಾರಣವನ್ನು ಕೇಳಿಸಿದರೆ ಕಣ್ಣೀರಲ್ಲದೆ ಮತ್ತೇನನ್ನೂ ಹೇಳಲಾರಳು. ಆಗ ಅವಳ ಸೇವೆಗೆ ಪಂಡಿತೆಯೆಂಬ ದಾಸಿಯನ್ನು ನೇಮಿಸುತ್ತಾರೆ. ಇತ್ತ ಕಡೆ ಯಶೋಧರ ಮುನಿಗೆ ಆಯುಧಾಗಾರದೊಳ್ ಚಕ್ರರತ್ನ ಹುಟ್ಟಲಾಗಿ ರಾಜ ಜಿನಪತಿಗೆ ಪೂಜೆಯನ್ನು ಮಾಡಿ ದಿಗ್ವಿಜಯಕ್ಕೆ ಹೊರಡುತ್ತಾನೆ.

ಪಂಡಿತೆ ಶ್ರೀಮತಿಯನ್ನು ಉದ್ಯಾನವನದಲ್ಲಿ ಕರೆದೊಯ್ದು ಅವಳ ಮನದಾಳದಲ್ಲಿನ ಕತೆಯನ್ನು ಹೆಕ್ಕಿ ತೆಗೆಯುತ್ತಾಳೆ. ಹಿಂದಿನ ಜನ್ಮದಲ್ಲಿ ಸ್ವಯಂಪ್ರಭೆಯಾಗಿದ್ದುದನ್ನು, ಲಲಿತಾಂಗನ ಸಾವಿನ ನಂತರ ತಾನಿಲ್ಲಿ ಹುಟ್ಟಿರುವುದನ್ನು ಹೇಳುತ್ತಾಳೆ. ನನ್ನ ಹೃದಯದಲ್ಲಿ ಲಲಿತಾಂಗನ ಸೌಂದರ್ಯ ಶಾಸನ ಬರೆದಂತಿದೆ. ಅವನ ಪಟವನ್ನಿಟ್ಟುಕೊಂಡು ಕಾಲ ಕಳೆಯುತ್ತೇನೆ ಎನ್ನುತ್ತಾಳೆ. ಆಗ ಪಂಡಿತೆ 'ನಿನ್ನಿನಿಯನನ್ನು ಕೂಡುವೆ ಚಿಂತಿಸದಿರ್' ಎಂದು ಆ ಪಟವನ್ನು ತಂದು ಜಿನಾಲಯದಲ್ಲಿ ತೂಗು ಹಾಕಿ ಕಾರ್ಯಸಿದ್ಧಿಗೆ ತೊಡಗುತ್ತಾಳೆ.

ವಜ್ರದಂತ ಭೂಮಂಡಲವನ್ನು ಗೆದ್ದು ರಾಜಧಾನಿಗೆ ಬಂದು ಮಗಳಿಗೆ ನಾಳೆ ನಾಡಿದ್ದರಲ್ಲಿ ನಿನ್ನ ಪ್ರಾಣೇಶನಲ್ಲಿ ಕೂಡುವೆ ಎಂದು ಹಿಂದಿನ ಜನ್ಮದ ಕತೆಯನ್ನು ಆವನಿರುವ ಸ್ಥಳವಾದ ಉತ್ಪಳಖೇಟವನ್ನು ಅಲ್ಲಿನ ರಾಜ ರಾಣಿಯರು ತನ್ನ ತಂಗಿ ಮೈದುನನೆಂದು ಪರಿಚಯಿಸುತ್ತಾನೆ. ಪಂಡಿತೆ ಪಟವನ್ನು ಜಿನಾಲಯದ ಮುಂದೆ ತೂಗು ಹಾಕಿದಾಗ ಓರ್ವ ರಾಜಕುಮಾರ ಸುಂದರನೂ, ಮನಜಿನಾಕಾರನೂ ಆದ ಸುಕವಿಜನಮನೋ ಮಾನಸೋತ್ತಂಸ ಹಂಸಂ' ನಂತಿರುವವನಾದವನೂ ಹಿಂದಿನ ಜನ್ಮದ ನೆನಪಿನಂತೆ, ಇರುಳು ಕಂಡ ಕನಸನ್ನು ನೆನೆಯುವಂತೆ ನೋಡುತ್ತಾರೆ. ಇದು ಸ್ವಯಂಪ್ರಭೆಯ ರೂಪವೇ ಎನ್ನುವುದರಲ್ಲಿ ಸಂಶಯವಿಲ್ಲೆಂದರಿತ 'ಹಾ, ಸ್ವಯಂಪ್ರಭೆ! ಎಂದು ಮೂರ್ಛೆ ಹೋಗುತ್ತಾನೆ.

ಪಂಡಿತೆಯಿಂದ ವಿಷಯ ತಿಳಿದು ಸ್ವಯಂಪ್ರಭೆಯೇ ಶ್ರೀಮತಿಯಾಗಿ ಹುಟ್ಟಿದ್ದಾಳೆ. ಆಕೆ ನಿನ್ನನ್ನು ಪಟದ ರೂಪದಲ್ಲಿ ಬರೆದು ಕಳುಹಿಸಿದ್ದಾಳೆ. ಅದನ್ನು ತಂದು ಇಲ್ಲಿರಿಸಿದ್ದೇನೆ ಎನ್ನುತ್ತಾಳೆ. ಪಂಡಿತೆಯ ಮೂಲಕ ಇಬ್ಬರಲ್ಲಿಯೂ ಅನುರಾಗ ಮೂಡುತ್ತದೆ. ವಜ್ರಜಂಘ ಶ್ರೀಮತಿಯರಿಗೆ ವಿವಾಹ ನಡೆಯುತ್ತದೆ. ಇವರಿಬ್ಬರ ಸಂಸಾರ ಶೃಂಗಾರ ರಸಾಬ್ಧಿಯಲ್ಲಿ ಅದ್ದಿದಂತೆ ಕಾಣುತ್ತಿರುತ್ತದೆ.

ವಜ್ರಬಾಹು ಮಳೆಯ ಮೋಡ ಕರಗಿಹೋದುದನ್ನು ಕಂಡು ವಜ್ರಜಂಘನಿಗೆ ಪಟ್ಟ ಕಟ್ಟಿ ತಪಸ್ಸಿಗೆ ಹೊರಡುತ್ತಾನೆ. ಅತ್ತ ವಜ್ರದಂತನೂ ತಪಸ್ಸಿಗೆ ತೆರಳುತ್ತಾನೆ. ಪುಂಡರೀಕ ರಾಜ್ಯಭಾರವನ್ನು ವಹಿಸಿಕೊಳ್ಳುತ್ತಾನೆ. ಪಂಡರೀಕನಿಗೆ ಕಪ್ಪ ಕೊಡದೆ ಉಳಿದ ರಾಜರುಗಳು ದಂಡೆತ್ತಿ ಬರುವ ವಿಷಯ ತಿಳಿದು ವಜ್ರಜಂಘನಿಗೆ ವಿಷಯ ತಿಳಿಸುತ್ತಾಳೆ. ವಜ್ರಜಂಘ ಬರುತ್ತಿರುವಾಗ ಧರ್ಮವರ ನಾಗಸೇನರೆಂಬ ಗಗನಾ ಚಾರಣರಿಗೆ ದಾನ ದಕ್ಷಿಣೆಗಳನ್ನೀಡುತ್ತಾರೆ. ತನ್ನ ಮಂತ್ರಿಗಳಾದ ಮತಿವರ ಆಕಂಪನ, ಆನಂದ ಧನಮಿತ್ರರ ಭವಾವಳಿಯ ಬಗ್ಗೆ ಕೇಳುತ್ತಾನೆ. ಮತಿವರ ಹಿಂದಿನ ಐದನೆಯ ಜನ್ಮದಲ್ಲಿ ಅತಿಲೋಭಗ್ರಸ್ತನಾಗಿ ದುಃಖದಲ್ಲಿ ಬೆಂದು ತನ್ನ ಧನವನ್ನು ಅಡಗಿಸಿದ್ದ ಅರಣ್ಯದಲ್ಲಿ ಹುಲಿಯಾಗಿ ಹುಟ್ಟುತ್ತಾನೆ. ಪ್ರೀತಿವರ್ಧನ ಎಂಬುವವನು ಆ ಹಣವನ್ನು ಬಳಸಿಕೊಂಡು ಬೀಡು ಬಿಡುತ್ತಾನೆ. ಪಿಹಿತಸ್ರವ ಎನ್ನುವ ಮುನಿ ಬೀಡಿನಲ್ಲಿ ಭಿಕ್ಷೆ ಬೇಡಲು ಬಂದು ಹಣದ ಬಗ್ಗೆ ತಿಳಿಯುತ್ತಾನೆ. ಆಗ ಆ ಪರ್ವತದಲ್ಲಿನ ಶಾರ್ದೂಲ ಹಿಂದಿನ ನೆನಪಗಿ ಮುನಿಗಳಿಂದ ಪ್ರೀತಿವರ್ಧನನನ್ನು ವಿರೋಧಿಸುವುದನ್ನು ತಿಳಿದುಕೊಳ್ಳುತ್ತದೆ. ಪ್ರೀತಿವರ್ಧನ ಶಾರ್ದೂಲನ ಹಿಂದಿನ ಜನ್ಮವನ್ನು ತಿಳಿಯುವಾಗ ಅದರ ಆಯಸ್ಸು ಮುಗಿಯುತ್ತದೆ. ಅಲ್ಲಿರುವ ಹಣವನ್ನು ತೋರಿದಾಗ ಅರಸನಿಗೆ ಶಾರ್ದೂಲನಿಗೆ ಅಂತ್ಯ ಸಂಸ್ಕಾರ ಮಾಡಿಸುತ್ತಾನೆ. ಮುಂದೆ ದಿವಾಕರ ಪ್ರಭನಾಗಿದ್ದಾನೆ. ಪ್ರೀತಿವರ್ಧನನ ಸೇನಾನಾಯಕ ಮಂತ್ರಿ, ಪುರೋಹಿತರು ಪ್ರಭಾಕರ, ಕನಕಪ್ರಭ, ಪ್ರಭಂಜನ ಎಂದು ಜನ್ಮ ಪಡೆಯುತ್ತಾರೆ. ಶಾರ್ದೂಲ

ರೂಪದಲ್ಲಿದ್ದವನು ನಾಲ್ಕನೆಯವನು. ಲಲಿತಾಂಗದೇವನೇ ವಜ್ರಜಂಘನಾಗಿರುವೆ, ಸ್ವಯಂಪ್ರಭೆ ಶ್ರೀಮತಿಯಾಗಿದ್ದಾಳೆ. ಶಾರ್ದೂಲ ರೂಪದವನು ನಿನಗೆ ಮಂತ್ರಿ ಮತಿವರನಾಗಿ, ಪ್ರಭಾಕರ ಸೇನಾನಾಯಕ ಆಕಂಪನಾದ, ಕನಕಪ್ರಭ ಪುರೋಹಿತ ಆನಂದನಾದ, ಪ್ರಭಂಜನ ಧನಮಿತ್ರನಾದ ನಿಮ್ಮೆಲ್ಲರ ಸ್ನೇಹ ಹಿರಿದಾದುದು ಎಂದು ಹೇಳುತ್ತಾರೆ. ಈ ಜನ್ಮದ ಮುಂದಿನ ಎಂಟನೆಯ ಜನ್ಮದಲ್ಲಿ ನೀನು ಆದಿ ತೀರ್ಥಂಕರನಾಗಿ, ಮಂತ್ರಿ ಮತಿದರ ಭರತೇಶ್ವರನಾಗಿ, ಸೇನಾನಾಯಕ ಬಾಹುಬಲಿಯಾಗಿ ಪುರೋಹಿತನಾದ ಆನಂದ-ವೃಷಭಸೇನನಾಗಿ, ಧನಮಿತ್ರ ವೀರ್ಯನೆಂಬುವನಾಗಿ ಹುಟ್ಟುತ್ತಾರೆ ಎಂದು ತಿಳಿಸುತ್ತಾರೆ.

ಹೀಗೆ ಹಲವು ದಿನಗಳು ಕಳೆದಿವೆ. ಒಂದು ರಾತ್ರಿ ವಜ್ರಜಂಘ ಶ್ರೀಮತಿಯರು ಶಯನಗೃಹದಲ್ಲಿ ಮಲಗುವಾಗ ಕವಾಟಗಳನ್ನು ತೆರೆಯದೆ ಸೂರ್ಯಕಾಂತದ ಧೂಪವನ್ನಾಕಿ ಮಲಗಿದ್ದಾರೆ. ಆ ಸೂರ್ಯಕಾಂತ ಧೂಪದ ಹೊಗೆ ಹೇಗೆ ಹಬ್ಬಿದೆ ಎಂಬುದನ್ನು ಕವಿ ಕೆಳಗಿನಂತೆ ವರ್ಣಿಸುತ್ತಾರೆ.

''ಮೊದಲೊಳ್ ನೀಳ್ದುಪೊದಮ್ದಿ ಪರ್ಬಿ ಪರಪಂ ಕೈಕೊಂಡು ಮುಂದೈಸಿ ಮಾ
ಣದೆ ತನ್ನಂದದೊಳೇಳ್ಗೆಗುಂದದೆ ನಿರುದ್ದೋಚ್ಛಾಸಸಮಪ್ಪನ್ನೆಗಂ
ಪುದಿದಾ ದಂಪತಿಯಂ ಪುದುಂಗೊಳಿಸಿ ಲೋಕಾಶ್ಚರ್ಯಮಂ ಮಾಡಿ ಕೊಂ
ದುದು ಕೃಷ್ಣಾಗರು ಧೂಪ ಧೂಮ ನಿವಹಂ ಕೃಷ್ಟೋರಗಂ ಕೊಲ್ವವೋಲ್''.

ಧೂಪದ ಹೊಗೆ ನೀಳವಾಗಿ ಮೇಲೆದ್ದು ನಿಧಾನವಾಗಿ ಹರಡಿ ದಟ್ಟವಾಗುತ್ತಾ ತನ್ನ ಅಂದಕ್ಕೆ ಎದೆಗುಂದದೆ ದಂಪತಿಗಳಿಗೆ ಹೊಸ ಆಶ್ಚರ್ಯವನ್ನು ಉಂಟು ಮಾಡಿ ಕಪ್ಪು ಧೂಪ ಕಪ್ಪು ಹಾವಾಗಿ (ಕಾಳೋರಗವಾಗಿ) ಕೊಂದಿತು. ಇದರಿಂದ ಉಸಿರುಕಟ್ಟಿ ದಂಪತಿಗಳಿಬ್ಬರೂ ಒಬ್ಬರನ್ನೊಬ್ಬರು ತಬ್ಬಿಕೊಂಡು ಸಾಯುತ್ತಾರೆ. ಇಲ್ಲಿ ಪಂಪ ಹೊಗೆಯ ವರ್ಣನೆ ಮಾಡಿರುವುದು ಹಾಗೆಯೇ ಮುಂದಿನ ದಂಪತಿಗಳ ಗಾಢಾಲಿಂಗನದ ವರ್ಣನೆಯನ್ನು ಕಾಣುತ್ತೇವೆ. ಕಾವ್ಯದ ಶ್ರೇಷ್ಠತೆ ಆದರೊಳಗೆ ಕಾವ್ಯ ಭಾಗಗಳಲ್ಲಿ

''ಬಿಡದೆ ಪೊಗೆ ಸುತ್ತಿ ತೋಳಂ
ಸಡಿಲಿಸಿದಾ ಪ್ರಾಣವಲ್ಲಭರ್ ಪ್ರಾಣಮನಂ
ದೊಡಗಳೆದರೋಪರೋಪರೋ
ಒಡಸಾಯಲ್ ಪಡೆದರಿನ್ನವೇಂ ಸಯ್ಪೊಳವೇ''. (73)

ಪ್ರಾಣವಲ್ಲಭರ್ ಎಂದು ಹೇಳುವುದರ ಮೂಲಕ ಪಂಪ ಕಾವ್ಯ ರಸಾಯನವನ್ನೇ ಓದುಗರಿಗೆ ಉಣಬಡಿಸುತ್ತಾನೆ. ಒಬ್ಬರೊಬ್ಬರು ಬಿಡದೆ ಅಪ್ಪಿಕೊಂಡಿರುವುದು ದಾಂಪತ್ಯದಲ್ಲಿ ಮಾತ್ರ ಒಂದಾಗಿಲ್ಲ ಸಾವಿನಲ್ಲೂ ಒಂದಾಗಿದ್ದಾರೆ ಎನ್ನುವುದು ಅವರ ಪ್ರೀತಿಯ ಅನುರಾಗದ ಸಂಕೇತ. ನಂತರ

ವಜ್ರಜಂಘ ಶ್ರೀಮತಿಯರಿಗೆ ಕುರುವೆಂಬುತ್ತಮ ಭೋಗ ಭೂಮಿಯೆ ಜನ್ಮಭೂಮಿಯಾಯಿತು.

ಒಂದು ದಿನ ಭೋಗ ಭೂಮಿಯಲ್ಲಿ ವಜ್ರಜಂಘ ವನವಿಹಾರ ಮಾಡುತ್ತಿರುವಾಗ ಸೂರ್ಯಪ್ರಭನ ವಿಮಾನವನ್ನು ನೋಡಿ ಅವನ ಪಾದಗಳಿಗೆ ನಮಸ್ಕರಿಸಿ ನಿಮ್ಮನ್ನು ನೋಡಿದಾಕ್ಷಣ ಹೀಗೆ ಪ್ರೀತಿಯುಂಟಾಗಲು ಕಾರಣವನ್ನು ಕೇಳುತ್ತಾನೆ. ಆಗ ಆ ಮುನಿ ಮಹಾಬಳನಾಗಿದ್ದಾಗ ನಿನಗೆ ಸ್ವಯಂಬುದ್ಧನೆಂಬ ಸಚಿವನಾಗಿದ್ದೆ, ನಂತರ ಮಹೀಬುಜ ಸಾಂದರಿಗೆ ಮಗನಾಗಿ ತಪಸ್ಸಿನಿಂದ ಈ ಸಿದ್ಧಿಯನ್ನು ಪಡೆದು ಅದನ್ನು ತಿಳಿಸಲು ನಿನಗೆ ಬಂದೆವೆಂದು ಸಮ್ಯುಕೋಪದೇಶವನ್ನು ನೀಡುತ್ತಾರೆ. ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರ್ಯ, ಸಮ್ಯಕ್ ದರ್ಶನಗಳ ತತ್ವವನ್ನು ಬೋಧಿಸುತ್ತಾರೆ.

ವಜ್ರಜಂಘ ಶ್ರೀಧರ ದೇವನಾಗಿ ಅವನ ಪತ್ನಿ ಸ್ವಯಂಪ್ರಭನಾಗಿ ಜನಿಸುತ್ತಾರೆ. ಇವರೀರ್ವರು ಮಂತ್ರಿಗಳೇನಾದರೂ ಎಂದು ಮುನಿಗಳನ್ನು ಕೇಳಲಾಗಿ ಸಂಭಿನ್ನಮಹಾಮತಿಗಳು ಗಂಭೀರ ನಿಗೋದದಿಂದ ಸವೆದರು. ಶತಮತಿ ಎರಡನೇ ನರಕಕ್ಕೆ ಹೋದ ಎಂದು ಕೇವಲ ಜ್ಞಾನವನ್ನು ಬೋಧಿಸುತ್ತಾರೆ.

ಪುಸಿಯದುದು ಪರಾಂಗನೊ<br>
ಟಿಸದುದು ಕೊಲ್ಲದುದು ಮೋಹಮಿಲ್ಲದುದಳೆವಂ<br>
ಪೊಸಯಿಸುವುದು ವೈರಾಗ್ಯದ<br>
ದೆಸೆಗೆಸಪುದು ಧರ್ಮಮದ ತಡೆವುದಧರ್ಮಂ ಎಂದು ಧರ್ಮ ಮಾರ್ಗವನ್ನು ಸಾರುತ್ತಾರೆ. ಸುಳ್ಳು, ಪರಸ್ತ್ರೀ ಮೋಹ, ಕೊಲೆ, ಇವುಗಳಿಂದ ದೂರವಿದ್ದರೆ ವೈರಾಗ್ಯದಿಂದ ಅಧರ್ಮವನ್ನು ತಡೆಯಬಹುದೆನ್ನುತ್ತಾರೆ.

ಶ್ರೀಧರದೇವ ಜಂಬೂದ್ವೀಪದ ಪೂರ್ವ ಭಾಗದ ವತ್ಸಕಾವತೀ ನಾಡಿನ ಸುಷೀಮಾ ನಗರವನ್ನಾಳುವ ಸುದೃಷ್ಟಿ ಮತ್ತು ಸುನಂದೆಗೆ ಸುವಿಧಿ ಎನ್ನುವ ಹೆಸರಿನಿಂದ ಜನಿಸುತ್ತಾನೆ. ಒಂದು ದಿನ ತನ್ನ ಮಾವನಾದ ಅಭಯಘೋಷನ ಜಿನಚರಣ ವಂದನಾ ಭಕ್ತಿಗೆ ಹೋಗಿ ಸಂಸಾರ ನಿರ್ವೇಗ ಪಾರಾಯಣವಾಗಿ ದೀಕ್ಷೆಯನ್ನು ಕೈಗೊಳ್ಳುತ್ತಾನೆ. ಆಯ್ದು ಮಣವ್ರತಂಗಳು, ಮೂರು ಗುಣವ್ರತಂಗಳು, ನಾಲ್ಕು ಶಿಕ್ಷಾ ವ್ರತಂಗಳನ್ನು ತಾಳಿ ಸಮಾಧಿ ವಿಧಿಯಿಂದ ದೇಹ ತ್ಯಜಿಸುತ್ತಾನೆ.

ಮುಂದೆ ಅಚ್ಯುತೇಂದ್ರನಾಗಿ ನಂತರ ವಜ್ರನಾಭಿಯಾಗಿ ಜನಿಸುತ್ತಾನೆ. ಜಂಬೂದ್ವೀಪದ ಪ್ರಾಗ್ವಿದೇಹದ ಪುಷ್ಕಳಾವತಿ ನಾಡಿನ ಪುಂಡರೀಕಿಣೀ ಪುರದ ವಜ್ರಸೇನ ಮತ್ತು ಶ್ರೀಕಾಂತೆಗೆ ಮಗನಾಗಿ ಜನಿಸುತ್ತಾನೆ. ಶಾರ್ದೂಲ ವಿಜಯನಾಗಿ ವರಹಾರ್ಯ ವೈಜಯಂತನಾಗಿ, ವಾನರ ಜಯಂತನಾಗಿ ನಕುಳಾ ಅಪರಾಜಿತನಾಗಿ ಮಕ್ಕಳಾಗುತ್ತಾರೆ. ವಜ್ರಜಂಘನಾಗಿದ್ದಾಗ ಮತಿವರ ಸುಬಾಹುವಾಗಿ, ಆನಂದ,

ಮಹಾಬಾಹುವಾಗಿ, ಆಕಂಪನ ವೀರನಾಗಿ, ಧನಮಿತ್ರ ಮಹಾವೀರರಾಗಿ ಜನಿಸುತ್ತಾರೆ. ಸ್ವಯಂಪ್ರಭದೇವ ಕುಬೇರದತ್ತನಿಗೆ ಧನದೇವನೆಂಬ ಮಗನಾಗಿ ಜನಿಸುತ್ತಾನೆ. ವಜ್ರನಾಭಿ ರಾಜನಾಗಿ ಭೋಗ ಜೀವನಕ್ಕೆ ಹೇಸಿ ಸಮಾಧಿ ಮರಣದಿಂದ ದೇಹ ತ್ಯಜಿಸುತ್ತಾನೆ.

ವಜ್ರಜಂಘನ ನಂತರದ ಭವಾವಳಿಗಳಲ್ಲಿ ಭೋಗ ಜೀವನ ಕಡಿಮೆಯಾಗುತ್ತಾ ತೀರ್ಥಂಕರತ್ವ ಪಡೆಯಲು ಸಕಲ ಸಿದ್ಧಿಯನ್ನು ಕಂಡುಕೊಳ್ಳುವ ಪ್ರಯತ್ನ ಇಲ್ಲಿದೆ. ಭವಾವಳಿ ಜೀವಜೀವದ ಕಥೆಯಲ್ಲಿ ಹೆಣೆದುಕೊಂಡಿದೆ. ಪ್ರೀತಿಯಾಗಲೀ, ದ್ವೇಷವಾಗಲೀ ಒಂದೇ ಜನ್ಮಕ್ಕೆ ಮುಗಿಯುವಂತಿಲ್ಲ. ಕ್ರಮಕ್ರಮೇಣ ಭೋಗ ಜೀವನ ಕಡಿಮೆಯಾಗುತ್ತಾ ಯೋಗ ಜೀವನಕ್ಕೆ ಸೋಪಾನವಾಗುತ್ತದೆ. ಜೀವವೊಂದು ಪುಟಕ್ಕಿಟ್ಟ ಚಿನ್ನದಂತೆ ಹೊಳಪನ್ನು ಪಡೆಯುತ್ತಾ ಸಾಗುವುದೇ ಇಲ್ಲಿನ ಉದ್ದೇಶವಾಗಿದೆ.

ಜೈನ ಪುರಾಣಗಳಲ್ಲಿ ಭವಾವಳಿಯ ನಂತರ ಪಂಚಕಲ್ಯಾಣಗಳ ಸಂಗತಿ ಮುಖ್ಯವಾದುದು. ಆದಿದೇವನ ಬದುಕಿನಲ್ಲಿ ಮುಂದಿನ ವಿಧಾನಗಳನ್ನು ತಿಳಿಯಬಹುದು.

## ತೀರ್ಥಂಕರ ಚರಿತಂ

ಭರತ ವರ್ಷದಲ್ಲಿ ಭೋಗ ಭೂಮಿ ಸ್ಥಿತಿ ಮುಗಿದು ಕರ್ಮಭೂಮಿ ಸ್ಥಿತಿ ಪ್ರಾರಂಭವಾಗುತ್ತಿರುವಾಗ ಹದಿನಾಲ್ಕನೇ ಮನುವಾದ ನಾಭಿರಾಜನಿಗೆ ಮಗನಾಗಿ ಆದಿತೀರ್ಥಂಕರರ ಜನನವಾಗುತ್ತದೆ. ನಾಭಿರಾಜನ ಸತಿ ಮರುದೇವಿ. ದೇವೇಂದ್ರನೇ ಬಂದು ರಾಜ್ಯಾಭಿಷೇಕ ಕಾರ್ಯವನ್ನು ನೆರವೇರಿಸುತ್ತಾನೆ. ಅಂಧಕಾರ ಲಯವಾಗುತ್ತಾ, ಧರ್ಮಕ್ಕೆ ಜಯವಾಗುತ್ತಾ, ಸರ್ವಾರ್ಥ ಸಿದ್ಧಿಯನ್ನು ನೀಡುತ್ತಾ ಸಂಸಾರ ಸಾರೋದಯನಾದ ನಾಭಿರಾಜ ರಾಜ್ಯವಾಳುತ್ತಿದ್ದಾನೆ.

## ಪಂಚಕಲ್ಯಾಣಗಳು

ಭವಾವಳಿಯನ್ನು ಬಿಟ್ಟರೆ ತೀರ್ಥಂಕರರ ಚರಿತೆಯಲ್ಲಿ ಬಹುಮುಖ್ಯವಾದ ಅಂಶ ಪಂಚಕಲ್ಯಾಣ. ತೀರ್ಥಂಕರನಾಗುವ ಜೀವ ಹಲವು ಜನ್ಮಗಳನ್ನೆತ್ತಿ ಮನುಷ್ಯನಾಗಿ ಹುಟ್ಟಿ ತೀರ್ಥಂಕರತ್ವ ಕೊಡುವ ಪುಣ್ಯ ಕರ್ಮಗಳನ್ನು ಮಾಡಿ ಸತ್ತು ಸ್ವರ್ಗದಲ್ಲಿ ದೇವನಾಗುತ್ತಾನೆ. ದೇವಲೋಕದಲ್ಲಿ ಆಯಸ್ಸು ಮುಗಿದು, ಆರು ತಿಂಗಳಿರುವಾಗ ಯಾವ ರಾಜ ರಾಣಿಯರ ಗರ್ಭದಲ್ಲಿ ತೀರ್ಥಂಕರನ ಅವತಾರವಾಗುವುದೋ ಆ ರಾಜ್ಯದಲ್ಲಿ ಇಂದ್ರನ ಅಪ್ಪಣೆಯ ಮೇರೆಗೆ ಆರು ತಿಂಗಳು ಚಿನ್ನ ರನ್ನದ ಮಳೆಗರೆಯುತ್ತಾನೆ. ಇಂದ್ರನ ಅಪ್ಪಣೆಯ ಮೇರೆಗೆ ದೇವತೆಗಳು

ತೀರ್ಥಂಕರ ಜನನಿಯ ಗರ್ಭವನ್ನು ಶೋಧಿಸುತ್ತಾರೆ. ದೇವತಾ ಸ್ತ್ರೀಯರು ಆಕೆಯ ಶುಶ್ರೂಷೆ ಮಾಡುತ್ತಾರೆ. ಗರ್ಭ ಧರಿಸಲು ಸಿದ್ಧಳಾಗುತ್ತಾಳೆ. ಇಲ್ಲಿ ಮರುದೇವಿಯ ಗರ್ಭವನ್ನು ದೇವತೆಗಳು ತೊಳೆದಿದ್ದಾರೆ. ಹಲವು ಕನಸುಗಳನ್ನು ಆ ರಾತ್ರಿ ಕಾಣುತ್ತಾಳೆ.

''ಪಳುಕಿನ ಕೊಡದೊಳ್ ಸೊಡರ್ಗುಡಿ
ಬೆಳಗುವವೋಲ್ ಶುದ್ಧಗರ್ಭಗೃಹದೊಳ್ ತೇಜೋ
ನಿಳಯಂ ಬೆಳಗಿದನಳೆವಿನ
ಬೆಳಗಿನ ಮೊಳೆ ಮೊಳೆತು ಬಳೆವುದೊಂದಚ್ಚರಿಯೆ''. (108)

ಸ್ಫಟಿಕದ ಕೊಡದಲ್ಲಿ ಎಣ್ಣೆಯ ದೀಪ ಬೆಳಗುವಂತೆ ಮರುದೇವಿಯ ಗರ್ಭದಲ್ಲಿ ತೇಜೋನಿಳಯವಾದ ಆದಿತೀರ್ಥಂಕರನ ಮೂರ್ತಿ ಮೊಳಕೆಯೊಡೆಯುತ್ತಿದೆ. ಅದೊಂದು ಅಚ್ಚರಿಯ ಸಂಗತಿಯೇ ಎನ್ನುವಲ್ಲಿ ಮರುದೇವಿಯ ಶುದ್ಧ ಶೀಲತ್ವ, ಆದಿತೀರ್ಥಂಕರತ್ವವನ್ನು ಪಡೆಯಲು ಆಕೆಯ ಗರ್ಭದ ಶ್ರೇಷ್ಠತೆಯನ್ನು ಕುರಿತು ಪಂಪ ಸ್ಫಟಿಕಕ್ಕೆ ಹೋಲಿಸುವುದು ಗಮನಾರ್ಹವಾದುದು

ಚೈತ್ರ ಕೃಷ್ಣಪಕ್ಷದಲ್ಲಿ ಮಗುವಿಗೆ ಜನನ ನೀಡುತ್ತಾಳೆ. ತೀರ್ಥಂಕರ ಗರ್ಭ ಧರಿಸುವುದಾಗಿಂದ ಪ್ರಾರಂಭವಾಗಿ ಮಗು ಜನಿಸುವವರೆಗೆ ಗರ್ಭಾವತರಣ ಕಲ್ಯಾಣ ಅಲ್ಲಿಯವರೆಗೆ ಇಂದ್ರನ ಮೇಲುಸ್ತುವಾರಿಯಲ್ಲಿ ಎಲ್ಲವೂ ಸಾಗುತ್ತಿರುತ್ತದೆ.

**ಜನ್ಮಾಭಿಷೇಕೋತ್ಸವಂ**

ಹುಟ್ಟುವಾಗಲೇ ತೀರ್ಥಂಕರನಾದವನಿಗೆ ಮತಿ, ಶೃತಿ, ಅವಧಿ ಎಂಬ ಮೂರು ಜ್ಞಾನಗಳಿರುತ್ತವೆ. ತೀರ್ಥಂಕರನ ಜನ್ಮವನ್ನರಿತು ಸೌದಮೇಂದ್ರನ ಅಪ್ಪಣೆಯಂತೆ ಇಂದ್ರಾಣಿ ತೀರ್ಥಂಕರನ ತಾಯಿಗೆ ಮಾಯಾನಿದ್ದೆ ಬರಿಸಿ ಪಕ್ಕದಲ್ಲಿ ಮಾಯಾ ಶಿಶುವನ್ನಿಟ್ಟು ನಿಜವಾದ ಮಗುವನ್ನು ತಂದು ಇಂದ್ರನ ಕೈಗೆ ಕೊಡುತ್ತಾರೆ. ಮೇರುಪರ್ವತಕ್ಕೆ ಐರಾವತವನ್ನೇರಿ ಹೋಗಿ ಮಗುವನ್ನು ಪಾಂಡುಕಶಿಲೆಯಲ್ಲಿ ಪೂರ್ವಾಭಿಮುಖವಾಗಿ ಕೂರಿಸಿ ಕ್ಷೀರ ಸಮುದ್ರದಿಂದ ತಂದ ಹಾಲಿನಿಂದ ಮಜ್ಜನ ಮಾಡಿಸುತ್ತಾರೆ.

''ಕ್ಷೀರಾಬ್ಧಿಯ ನೀರಲ್ಲದೆ
ಧೀರನ ಮಜ್ಜನಕೆ ಪೆಳವು ನೀರ್ ತಗೆವೆಂದಾ
ವಾರಾಶಿವರಂ ಸುರಜನ
ದಾರಿ ಮನೋಹಾರಿ ನೀಳ್ದುವೆರಡುಂ ಕೆಲದೊಳ್''.

ಹಾಲಿನ ಸಮುದ್ರದ ನೀರನ್ನಲ್ಲದೆ ಬೇರೆ ನೀರನ್ನು ಬಳಸಲಾಗದು.

ದೇವತೆಗಳು ಸಮುದ್ರವನ್ನೇ ತಂದು ಎರೆದರೇನೋ ಎನ್ನುವಂತೆ ಇಂದ್ರಾದಿಗಳು ತೀರ್ಥಂಕರನಿಗೆ ಸ್ನಾನವನ್ನು ಮಾಡಿಸುತ್ತಾರೆ. ಗಂಧ, ಅಕ್ಷತೆ, ಪುಷ್ಪಾ, ದೀಪಾ, ಧೂಪ ಮುಂತಾದವುಗಳನ್ನು ಪೂಸಿ, ಅರ್ಚಿಸಿ ಮಗುವಿಗೆ ನಾಮಕರಣ ಮಹೋತ್ಸವವನ್ನು ನೆರವೇರಿಸುತ್ತಾರೆ. ನಂತರ ಮಗುವನ್ನು ತಂದು ತಾಯಿಯ ಹತ್ತಿರ ಬಿಡುತ್ತಾರೆ. ತೀರ್ಥಂಕರನ ಬೆಳವಣಿಗೆಯನ್ನು ಕುರಿತು, ದೇವೇಂದ್ರನ ಸಂತೋಷವನ್ನು ಕುರಿತು ಪಂಪ ಸೊಗಸಾಗಿ ಹೇಳುತ್ತಾನೆ.

> ''ಎಳೆಯೊಳ್ ತೋರಿದ ರೂಪನಾಗಳೆ ನಭೋಭಾಗಾಗ್ರದೊಳ್
> ತೋರ್ಪನಾ
> ಗಳೆ, ಗೆಂಟಾಗಳೆ ಸಾರೆಯಾಗಿ ಪೊಳೆವಂ ಸೂಕ್ಷ್ಮಾಂಗನಾಗಿರ್ಪನಾ
> ಗಳೆ ದಿಗ್ವ್ಯಾಪಕನಪ್ಪನಿಂತು ಪಲವುಂ ಚೋದ್ಯಗಳಿಂ ವಿಕ್ರಿಯಾ
> ಒಳದಿಂದಾಡಿ ಮಹೇಂದ್ರ ಜಾಲಿಗನಮಂ ಪೋಲ್ತಂ ಸುರಾಧೀಶ್ವರಂ''.

ದೇವೇಂದ್ರನ ಸಂತೋಷ, ಎಳೆಯದಾಗಿ ತೋರಿದ ರೂಪವನ್ನು ಬೆಳೆದಂತೆ ತೋರುತ್ತಾ, ಹೊಳೆಯುತ್ತಾ ದಿಕ್ಕುಗಳಿಗೆ ಹರಡುತ್ತಾ, ಆಶ್ಚರ್ಯಗಳನ್ನುಂಟು ಮಾಡುತ್ತಾ ಇಂದ್ರಜಾಲಿಗನಂತೆ ಕಾಣುತ್ತಾನೆ ಎನ್ನುವುದರ ಮೂಲಕ ತೀರ್ಥಂಕರನ ಬೆಳವಣಿಗೆಯನ್ನು ದಾಖಲಿಸಿದಂತಿದೆ. ತೀರ್ಥಂಕರನನ್ನು ಕಂಡು ಇಂದ್ರನ ಸಂತೋಷವನ್ನು ನಾವಿಲ್ಲಿ ಕಾಣುತ್ತೇವೆ. ತೀರ್ಥಂಕರ ಬೆಳೆದು ದೊಡ್ಡವನಾದ ಮೇಲೆ ವಿವಾಹವನ್ನು ಮಾಡುತ್ತಾರೆ.

> ''ಉದಯಾಚಳಕ್ಕೆ ಪೆಸರಿನ
> ನುದಯದಿನಾದಂತಿರೆಮಗೆ ಗುರುಗಂ ಗುರುವೆಂ
> ದೊದವಿದ ಪೆಂಪಿದು ನಿನ್ನೊಂ
> ದುದಯದಿ ಆನಾಯ್ತುಮರ ಮೌಳಿ ಲಾಲಿತ ಚರಣಾ

ಸೂರ್ಯೋದಯ ಉದಯಾಚಲಕ್ಕೆ ಕೀರ್ತಿ ತಂದಂತೆ ನಿನ್ನಿಂದ ನನಗೆ ಹೆಸರು ಎಂದು ಹೇಳುವುದರ ಮೂಲಕ ಆದಿದೇವನ ಕೀರ್ತಿಯನ್ನು ಸೂರ್ಯೋದಯಕ್ಕೆ ಹೋಲಿಸಲಾಗಿದೆ. ಕಚ್ಚ ಮಹಾಕಚ್ಚರ ತಂಗಿಯರಾದ ಯಶಸ್ವತೀ ಮಹಾದೇವಿ ಮತ್ತು ಸುನಂದಾ ಮಹಾದೇವಿಯರನ್ನು ತಂದು ಮದುವೆ ಮಾಡುತ್ತಾರೆ. ಅನೇಕ ಸಂವತ್ಸರಗಳು ಕಳೆದ ಮೇಲೆ ಯಶಸ್ವತಿ ಮಹಾದೇವಿಯ ಗರ್ಭದಲ್ಲಿ ಭೂಮಿಯ ಕಳಶವೆಂಬಂತೆ, ಮನುಧಾತ್ರೀ ಪಾಲ ಚೂಡಾಮಣಿಯಾದ ಭರತ ಜನಿಸಿದ.

> ''ತಂದೆಯ ರೂಪೆ ತಂದೆಯ ವಿಳಾಸಮೆ ತಂದೆಯ ಚೆಲ್ವೆ ತಂದೆಯೊಂ
> ದಂದಮೆ ತಂದೆಯೊಂದು ನುಡಿಯೋಜೆಯೆ ತನ್ನೊಳಮರ್ಕೆವೆತ್ತುದಾ

ನಂದಕರಂ ಕರಂ ಸೊಗಯಿಸುತ್ತಿರೆ ಶೋಭಿಸಿದಂ ಕುಮಾರನಾ
ನಂದಿತ ರೂಪನಂದೆಸೆಯೆ ತಂದೆಯೊಳಚ್ಚಿನೊಳೊತ್ತಿದಂತೆ ಪೋಲ್''.
(157)

ಭರತ ತಂದೆಯ ರೂಪ, ತಂದೆಯ ಚೆಲುವು, ಅವನ ಅಂದ, ನುಡಿಯುವ ಶೈಲಿ, ಆನಂದ, ಇವೆಲ್ಲವೂ ಅಚ್ಚೊತ್ತಿದಂತಿದೆ. ಹೀಗಾಗಿ ಆದಿದೇವನ ಸಕಲ ಗುಣಲಕ್ಷಣಗಳು ಭರತನಲ್ಲಿ ಸೇರ್ಪಡೆಯಾದವು ಎಂದು ಹೇಳುವುದರ ಮೂಲಕ ಭರತನನ್ನು ತಂದೆಯೊಂದಿಗೆ ಸಮೀಕರಿಸುವ ಕೆಲಸ ನಡೆದಿದೆ.

ಭರತ ಮತ್ತು ತೊಂಬತ್ತೊಂಬತ್ತು ಜನ ಮಕ್ಕಳು ಬ್ರಹ್ಮಿಯೆಂಬ ಮಗಳನ್ನು ಪಡೆಯುತ್ತಾರೆ. ಯಶಸ್ವತಿಯ ಸಂತೋಷಕ್ಕೆ ಪಾರವೇ ಇಲ್ಲ. ವಜ್ರಜಂಘನ ಸೇನಾನಾಯಕರಾದ ಆಕಂಪನ ಸುನಂದಾದೇವಿಯ ಗರ್ಭದಲ್ಲಿ ಬಾಹುಬಲಿಯಾಗಿ ಜನಿಸುತ್ತಾನೆ. ವಜ್ರಜಂಘನ ತಂಗಿಯಾದವಳು ಬಾಹುಬಲಿಯ ತಂಗಿಯಾಗಿ ಜನಿಸುತ್ತಾಳೆ. ಅವಳಿಗೆ ಸೌಂದರಿ ಎಂಬ ಹೆಸರನ್ನಿಡುತ್ತಾರೆ.

ಆದಿದೇವ ಸೌಂದರಿ ಮತ್ತು ಬ್ರಹ್ಮಿಯರಿಬ್ಬರನ್ನು ಎರಡು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಬ್ರಹ್ಮಿಗೆ ಬಲಭಾಗದಲ್ಲಿ ಕುಳ್ಳಿರಿಸಿಕೊಂಡು ಲಿಪಿಗಳನ್ನು ಸೌಂದರಿಗೆ ಗಣಿತ ವಿಷಯವನ್ನು ತಿಳಿಸುತ್ತಾನೆ. ಭರತನಿಗೆ ಅರ್ಥಶಾಸ್ತ್ರವನ್ನು, ವೃಷಭಸೇನಂಗೆ ಗಾಂಧರ್ವಶಾಸ್ತ್ರವನ್ನು, ಅನಂತವಿಜಯಂಗೆ ಚಿತ್ರಕಳೆಯುಮಂ, ವಾಸ್ತುವಿದ್ಯೆಯಂ, ಬಾಹುಬಲಿಗೆ ಕಾಮತಂತ್ರ, ಸಾಮುದ್ರಿಕಾರ್ಯವೇದ, ಧನುರ್ವೇದ ಹಸ್ತಶ್ವತಂತ್ರ ರತ್ನಪರೀಕ್ಷೆಗಳನ್ನು ಉಪದೇಶ ಮಾಡುತ್ತಾನೆ.

**ಪರಿನಿಷ್ಕ್ರಮಣ ಕಲ್ಯಾಣ**

ಮಣಿಮಯ ಸಿಂಹಾಸನ ಪೀಠದಲ್ಲಿ ನಾಭಿರಾಜನು, ಕನಕಪೀಠದಲ್ಲಿ ಕಚ್ಛ, ಮಹಾಕಚ್ಛರು, ಸೋಮವಂಶದ ಸೋಮಪ್ರಭ, ಹರಿವಂಶದ ಹರಿಕಾಂತ, ನಾಥವಂಶದ ನಾಯಕ ಆಕಂಪನ, ಉಗ್ರವಂಶಾಗ್ರಣ್ಯ ಕಾಶ್ಯಪ, ಇವರುಗಳು ತಮ್ಮ ತಮ್ಮ ಪೀಠದಲ್ಲಿ ಕುಳಿತಿದ್ದಾಗ ದೇವೇಂದ್ರನ ಸೇವೆಯನ್ನು (ಪೂಜೆಯನ್ನು) ಮಾಡುತ್ತಾರೆ. ದೇವೇಂದ್ರನ ಆಸ್ಥಾನದಲ್ಲಿ ನೀಲಾಂಜನೆಯ ನೃತ್ಯ ಏರ್ಪಡುತ್ತದೆ. ಆದಿಪುರಾಣದ ರಸಘಟ್ಟದ ಸನ್ನಿವೇಶಗಳಲ್ಲಿ ಇದು ಅತ್ಯಂತ ಪ್ರಮುಖವಾದುದು. ನೃತ್ಯ ಪ್ರಾರಂಭಕ್ಕೆ ಮೊದಲು ವಾದ್ಯಗಳ ತಯಾರಿ, ನಾದ ಸರಿಹೊಂದಿಸುವಿಕೆ

''ಅಮರ್ದಿನ ಮರೆಯೊಳಗೆಸೆದಪು
ದಮೃತಾಂದುದ ನಿನದ ಮೆನಿಸೆ ಸಭೆ ನಿನದಂಗೀ
ತಮಹಾ ವಾದಿತಮೆನಿಸಿದು
ದಮರೀ ಜನಗೀತಮದುರ ವಾದಿಕಮಾಗಳ್''. (177)

ಅಮೃತದ ಮಳೆಯೇ ಸುರಿದಂತೆ ಅಮೃತ ಸಮುದ್ರದಂತೆ ವಾದ್ಯ ಸಂಗೀತದ

ನಿನಾದ ಹೊಮ್ಮಿತು. ದೇವ ಸಮೂಹದ ವಾದ್ಯದ ವೈಶಿಷ್ಟ್ಯ ಶಾಶ್ವತ ಸಂತೋಷವನ್ನು ನೀಡುವಂತಹುದಾಗಿತ್ತು. ಆ ಸಮಯದಲ್ಲಿ ನೀಲಾಂಜನೆ ರಂಗವನ್ನು ಪ್ರವೇಶಿಸುತ್ತಾಳೆ. ಪಂಪ ನೀಲಾಂಜನೆಯನ್ನು ವರ್ಣಿಸಲು, ಅಂಗಾಂಗಳನ್ನ ವರ್ಣಿಸಲು ಹೆಚ್ಚು ಪದ್ಯಗಳನ್ನು ಬಳಸಿಕೊಳ್ಳುತ್ತಾನೆ. ಪಂಪನ ನಾಟ್ಯ ಪ್ರತಿಭೆ ಇಂತಹ ಕಡೆ ವಿಶೇಷ ಕೃಷಿ ಮಾಡಿರುವುದನ್ನು ಕಾಣುತ್ತೇವೆ. ನಾಟ್ಯದ ಅರಿವಿದ್ದವನಿಗೆ ಮಾತ್ರ ಈ ರೀತಿ ಕೃಷಿ ಸಾಧ್ಯ. ಏಕೆಂದರೆ, ಪಂಪ ಅರಿಕೇಸರಿಯ ಆಸ್ಥಾನದಲ್ಲಿ ಇಂತಹ ನಾಟ್ಯವನ್ನು ನೋಡಿರಬೇಕು.

> ''ಕುಳಗೀತಂ ವಾದ್ಯಂ ನ್ನ
> ತ್ಯಲೀಳೆ ಪೆಳಿರ್ಗೊಪದೀಕೆಗಲ್ಲದೆ ಗಣಿಕಾ
> ತಿಳಕಮಿದಲ್ ನರ್ತನ ರಸ
> ದೊಳೆ ನಿಚ್ಚಂ ಮೆಚ್ಚುಗೊಳ್ವಳಿಂದ್ರನ ಕೈಯೊಳ್''. (179)

ಗೀತ, ವಾದ್ಯ, ನೃತ್ಯ, ಲೀಲೆ ಇವೆಲ್ಲವೂ ಈಕೆಗಲ್ಲದೆ ಬೇರಾರಿಗೂ ಒಪ್ಪತಕ್ಕವಲ್ಲ. ಗಣಿಕಾ ಸ್ತ್ರೀಯರಲ್ಲಿ ಕರೀಟಪ್ರಾಯಳಾದವಳು. ನರ್ತನ ರಸದಲ್ಲಿ ನಿತ್ಯ ಹೊಸತನ್ನು ಸೃಷ್ಟಿಸುವ ಶಕ್ತಿಯನ್ನು ಇಂದ್ರನಿಂದ ಪಡೆದಿದ್ದಾಳೆ ಎನ್ನುತ್ತಾನೆ ಪಂಪ. ಏಕೆಂದರೆ, ಇಂದ್ರನ ಆಸ್ಥಾನದಲ್ಲಿ ನರ್ತಕಿಯಾಗಲು ವಿಶೇಷ ಕಸುವು, ಪರಿಣಿತಿ ಇರಬೇಕು. ಅದು ನೀಲಾಂಜನೆಯಲ್ಲಿದೆ. ಇವಳ ನರ್ತನ ಅಲ್ಲಿನ ಜನರ ಅಂತರಂಗವನ್ನು ತಲುಪಿದ್ದನ್ನು ಪಂಪ ಮನೋಜ್ಞವಾಗಿ ವರ್ಣಿಸುತ್ತಾನೆ.

> ''ಎನಿಸಿದ ನೀಲಾಂಜನೆ ಕ
> ರ್ಬಿನ ಬಿಲ್ಲಂ ಮಸೆದ ಮದನನಲರ್ಗಣೆ ಬರ್ದುಕಿ
> ತ್ತೆನಿಸುತ್ತೇಳಪೊಕ್ಕಳಾ ಬೋಂ
> ಕೆನೆ ನಿಖಿಕ ಜನಾಂತರಂಗಮಂ ರಂಗಮುಮಂ''. (180)

ಕರ್ಬಿನ ಬಿಲ್ಲನ್ನು ಮಸೆದು ಮನ್ಮಥನ ಕೈಯ ಬಾಣವಾಗಿಸಿದ್ದಾರೆಯೇ ಎನ್ನುವಂತೆ ಇಡೀ ದೇವೆಂದ್ರನ ನೃತ್ಯರಂಗವನ್ನು ಪ್ರವೇಶಿಸುತ್ತಾಳೆ. ಆದರೆ ಅವಳು ಪ್ರವೇಶಿಸಿದ್ದು ನೃತ್ಯರಂಗ ಅಷ್ಟೇ ಅಲ್ಲ. ಅಲ್ಲಿ ನೆರೆದಿದ್ದವರ ಅಂತರಂಗವನ್ನು ರಂಗ ಮತ್ತು ಅಂತರಂಗವನ್ನು ಪ್ರವೇಶಿಸುವ ಶಕ್ತಿ ನೀಲಾಂಜನೆಯಂತಹ ನೃತ್ಯಗಾತಿಗೆ ಮಾತ್ರ ಸಾಧ್ಯವಾಗುವಂತಹುದು.

> ''ನಿಲ್ಲುವು ರಸಂಗಳಿಲ್ಲ ಮ
> ಡಲ್ತೆನೆ ಭಂಗಿಯೊಳನಂಗ ಜಂಗಮ ಲತೆವೊಲ್
> ನಿಲ್ಲು ಜವನಿಕೆಯ ಮರೆಯೊಳ್
> ಪೊಲ್ತಳವಳ್ ಮುಗಿಲಮರೆಯ ವಿದ್ಯುಲ್ಲತೆಯಂ''. (181)

ನವರಸಗಳೆಲ್ಲವು ಇವಳಲ್ಲಿಯೇ ಕ್ರೋಢೀಕೃತವಾಗಿವೆ. ಇವಳ ವಿವಿಧ ಭಂಗಿಗಳಲ್ಲಿ ಹೂಬಳ್ಳಿಯ ನೆನಪನ್ನು ಕಾಣಬಹುದು. ಇವಳ ಯೌವ್ವನ ಮುಗಿಲ ಮರೆಯ ಮಿಂಚಿನಂತೆ ಪ್ರಕಾಶಮಾನವಾದುದು, ಮತ್ತೆ ಮತ್ತೆ ಹೊಳೆಯುವಂತಹುದು, ನಿರಂತರ ಆಕರ್ಷಣೆ, ಚಿರಂತನ ಯೌವ್ವನವನ್ನು ಒಳಗೊಂಡಿರುವಂತಹುದು. ಇಲ್ಲಿ ಪಂಪನ ರಸಿಕ ದೃಷ್ಟಿ ಸೌಂದರ್ಯವನ್ನು ಆಸ್ವಾದಿಸುವ ಆನಂದಿಸುವ ನೆಲೆಗಳನ್ನು ಸಹೃದಯರಿಗೆ ವಿವರಿಸುತ್ತಾನೆ.

''ಕುಡುಪುಂ ಕಯ್ಯುಂ ಜತಿಯೊಳ್
ತಡತಡವರೆ ವಾದಕರಿಗೆ ಪುರ್ವಿಂ ಜತಿಯಂ
ತೊಡರದೆ ನಡೆಯಿಸಿ ಪುರ್ವದೆ
ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್''. (189)

ಹಣೆ, ಹುಬ್ಬು, ಕೈಯನ್ನು ತಿರುವುದರ ಶೈಲಿ, ವಾದ್ಯ ನುಡಿಸುವವನಿಗೆ ತಡವರಿಸುವಂತೆ ಮಾಡುತ್ತವೆ. ವಾದ್ಯಕ್ಕೆ ತಕ್ಕಂತೆ ನರ್ತಿಸಿದಳು ಎನ್ನುವುದಕ್ಕಿಂತ ನರ್ತಕಿಯೇ ವಾದಕಿಯಾದಳು. ನರ್ತನಕ್ಕೆ ತಕ್ಕಂತೆ ನುಡಿಸಿದರು ಎಂದರೆ ಅತಿಶಯೋಕ್ತಿ ಎನಿಸುವುದಿಲ್ಲ. ಇಂಥ ಕಲಾ ಪ್ರವೀಣೆಯಾದ ನೀಲಾಂಜನೆ, ರಸಿಕರ ಮನಸ್ಸನ್ನು ಸೂರೆಗೊಂಡಳು. ನೃತ್ಯ ಮಾಡುತ್ತಿರುವಾಗಲೇ ಸಾವನ್ನಪ್ಪುತ್ತಾಳೆ. ರಸಭಂಗವಾಗಬಾರದೆಂದು ಆಲೋಚಿಸಿದ ಇಂದ್ರ ಮತ್ತೊಂದು ಪಾತ್ರವನ್ನು ಸೃಷ್ಟಿಸಿ ನೃತ್ಯ ಮುಂದುವರಿಸುತ್ತಾನೆ. ಅಲ್ಲಿ ನೆರೆದಿದ್ದವರಿಗೆ ತಿಳಿಯುವುದಿಲ್ಲ. ಆದಿದೇವನಿಗೆ ಮಾತ್ರ ತಿಳಿಯುತ್ತದೆ.

''ನಾರೀರೂಪದ ಯಂತ್ರಂ
ಚಾರುತರಂ ನೋಡೆ ನೋಡೆ ಕರಗಿಪುದೀ
ಸಂಸಾರದನಿತ್ಯತೆ ಮನದೊಳ್
ಬೇರೂರೆದುದೀಗಳೆಂತಿದಂ ಕಡೆಗಣಿಪೆ''. (199)

ನೋಡು ನೋಡುತ್ತಿದ್ದಂತೆಯೇ ಹೆಣ್ಣುರೂಪದ ಯಂತ್ರದಂತಿದ್ದ ನೀಲಾಂಜನೆ ಕರಗಿ ಹೋದದ್ದು ಆದಿದೇವನಿಗೆ ಮಾನವ ಜೀವನದ ಅಶಾಶ್ವತೆಯನ್ನು ತಿಳಿಸಿಕೊಟ್ಟಂತಾಗುತ್ತದೆ. ಸಂಸಾರದ ಅನಿತ್ಯತೆ ಮನಸ್ಸಿನ ಬೇರೂರುತ್ತದೆ.

''ತನು ರೂಪ, ವಿಭವ, ಯೌವನ
ಧನ, ಸೌಭಾಗ್ಯಾಯುರಾದಿಗಳ್ಗೆಣೆ ಕುಡುಮಿಂ
ಚಿನ ಪೊಳಪು ಮುಗಿಲ ನೆದಿಲಿಂ
ದ್ರನ ಬಿಲ್ ಬೊಬ್ಬುಳಿಕೆಯುರ್ಬು ಪರ್ಬಿದ ಭೋಗಂ''. (201)

ದೇಹ, ಸೌಂದರ್ಯ, ಯೌವ್ವನ, ಸಂಪತ್ತು, ಸೌಭಾಗ್ಯ, ಆಯುಷ್ಯ ಇವುಗಳೆಲ್ಲ ಮಿಂಚಿನ ಹೊಳಪಿನಂತೆ ಕ್ಷಣಿಕ ಸುಖವನ್ನು ಕೊಡುತ್ತವೆ. ಭೋಗ ಶಾಶ್ವತ ಸುಖವನ್ನು ನೀಡಲಾರದು ಎಂದು ಭೋಗ ವಿಷಯಗಳಲ್ಲಿ ನಿರಾಸಕ್ತಿಯನ್ನು ತಳೆಯುತ್ತಾನೆ.

''ಜನನಿ ಜನಕ ಸಹೋದರ
ವನಿತಾ ಸುತ ಪೌತ್ರ ಮಿತ್ರ ಸಂಬಂಧಮದೆಂ
ತೆನಿತೆನಿತು ಭವದೊಳಾಯ್ತು
ಲ್ಲೆನಿತೆನಿತಂ ನೆನೆವುದೆನಿತನವಧರಿಸುವುದೋ''. (108)

ತಾಯಿ, ತಂದೆ, ಸಹೋದರ, ಹೆಂಡತಿ, ಮಗ, ಗೆಳೆಯ ಮುಂತಾದ ಸಂಬಂಧಗಳಿಲ್ಲದೆ ಮತ್ತೇನೂ ಇಲ್ಲಿಲ್ಲ. ಇವುಗಳನ್ನು ಮೀರಿದ ಸ್ಥಿತಿಯನ್ನು ತಲುಪಬೇಕು. ಸಂಬಂಧಗಳ ಕಬಂಧ ಬಾಹುಗಳಿಂದ ದೂರವುಳಿಯಲು ಆದಿದೇವ ನಿರ್ಧರಿಸುತ್ತಾನೆ. ಸಂಸಾರ ಮಾವಿನ ಮರದಂತೆ ಸಾಯಲೂ ಬಿಡದೆ ಮತ್ತೆ ಮತ್ತೆ ಭೋಗಾಸಕ್ತಿಗೆ ಮನಸ್ಸನ್ನು ತಳೆಯುತ್ತದೆ. ಆದರೂ ತಪಸ್ಸೆನ್ನುವ ಅಗ್ನಿ ಅದನ್ನು ಸುಡುತ್ತದೆ ಎಂದು ಹೇಳುವ ಪಂಪ ಆದಿದೇವನ ಸಂಸಾರ ನಿರ್ವೇಗವನ್ನು ಕುರಿತು ತಿಳಿಸುತ್ತಾನೆ. ಭರತನಿಗೆ ಪಟ್ಟಕಟ್ಟಿ ಬಾಹುಬಲಿಯನ್ನು ಯುವರಾಜ ಪದವಿಗೇರಿಸಿ ಅಯೋಧ್ಯೆ ಮತ್ತು ಪೌದುನ ಪುರದಲ್ಲಿ ಇಬ್ಬರನ್ನು ನಿಯುಕ್ತ ತಪಸ್ಸಿಗೆ ತೆರಳುತ್ತಾನೆ.

## ಭರತನ ದಿಗ್ವಿಜಯ

ವೀರರಸ ಪ್ರಧಾನವಾದ ಭಾಗ ಇದು. ಆದಿಪುರಾಣದ ಮೂರನೆಯ ಭಾಗ ಭರತನ ದಿಗ್ವಿಜಯ. ಭರತ ಬಾಹುಬಲಿಯರ ಯುದ್ಧ, ಬಾಹುಬಲಿಯ ನಿರ್ವಾಣ, ನೀತಿ ಬೋಧೆ, ಧರ್ಮೋಪದೇಶ ಮುಂತಾದ ಭಾಗಗಳು ಇಲ್ಲಿ ಸೇರುತ್ತವೆ.

ಭರತನ ಆಯುಧಾಗಾರದಲ್ಲಿ ಚಕ್ರರತ್ನ ಹುಟ್ಟುತ್ತದೆ. ಅದರ ಸಂಕೇತ ಇಡೀ ಭೂಮಂಡಲವನ್ನೆಲ್ಲ ಜಯಿಸುವುದು. ಪುರೋಹಿತರ ಮಾತಿನಂತೆ ಭರತ ಆನಂದಿಗಳೆನ್ನುವ ಹನ್ನೆರಡು ಭೇರಿಗಳನ್ನು, ವಿಜಯಘೋಷಗಳೆಂಬ ಹನ್ನೆರಡು ಪಟಗಳನ್ನು ಗಂಭೀರ ಆವರ್ತಗಳೆಂಬ ಇಪ್ಪತ್ನಾಲ್ಕು ಶಂಖರಗಳನ್ನು, ನಲ್ವತ್ತೆಂಟು ಕೋಟಿ ಪತಾಕೆಗಳೊಂದಿಗೆ ಪೂರ್ವಾಭಿಮುಖವಾಗಿ ಚಕ್ರರತ್ನ ವಿಜಯಕ್ಕೆ ಹೊರಡುತ್ತದೆ.

ಸಮುದ್ರದ ನೀಳವಾದ ಹೆದ್ದೆರೆಗಳಂತೆ, ಭೂಮಿಯನ್ನು ಮುತ್ತಿದಂತೆ ಹದಿನೆಂಟು ಕೋಟಿವರೆಗೆ ಕುದುರೆಯ ಸೈನ್ಯ ಸಾಗುತ್ತದೆ. ಎಂಬತ್ನಾಲ್ಕು ಲಕ್ಷ ರಥಗಳು, ಕಾಲಾಳುಗಳು ಎಂಬತ್ನಾಲ್ಕು ಕೋಟಿ. ಹೀಗೆ ಭರತ ಗಂಗಾನದಿಯ

ದಡದಲ್ಲಿ ಸಾಗುತ್ತಿದ್ದಾನೆ.

**ಪೂರ್ವ ದಿಗ್ವಿಜಯ ಅಥವಾ ಮಾಗಧ ದರ್ಪದಳನಂ**

ಪೂರ್ವ ಸಮುದ್ರದ ವಾಸಿಗಳು ಭರತನ ಬರವನ್ನು ಕೇಳಿ ಭಯಭ್ರಾಂತಿಯಿಂದ ಕಪ್ಪ ಕಾಣಿಕೆಗಳನ್ನು ಅರ್ಪಿಸುತ್ತಾರೆ. ಭರತ ಲವಣ ಸಮುದ್ರವನ್ನು ಬಂದು ಸೇರುತ್ತಾನೆ.

''ಎನಗೆ ಪೊಸಂತಿರೀ ನೆಗಳ್ದವಜ್ರದ ವೇದಿಕೆ ಗೋಷ್ಪದಂ ದಲೀ
ವನನಿಧಿ ಪಾಯ್ದು ಮಾಗಧನನೀಗಳೆ ಕಟ್ಟುವೆನಿಲ್ಲಿ ಪೂಣ್ದು ನಿ
ಲ್ವನಿತುವರಂ ಸುರಂ ಗಹನಮೇ ಪ್ರದವ್ವಳಿಪೆನ್ನ ಕಾಯ್ದು ಪೊ
ಪಿನಮಿರದೀಗಳೆಂಟುವೆನೊ ದಾಂಟುವೆನೋ
ಲವಣಾಂಬು ರಾಶಿಯಂ''. (301)

ಹೊಸಿಲೇ ವಜ್ರದ ವೇದಿಕೆಯಾಗಿ ಹಸುವಿನ ಪಾದದಂತಿರುವ ಸಮುದ್ರವನ್ನು ನೋಡಿ ಇಲ್ಲಿಯೇ ಮಾಗಧನನ್ನು ಕಟ್ಟುವೆನು. ಲವಣ ಸಮುದ್ರವನ್ನು ದಾಂಟುವನೋ ಎಂಬುದಾಗಿ ಲವಣ ರಾಶಿಯನ್ನು ನೋಡುತ್ತಾನೆ. ಎನ್ನು ಬುಜದಂಡ ಸಾಲದೇ, ಚಕ್ರರತ್ನವೇಕೆ ಎಂದು ಭರತ ಉದಾಸೀನತೆಯನ್ನು ತೋರುತ್ತಾನೆ.

ಮಾರನೆಯ ದಿನ ಅಜಿಂತಜಯ ಎನ್ನುವ ಕುದುರೆಯನ್ನೇರಿ ಲವಣ ಸಮುದ್ರವನ್ನು ಸೇರುತ್ತಾನೆ.

''ರಥದಿಂದಂ ಮುಂಚೆ ಮನೋ
ರಥಂ ಮನೋರಥದಿನತ್ತಲದು ಮುಂಚೆ ಬೃಹದ್
ರಥಮಿಂತು ಭರತ ರಾಜನ
ರಥವ ಮನೋರಥದ ಬೇಗಮೊದವಿದುದಾಗಳ್''. (304)

ಭರತನ ಮನಸ್ಸು ಮತ್ತು ರಥ ಎರಡೂ ಒಂದನ್ನೊಂದು ಸ್ಪರ್ಧಿಸುವಂತೆ ಮಗಧನನ್ನು ಸೋಲಿಸಲು ಹೊರಟಂತಿತ್ತು ಎನ್ನುತ್ತಾನೆ ಪಂಪ. ಭೌತವಸ್ತು ವಸ್ತುವಿನೊಂದಿಗೆ ಅಭೌತ ವಸ್ತುವನ್ನು ಸಮೀಕರಿಸಿ ನೋಡುವ ಕ್ರಿಯೆಯನ್ನು ನಾವಿಲ್ಲಿ ಕಾಣುತ್ತೇವೆ. ಇಡೀ ಸಮುದ್ರವನ್ನು ಭರತ ದಾಟಿದ್ದು, ರಥ ನೆನೆಯದಂತೆ ಕುದುರೆಗಲು ಮುಳುಗದಂತೆ ಸಮುದ್ರವನ್ನು ದಾಟುತ್ತಾನೆ. ರಥ ಸಮುದ್ರದಲ್ಲಿ ನಿಂತು ಹೋಗುತ್ತದೆ. ಭರತ ಬಾಣದಲ್ಲಿ ಪತ್ರವನ್ನು ಕಳುಹಿಸುತ್ತಾನೆ. ಮಗದ ಯುದ್ಧಕ್ಕೆ ಸಿದ್ಧನಾದಾಗ ಮಂತ್ರಿಗಳು ''ಬಲಾಢ್ಯನಲ್ಲಿ ಬಲಪರೀಕ್ಷಿಸುವುದು'' ಸೋಲಿಗೆ ಕಾರಣ ಎನ್ನುತ್ತಾರೆ.

''ಕಡುಗಲಿತನಮುಂ ಚಾಗದ
ಪಡೆಯಮಾತುಂ ವಿದ್ಯೆಯುರ್ಕುರ್ಮೊರ್ವನೊಳೆಂತುಂ
ನಡೆಯವು ಭವನಾಂತರದೊಳ್
ನಿಡಿಯರ್ಗಂ ನಿಡಿಯರೊಳರಿದೇಂ ವಿಸ್ಮಯಮೇ''. (316)

ಪರಾಕ್ರಮ, ತ್ಯಾಗ, ವಿದ್ಯೆ, ಇವಾವುವೂ ಇಲ್ಲಿ ಸಾಗುವುದಿಲ್ಲ. ದೊಡ್ಡವರಿಗಿಂತ ದೊಡ್ಡವರಿರುತ್ತಾರೆ. ನೀನು ಭರತನಿಗಿಂತ ದೊಡ್ಡವನಲ್ಲ ಎಂದಾಗ ಬಂದ ಬಾಣವನ್ನು ಪೂಜಿಸಿ ಮುತ್ತು ರತ್ನಗಳನ್ನು ತಂದು ಭರತನ ಅಡಿಗಳಿಗೆ ಸುರಿಯುತ್ತಾನೆ. ಭರತ ಕೆಲವನ್ನು ಆಯ್ದುಕೊಂಡು ಮುಂದು ಸಾಗುತ್ತಾನೆ.

ಭರತ ದಕ್ಷಿಣಾಭಿಮುಖವಾಗಿ ಚಲಿಸಿ ಮಗಧನನ್ನು ಜಯಿಸಿ ಬರುವ ವೇಳೆಗೆ ಮರತುನ ಬಂದು ಕಪ್ಪಕಾಣಿಕೆಗಳನ್ನು ಅರ್ಪಿಸುತ್ತಾನೆ. ವಿಜಯಾರ್ಧ ಪರ್ವತದ ವಿಜಯಾರ್ಧ ಕುಮಾರ ಬಂದು ನಮಸ್ಕರಿಸುತ್ತಾನೆ. ಚಕ್ರವರ್ತಿಯಾದವನಿಗೆ ಇಲ್ಲಿ ಅಭಿಷೇಕವನ್ನು ಮಾಡುವದು ನಮ್ಮ ಕರ್ತವ್ಯ ಎಂದು ವಿಜಯಾಭಿಷೇಕ ಮಾಡಿಸುತ್ತಾನೆ. ಮ್ಲೇಚ್ಛಖಂಡದ ಗುಹೋತ್ಸಂಗವನ್ನು ಸೋಲಿಸಿ ಉತ್ತರ ದಿಕ್ಕಿನೆಡೆಗೆ ಸಾಗುತ್ತಾನೆ.

''ಒಂದಳಿ ನೀರ್ ಮಳಲೊಂದ
ಕೊರ್ಂದಿಸುತಂ ವೇಗೆಕೊಂಡು ನೆಗೆವುದಿದೇಂ ಮ
ತ್ತೊಂದ ನೀರಡಿಗಳ್ದುವು
ದೆಂದತಿ ವಿಸ್ಮಯದೆ ನೋಡಿದಂ ಭರತೇಶಂ''. (335)

ಒಂದರ ನೀರು ಮರಳನ್ನು ತಂದು ಮೇಲೆ ಹಾಕಿದರೆ ಮತ್ತೊಂದರ ನೀರು ಅದನ್ನು ಕೆಳಗೆ ಸೇರಿಸುವ ಕೆಲಸವನ್ನು ಮಾಡುತ್ತದೆ. ಎರಡು ಸಮುದ್ರಗಳು ಸೇರಿದ ಜಾಗವನ್ನು ನೋಡಿದ ಭರತ ಆಶ್ಚರ್ಯಚಕಿತನಾಗುತ್ತಾನೆ. ಬಳಿಕ ಆವರ್ತ ಮ್ಲೇಚ್ಛರಾಜರು ತಮ್ಮ ಬಲವನ್ನು ಒಂದು ಮಾಡಿಕೊಂಡು ಬರುವುದನ್ನು ಕಂಡು ಮಂತ್ರಿಗಳು ಕೆಳಗಿನಂತೆ ಸಲಹೆ ನೀಡುತ್ತಾರೆ. ಸಮುದ್ರ ದಾಟಿ ಬಂದವನು ಅಸಮಬಲನು ಅವನೊಂದಿಗೆ ಯುದ್ಧ ಸಲ್ಲದು ಎಂದು ಹೇಳಿ ಶರಣಾಗುವಂತೆ ಮಾಡುತ್ತಾರೆ.

ಭರತ ಯುದ್ಧದಲ್ಲಿ ಗೆಲುವನ್ನು ಸಾಧಿಸಿ ವೃಷಭಾಚಲದತ್ತ ಸಾಗುತ್ತಾನೆ. ಅಲ್ಲಿ ತನ್ನ ಪ್ರಶಸ್ತಿಯನ್ನು ಕೆತ್ತಿಸುವ ಸಾಹಸಕ್ಕೆ ಕೈಹಾಕುತ್ತಾನೆ. ಸಿಂಧೂ ಮತ್ತು ಗಂಗಾನದಿಯ ಉಗಮ ಸ್ಥಾನವಾದ ಇಲ್ಲಿ ತನ್ನ ಕೀರ್ತಿ ಪತಾಕೆಯ ಶಿಲಾಶಾಸನವನ್ನು ಬರೆಸಲುದ್ಯುಕ್ತನಾಗುತ್ತಾನೆ.

''ಆದರೊಳ್‌ನೇಕ ಕಲ್ಪ ಶತಕೋಟಿಗಳ್ ಸರೆ ಸಂದ ಚಕ್ರಿ ಮೃಂ
ದದ ಚಲದಾಯದಾಯತಿಯ ಬೀರದ ಚಾಗದ ಮಾತುಗಳ್ ಪೋದ
ಖ್ಖೆದವಿರೆ ತತ್ಪ್ರಶಸ್ತಿಗಳೊಳಂತವನೊಯ್ಯನೆ ನೋಡಿ ನೋಡಿ ಸೋ
ರ್ದುದ ಕೊಳಗೊಂಡ ಗರ್ವರಸಮಾ ಭರತೇಶ್ವರ ಚಕ್ರವರ್ತಿಯಾ''.

(343)

ಭರತ ವೃಷಬಾದ್ರಿ ಪರ್ವತಕ್ಕೆ ಬಂದಾಗ ಇಡೀ ಭೂಮಂಡಲವನ್ನೆಲ್ಲ ಗೆದ್ದು ಉತ್ಸಾಹದಲ್ಲಿ ಬರುತ್ತಾನೆ. ಆದರೆ ಅಲ್ಲಿ ಭರತನಿಗೆ ಕಂಡದ್ದೇನು. ಸ್ವಲ್ಪವೂ ಜಾಗವಿಲ್ಲದಂತೆ ನೂರಾರು ರಾಜರುಗಳು ಶಾಸನವನ್ನು ಕೆತ್ತಿಸಿದ್ದಾರೆ. ನಾನೊಬ್ಬನೇ ಗೆದ್ದಿರುವೆನೆನ್ನುವ ಅಹಂ ಸೋರಿಹೋಗುತ್ತದೆ. ಆದರೂ ಪಂಪನ ಅಹಂಕಾರ ನಾಶವಾಗುವುದಿಲ್ಲ. ಸೋರಿಹೋದರೆ ಮತ್ತೆ ಶೇಖರಣೆಯಾಗುತ್ತದೆ. ಪಂಪ 'ಸೋರ್ದುದು' ಎನ್ನುವುದು ಇದುವರೆಗಿನ ಭರತನ ಗರ್ವವೇ ಹೊರತು ಇಡೀ ಗರ್ವವಲ್ಲ ಎಂಬುದನ್ನು ಮನದಟ್ಟುಮಾಡಿಕೊಡುತ್ತಾನೆ. ತನ್ನ ರತ್ನದಂಡದಿಂದ ಒಂದನ್ನು ಅಳಿಸಿ ತನ್ನದನ್ನು ಕೆತ್ತಿಸುತ್ತಾನೆ. ರಾಜಪ್ರಭುತ್ವದ ಸರ್ವಾಧಿಕಾರಿ ಪ್ರಭುತ್ವದ ನೆಲೆಗಳನ್ನು ನಾವಿಲ್ಲಿ ಕಾಣುತ್ತೇವೆ.

ವೃಷಭನಾಥನನ್ನು ಸ್ತುತಿಸಿದಾದ ಮೇಲೆ ಭರತ ಅಯೋಧ್ಯಾಪುರದ ಕಡೆ ಆಗಮಿಸುತ್ತಾನೆ. ಆದರೆ ಚಕ್ರರತ್ನ ಪಟ್ಟಣವನ್ನು ಪ್ರವೇಶಿಸುವುದಿಲ್ಲ. ಭರತನಿಗೆ ಆಶ್ಚರ್ಯವಾಗುತ್ತದೆ.

''ಪದಿನಾಲ್ಕುಂ ರತ್ನಕ್ಕಂ
ಮೊದಲೆನಗೀ ಚಕ್ರರತ್ನಮಿದಲೆಂ ವೇಲಾ
ವುದು ದೈವಮೆನಗಯೋಧ್ಯೆಯ
ನಿದು ಪುಗದೆ ತರುಂಬಿ ನಿಂದ ಕಾರಣವೇನೋ''. (366)

ಹದಿನಾಲ್ಕು ರತ್ನಗಳಲ್ಲಿ ಮೊದಲನೆಯದು ಈ ಚಕ್ರರತ್ನ. ಇದಕ್ಕಿಂತ ಶ್ರೇಷ್ಠವಾದುದು ಮತ್ತಾವುದೂ ಇಲ್ಲ. ಹೀಗಿರುವಾಗ ಅಯೋಧ್ಯೆಯನ್ನು ಏಕೆ ಪ್ರವೇಶಿಸುತ್ತಿಲ್ಲ ಎಂದು ಆಶ್ಚರ್ಯ ವ್ಯಕ್ತಪಡಿಸುತ್ತಾನೆ. ಅಂತರಂಗದ ವೈರಿಗಳನ್ನು ಗೆಲ್ಲದೆ ಹೊರಜಗತ್ತಿನ ವೈರಿಗಳನ್ನು ಗೆದ್ದೆನೆಂದರೆ ಸಾಧ್ಯವೇ ಎಂದು ಪುರೋಹಿತರು ತಿಳಿಸಿ ಹೇಳುತ್ತಾರೆ. ಭರತ ಚಿಂತೆಗೊಳಗಾಗುತ್ತಾನೆ. ತೊಂಬತ್ತೊಂಬತ್ತು ಮಂದಿ ತಮ್ಮಂದಿರನ್ನು ಎರಗಿಸಬಹುದು. ಆದರೆ ಬಾಹುಬಲಿ ನಮಸ್ಕರಿಸುವುದೇ ? ಇಲ್ಲಿ ಇದುವರೆಗೂ ಭರತ ದಿಗ್ವಿಜಯದಲ್ಲಿ ಕಂಡು ಬಂದ ತಳಮಳಕ್ಕೆ ಒಳಗಾಗುತ್ತಾನೆ. ವಿಜಯಪ್ರಶಸ್ತಿಯ ಸಂದರ್ಭದಲ್ಲಿಯೇ ಭರತನ ಗರ್ವ ಸೋರಿ ಹೋಯಿತೇ

ಹೊರತು ನಾಶವಾಗಿರಲಿಲ್ಲ. ಪಂಪನಿಗೆ ಭರತನ ಗೌರವದ ನಾಶವನ್ನು ಸೆರೆಹಿಡಿಯಬೇಕಿದೆ. ಬಾಹ್ಯ ಶಕ್ತಿಗಳಿಗಿಂತ ಅಂತರಂಗದ ತಮ್ಮಂದಿರ ಶಕ್ತಿ ಭರತನಿಗೆ ಅರಿವಿದ್ದರಿಂದಲೇ ಭರತ ಭಯಭೀತನಾಗುತ್ತಾನೆ.

ಭರತನ ತಮ್ಮಂದಿರಲ್ಲಿಗೆ, ಬಾಹುಬಲಿಯಲ್ಲಿಗೆ ಸಮಾಚಾರವನ್ನು ಹೊತ್ತು ತರುತ್ತಾರೆ. ಪಂಪ ಸಂಬಂಧಗಳನ್ನು ಕುರಿತು ಭರತನ ಮಾತಿನಲ್ಲಿ ಹೇಳಿಸುವುದು ಇಂದಿನ ಆಧುನಿಕ ಸಂದರ್ಭದ ಅನೌಪಚಾರಿಕ ಸಂಬಂಧಗಳ ಹೋಲಿಕೆಯಂತೆ ಕಂಡು ಬರುತ್ತದೆ.

> ''ಎನಗೋರ್ವಂಗುಪಭೋಗ್ಯಮಲ್ತು ವಸುಧಾ ಸಾಮ್ರಾಜ್ಯಮೋರಂತೆ ನಿ
> ಮ್ಮನಿಬರ್ಗಂ ಪಿರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ
> ವಿನಯಂ ಸಲ್ವುದು ತಾಮುದೂಮುಮೊಡನಿರ್ಪಂ ಬರ್ಪದೆಂಬೀಶ ಶಾ
> ಸನಮಂ ನೆತ್ತಿಯೊಳಾಂತು ಬನ್ನಿಮೆರಗಿಂ ಚಕ್ರೇಶ ಪಾದಾಬ್ಜದೊಳ್''.
>
> (379)

ಭರತನ ಈ ಮಾತುಗಳು ಚಕ್ರವರ್ತಿಯ ದರ್ಪದ ಸಂಕೇತಗಳಾಗಿವೆ. ನನ್ನೊಬ್ಬನಿಗೆ ಮಾತ್ರ ಉಪಭೋಗಿಸಲು ಇರುವುದು ಈ ಭೂಸಾಮ್ರಾಜ್ಯ. ಹಿರಿಯಣ್ಣ ತಂದೆಯ ಸಮಾನ ಎಂದುಕೊಂಡು ನನ್ನಲ್ಲಿ ವಿನಯವನ್ನು ತೋರಿ ನನ್ನೊಂದಿಗೆ ಬಾಳಲು ಬರುವುದು. ಈ ರಾಜನ ಶಾಸನವನ್ನು ತಲೆಯನ್ನು ಹೊತ್ತು ಬನ್ನಿ ನಮಸ್ಕರಿಸಿ ಚಕ್ರವರ್ತಿಯ ಪಾದಗಳಲ್ಲಿ ಎಂದು ಸವಿನಯ ತುಂಬಿದಂತೆ ಕಂಡು ಬರುವ ದರ್ಪದ ಮಾತುಗಳನ್ನಾಡುತ್ತಾನೆ. ರಾಜ ಮತ್ತು ಸೇವಕತನದ ಕಲ್ಪನೆಯನ್ನು ಪಂಪ ಮನೋಜ್ಞವಾಗಿ ಚಿತ್ರಿಸಿದ್ದಾನೆ.

> ''ಪರಿಯಣ್ಣಂ ಗುರು ತಂದೆಯೆಂದೆರಗುವಂ ಮುನ್ನೆಲ್ಲಮಿಂತೀಗಳೇ
> ಳಾಸೆಂಬೊಂದು ವಿಭೇದಮಾದೊಡೆರಿಕಂ ಚಿಃ ಕಷ್ಟಮಲ್ತೇ ವಸುಂ
> ಧರೆಗಯ್ಯಂ ದಯೆಗೆಯ್ಯೆ ಮುನ್ ಪಡೆದುದರ್ಕಿಂತೀತನೊಳ್ ತೊಟ್ಟಕಿಂ
> ಕರ ಭಾವಂ ನಮಗಕ್ಕಿಗೊಟ್ಟು ಮಡುಗೊಟ್ಟೆಣ್ಬಂದಮಂ ಪೋಲದೇ''.
>
> (380)

ಭರತನ ತಮ್ಮಂದಿರು ಹಿರಿಯಣ್ಣ, ಗುರು, ತಂದೆಗೆ ಸಮಾನ ಅವನಿಗೆ ನಮಸ್ಕರಿಸುವುದು ತಪ್ಪಲ್ಲ. ಮೊದಲಾಗಿದ್ದರೆ ಭೇದಭಾವವೇ ಇರುತ್ತಿರಲಿಲ್ಲ. ಭೇದವನ್ನು ಮಾಡಿ ನಮಸ್ಕರಿಸು ಎನ್ನುವುದು ಕಷ್ಟವಾದುದಲ್ಲವೆ ? ಭೂಮಿಯನ್ನು ಪಡೆದದ್ದರಿಂದ ಇವನಲ್ಲಿ ಸೇವಕ ಭಾವವನ್ನು ತೋರುವುದು ನಾವು ನಮ್ಮ ಅಕ್ಕಿಯನ್ನು ಕೊಟ್ಟು ಅವರು ನೀಡುವ ತಂಗಳನ್ನವನ್ನು ತಿಂದಂತಾಗುವುದಿಲ್ಲವೆ ಎಂದು ಆಲೋಚಿಸಿದ ಭರತನ ತಮ್ಮಂದಿರು ಭರತನನ್ನೇ ತಮ್ಮ ಕಾಲಿಗೆರಗಿಸುವಂತೆ ತಪಸ್ಸನ್ನು

ಮಾಡಲು ಸಿದ್ಧರಾಗುತ್ತಾರೆ.

''ಭವದಂಘ್ರಿಕಮಳ ರಜದಿಂ
ಪವಿತ್ರಮಾದೆಮ್ಮ ಮಕುಟಮೆರಗದು ಪೆರರ್ಗಂ
ಭವ, ಭಯ, ಹರ ಭರತನನೆದು
ಗವಯವದೆರಗಿಸುವ ತಪಮನೀಗಳೆ ದಯೆರೆಯ್''. (382)

ಸಹೋದರರಾದ ನಾವು ಅವನ ಕಾಲಿಗೆರಗುವುದು ಹೇಗೆಂದರೆ ಭಗವಂತನಿಗೆ ನಮಸ್ಕರಿಸಿದ ನಾವುಗಳು ನಮ್ಮ ಶಿರಗಳು ಭರತನಿಗೆರಗಲಾರವು. ಆದ್ದರಿಂದ ಭರತನನ್ನೇ ಎರಗುವಂತೆ ಮಾಡುತ್ತೇವೆ. ಅಂತಹ ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆಯುತ್ತೇವೆ ಎನ್ನುವ ಸಹೋದರರ ಆರೋಗ್ಯಕರ ಮನಸ್ಸನ್ನು ನಾವಿಲ್ಲಿ ಕಾಣಬಹುದಾಗಿದೆ. ಅವರೆಲ್ಲರೂ ತಪಸ್ಸಿಗೆ ತೆರಳುತ್ತಾರೆ. ಇಲ್ಲಿಯೂ ಭರತನಿಗೆ ಮುಖಭಂಗವಾಗುತ್ತದೆ.

ಆದರೂ ಭರತ ಛಲದಂಕಮಲ್ಲನಂತೆ ತಮ್ಮಂದಿರು ನಮಸ್ಕರಿಸದಿದ್ದರೂ ಬಾಹುಬಲಿಯನ್ನು ನಮಸ್ಕರಿಸುವಂತೆ ಮಾಡುತ್ತೇನೆ ಎನ್ನುತ್ತಾನೆ.

''ಎನಗನುಜರಾಗಿಯುಂ ಚಕ
ದೆನಗೆರಗದೆ ಪೋಗಿ ಭುವನ ಗುರುಗೆರಗಿದರಂ
ತನಿಬರುಮವರಿಂದಗ್ಗಳ
ಮೆನೆ ನೆಗಳ್ದ ಬಾಹುಬಲಿಯನೆಂತೆರಗಿಸುವೆಂ''. (383)

ನನ್ನ ತಮ್ಮಂದಿರಾಗಿಯೂ ಛಲದಿಂದ ನನಗೆ ನಮಸ್ಕರಿಸದೆ ಭೂಮಿಯ ಮೇಲಿನ ಗುರುಗಳಿಗೆ ನಮಸ್ಕರಿಸಿದ್ದಾರೆ. ಮೊದಲೇ ನನ್ನನ್ನು ಕಂಡರೆ ಆಗದ ಬಾಹುಬಲಿಯನ್ನು ನಮಸ್ಕರಿಸುವಂತೆ ಮಾಡುವುದಾದರೂ ಹೇಗೆ ಎನ್ನುವ ಚಿಂತೆ ಭರತನನ್ನು ಕಾಡುತ್ತದೆ. ಬಾಹುಬಲಿಗೆ ಪತ್ರವನ್ನು ಕಳಿಸುತ್ತಾನೆ. ಬಾಹುಬಲಿ ಪತ್ರ ತಂದ ಸೇವಕರಿಗೆ ಭರತನ ಪರಾಕ್ರಮವನ್ನು ವ್ಯಂಗ್ಯದ ಮೂಲಕ ಹೊಗಳುವ ಕೆಲಸವನ್ನು ಮಾಡುತ್ತಾನೆ.

''ಮುಂದಿಟ್ಟ ಚಕ್ರಮಂ ತಿರಿ
ತಂದುದುಮಂ ಪೊಡದಿರ್ದು ಬಯ್ತಂಗೊಳ್ವಂ
ದಂದದೆ ಕೊಂಡುದುಮನದೇ
ನೆಂದುನ್ನತಿಮಾಡಿ ಪೊಗಳ್ವೆಯೊಳಗ ಪೆಯದುದೇ''. (398)

ಚಕ್ರವನ್ನು ಮುಂದಿಟ್ಟುಕೊಂಡು ಭಿಕ್ಷೆಯನ್ನು ತಂದಂತೆ ರಾಜ್ಯವನ್ನು ಗೆಲ್ಲುವುದು ಶೌರ್ಯದ ಲಕ್ಷಣವಲ್ಲ. ಅದನ್ನೇ ಶ್ರೇಷ್ಠವೆಂದು ಹೊಗಳುತ್ತಿರುವೆಯಲ್ಲ ನಿನ್ನ ಬುದ್ಧಿಗೆ ಏನೆಂದು ಹೇಳಲಿ,

''ಧನಮೆಂಬುದು ವಿಭುಗೆ ಯಶೋ
ಧನಮದನಿಂತಣೆಪಿ ಕಣೆಪಿ ಕಿಡೆಮಾಡಿದಾನ
ತನ ಪಡೆದ ಧನಮದೇತಳ
ಧನಮದಳೆಂ ನಿಧನಮೆಯ್ದಿದರ್ ಪಲರರಸರ್''. (405)

ಹಣ ಎನ್ನುವುದು ರಾಜನಿಗೆ ಯಶಸ್ಸನ್ನು ಗಳಿಸಿಕೊಡುವುದಾಗಬೇಕು. ಆದರೆ ಅದನ್ನು (ಯಶಸ್ಸನ್ನು) ನಾಶ ಮಾಡಿ ಅದರಿಂದ ಪಡೆಯುವ ಹಣ ಹಲವಾರು ಅರಸರುಗಳ ನಾಶಕ್ಕೆ ಕಾರಣವಾಗಿದೆ. ಯಶೋಧನದಿಂದ ಯಾವ ರಾಜನೂ ನಾಶವಾಗಿಲ್ಲ ಎನ್ನುವುದರ ಮೂಲಕ ಹಣ ಮತ್ತು ಶಾಶ್ವತ ಕೀರ್ತಿಯಾದ ಯಶಸ್ಸು ಇವುಗಳಲ್ಲಿ ಬಾಹುಬಲಿ ಹಣವನ್ನು ತಿರಸ್ಕರಿಸುತ್ತಾನೆ. ಶಾಶ್ವತ ಕೀರ್ತಿಗಾಗಿ ಹಾತೊರೆಯುತ್ತಾನೆ.

''ಪಿರಿಯಣ್ಣಂಗೆರಗುವುದೇಂ
ಪರಿಭವಮೇ ಕೀಳೆ ನೆತ್ತಿಯೊಳ್ ಬಾಳಂ ನಿ
ರ್ನೆರೆಮೂಳೆ ಚಲದಿನೆದಿಗಿಸ
ಲಿರೆ ಭರತಂಗೆರಗುವೆಳಕಮಂಜುಮೆಯಲ್ತೇ''. (406)

ಹಿರಿಯಣ್ಣನಿಗೆ ನಮಸ್ಕರಿಸುವುದು ಅವಮಾನವಲ್ಲ. ಆದರೆ ನೆತ್ತಿಯಲ್ಲಿ ಕತ್ತಿಯನ್ನು ಚುಚ್ಚಿಕೊಂಡು ಛಲದಿಂದ ಬೇರೆಯವರನ್ನು ನಮಸ್ಕರಿಸುವಂತೆ ಬಲವಂತದಿಂದ ಮಾಡಿಸಿಕೊಂಡ ನಮಸ್ಕಾರ ಹೆದರಿಕೆಯದೇ ಹೊರತು ಪ್ರೀತಿಯಿಂದಲ್ಲ. ಅಂತಹ ಭರತನಿಗೆ ನಮಸ್ಕರಿಸುವ ನಮಸ್ಕಾರ ಹೆದರಿಕೆಯದೇ ಎಂದು ಬಾಹುಬಲಿ ಹೇಳುತ್ತಾನೆ. ಪುರುತನಯರು ಭರತನಿಂದ ದೂರಾಗಿ ತಪಸ್ಸಿಗೆ ಹೋಗಿದ್ದಾರೆ. ಆದರೆ ನಾನು ಹಾಗೆ ಹೆದರಿ ಹೋಗುವವನಲ್ಲ. ಸಂಗ್ರಾಮದಲ್ಲಿ ಇದರ ನಿಷ್ಕರ್ಷೆಯಾಗುತ್ತದೆ ಎಂದು ಭರತನ ದೂತನಿಗೆ ಹೇಳಿ ಕಳುಹಿಸುತ್ತಾನೆ.

ಭರತ ಬಾಹುಬಲಿಯರ ನಡುವೆ ಯುದ್ಧಾರಂಭವಾಗುತ್ತದೆ. ಉಭಯ ಬಲಗಳ ಮುಖ್ಯಸ್ಥರು ಇವರೀರ್ವರು ಚರಮ ದೇಹಧಾರಿಗಳಾಗಿರುವುದರಿಂದ ಯುದ್ಧ ಅತ್ಯಂತ ಕ್ರೂರ ಭಯಂಕರವಾದುದಾಗುತ್ತದೆ. ಆದ್ದರಿಂದ ಇಡೀ ಚತುರಂಗ ಬಲವನ್ನು ನಾಶಮಾಡುವುದಕ್ಕಿಂತ ನೀವೀರ್ವರೇ ಯುದ್ಧ ಮಾಡಿ ಎಂದು ಸಲಹೆ ನೀಡುತ್ತಾರೆ.

ಪರಸ್ಪರರಲ್ಲಿ ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧ ಪ್ರಾರಂಭವಾಗುತ್ತದೆ. ಬಾಹುಬಲಿ ಅಜಾನುಬಾಹು ಪರಸ್ಪರ ಕಣ್ಣು ಮಿಟುಕಿಸದೆ ನೋಡಬೇಕು. ಭರತ ಕುಳ್ಳಗಿನ ವ್ಯಕ್ತಿ. ಭರತ ಕತ್ತನ್ನು ಮೇಲೆತ್ತಿ ನೋಡಬೇಕು. ಬಾಹುಬಲಿ ಕೆಳಗೆ ನೋಡುತ್ತಾನೆ.

''ಲಲಿತ ಮುಖ ಸರಸಿಜಂ ನಿ
ಶ್ಚಳ ಪಕ್ಷ್ಮಂ ಸ್ತಿಮಿತ ತಾರಕಂ ಭುಜಬಲಿ ಕ
ಣ್ಣೊಳೆ ತವೆ ಪೀರ್ವವೊಲೇ ನಿ
ಶ್ಚಳ ತನು ನಡೆನೋಡೆ ಭರತ ರಾಜಂ ಸೋಲ್ತಂ''. (420)

ಭರತ ಕತ್ತೆತ್ತಿ ನೋಡುತ್ತಾ ನೋವು ಬಂದು ಮುಖವನ್ನು ಕೆಳಗೆ ಹಾಕುತ್ತಾನೆ. ಇಲ್ಲಿ ಭರತ ಸೋಲನ್ನು ಒಪ್ಪಿಕೊಳ್ಳುತ್ತಾನೆ. ನಂತರ ಇಬ್ಬರೂ ಜಲಯುದ್ಧಕ್ಕಿಳಿಯುತ್ತಾರೆ.

''ಕರಿಯಾಧ ಪತಿಗಳೆರಡುಂ
ಸರಸೀ ಜಳಮಂ ವಿಳಾಸದಿಂ ಪುಗುವವೊಲಾ
ದರದಿರಿದೆ ಪೊಕ್ಕು ತುಳುಕಿದ
ರರವಿಂದ ರಜಃ ಪಿಶಂತಾಚ್ಛೋದಕಮಂ''. (421)

ಬಲಾಢ್ಯವಾದ ಆನೆಗಳೆರಡು ಸರೋವರವನ್ನು ಹೊಕ್ಕು ಸಂತೋಷದಿಂದ ನೀರಾಟಕ್ಕಿಳಿದಾಗ ಅವುಗಳ ರಭಸಕ್ಕೆ ಸರೋವರ ತುಳುಕಿ ಹೋಗುತ್ತದೆ. ಭರತ ಎರಚಿದ ನೀರು ಬಾಹುಬಲಿಯ ಹೃದಯಭಾಗವನ್ನು ಮಾತ್ರ ತಲುಪುತ್ತವೆ. ಆದರೆ ಬಾಹುಬಲಿ ಎರಚಿದ ನೀರು ಭರತನನ್ನು ತೊಯ್ಯುತ್ತವೆ. ಬಾಹುಬಲಿಯ ಎದೆಯ ಮೇಲೆ ನೀರಿನ ಹನಿಗಳು ಮುತ್ತಿನಂತೆ ಹೊಳೆಯುವುದರ ಮೂಲಕ ಬಾಹುಬಲಿಯ ಗೆಲುವನ್ನು ಸಮರ್ಥಿಸುತ್ತದೆ. ಇಲ್ಲಿಯೂ ಭರತ ಸೋಲನ್ನಪ್ಪುತ್ತಾನೆ. ಉಳಿದಿರುವುದು ಮಲ್ಲಯುದ್ಧ.

''ಕನಕಾಚಳಮಂ ಪೊತ್ತಂದು
ಘನ ಮರಕತ ಶೈಲಮೆನಿಸಿ ಭುಜಬಲಿ ಸಕಳಾ
ವನಿ ತಳ ವಲ್ಲಭನಂ ಭೋಂ
ಕೆನೆತ್ತಿ ಪೊತ್ತಿರ್ದನಿಕ್ಕಲೊಲ್ಲದೆ ನೆಲದೊಳ್''. (424)

ಕನಕಾಚಲ ಪರ್ವತವನ್ನು (ಪಚ್ಚೆ, ರತ್ನ ಮುತ್ತುಗಳನ್ನು ಒಳಗೊಂಡ) ಮತ್ತೊಂದು ದೊಡ್ಡ ಮರಕತ ಪರ್ವತ ಹೊತ್ತಂತೆ ಬಾಹುಬಲಿ ಭರತನನ್ನು ಹೊತ್ತು ಕೆಳಗೆಸೆಯುಂತೆ ಮೆಲ್ಲನೆ ಕೆಳಗಿಳಿಸುತ್ತಾನೆ. ಇಲ್ಲಿ ಭರತ ಬಾಹುಬಲಿಯರ ವ್ಯಕ್ತಿತ್ವವನ್ನು ಪಂಪ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಇಬ್ಬರಲ್ಲಿಯ ಶ್ರೇಷ್ಠತೆ ಮರಕತ ಮತ್ತು ಕನಕಾಚಲ ಪರ್ವಗಳಿಗೆ ಹೋಲಿಸುವುದರಲ್ಲಿದೆ. ಹಿರಿಯಣ್ಣನಾದವನನ್ನು ಚಕ್ರವರ್ತಿಯಾದವನನ್ನು ನೆಲದೊಳು ಎಸೆದು ಅವಮಾನ ಮಾಡುವುದೇ ಎಂದು ಆಲೋಚಿಸಿ ಭರತನನ್ನು ಕೆಳಗಿಳಿಸುತ್ತಾನೆ. ಇಲ್ಲಿ ಬಾಹುಬಲಿಯ ವಿವೇಚನೆಯನ್ನು ಕಾಣುತ್ತೇವೆ. ಆದರೆ ಭರತ ಸೋಲಿನಿಂದ ಅವಮಾನಿತನಾಗಿ ಬಾಹುಬಲಿಯ ಮೇಲೆ ರತ್ನವನ್ನು ಪ್ರಯೋಗಿಸುತ್ತಾನೆ. ಆದರೆ ಚಕ್ರರತ್ನ ಬಾಹುಬಲಿಯ ಪಕ್ಕದಲ್ಲಿ ಬಂದು

ನಿಲ್ಲುತ್ತದೆ. ಇದರಿಂದ ಬಾಹುಬಲಿ ಭರತನ ಬಗ್ಗೆ ಅಸಹ್ಯಪಟ್ಟುಕೊಳ್ಳುತ್ತಾನೆ. ಬಾಹುಬಲಿಗೆ ರಾಜ್ಯಲಕ್ಷ್ಮಿಯ ಬಗ್ಗೆ ವಿರಹಾಸಕ್ತಿ ಉಂಟಾಗುತ್ತದೆ. ತಪಸ್ಸಿಗೆ ಮನಸ್ಸು ಹಾತೊರೆಯುತ್ತದೆ.

> ''ಕಳೆದಿಡುವುದೆ ಕಷ್ಟಂ ಭೂ
> ತಳ ರಾಜ್ಯ ವಿಮೋಹಮಚಿರ ರುಚಿ ಸಂಚಳಮಿಂ
> ತಳವುಗಿಡಿಸಿದುದು ಮನು ಕುಲ
> ತಿಳಕನುಮಂ ಖಳ ಮಹೀಶರುಳಿದವರಳವೇ''. (432)

ಭೂಮಿಯ ಮೇಲಿನ ಮೋಹವನ್ನು ಕಳೆದುಕೊಳ್ಳುವುದು ಕಷ್ಟ. ಇದರ ರುಚಿ, ಕಾಂತಿ, ಎಂತಹವರನ್ನೂ ಚಂಚಲಗೊಳಿಸುತ್ತದೆ. ಭರತನಂತಹವನೇ ಇದಕ್ಕೆ ಆಸೆ ಪಟ್ಟಿದ್ದಾನೆಂದ ಮೇಲೆ ಸಾಮಾನ್ಯ ರಾಜರಾದವರ ಗತಿಯೇನು ಎಂದು ಪಂಪ ಬಾಹುಬಲಿಯ ಮೂಲಕ ರಾಜ್ಯಲಕ್ಷ್ಮಿಯ ಮೇಲಿನ ಮೋಹದ ಬಗ್ಗೆ ಹೇಳಿಸುತ್ತಾನೆ. ಅಶಾಶ್ವತವಾದ ರಾಜ್ಯಲಕ್ಷ್ಮಿಗೆ ಹಾತೊರೆಯುವುದಕ್ಕಿಂತ ಶಾಶ್ವತ ಮೋಕ್ಷಲಕ್ಷ್ಮಿಯನ್ನು ಒಲಿಸಿಕೊಂಡು ಇಡೀ ಭೂಮಂಡಲವನ್ನು ತನ್ನಡಿಗಳಿಗೆರಗಿಸುತ್ತೇನೆ ಎಂದು ಪ್ರತಿಜ್ಞೆಗೈಯ್ಯುತ್ತಾನೆ ಬಾಹುಬಲಿ. ಬಾಹುಬಲಿಯ ನಿರ್ಧಾರಕ್ಕೆ ನಾಚಿಕೆಯಿಂದ ಭರತ ತಲೆತಗ್ಗಿಸುತ್ತಾನೆ. ಬಾಹುಬಲಿ ಭರತನನ್ನು ಸಮಾಧಾನಪಡಿಸಿ ನಿನ್ನಲ್ಲಿ ಹಿರಿದಾದ ಅವಿನಯವನ್ನು ತೋರಿದ್ದೇನೆ ನನ್ನ ತಪ್ಪುಗಳನ್ನು ಮನ್ನಿಸು ಎಂದು ಕ್ಷಮೆ ಯಾಚಿಸುತ್ತಾನೆ. ಭರತನ ಕಣ್ಣುಗಳಲ್ಲಿ ಅಶ್ರುಬಿಂದು ಸುರಿಯುತ್ತವೆ. ಇವು ಬಾಹುಬಲಿಯ ಪಾದವನ್ನು ತೊಯ್ಸಿದರೆ ಬಾಹುಬಲಿಯ ಅಶ್ರುಬಿಂದುಗಳು ಭರತನಿಗೆ ಅಭಿಷೇಕಮಾಡಿದಂತೆ ಎಂದು ವರ್ಣಿಸುತ್ತಾನೆ ಪಂಪ. ಬಾಹುಬಲಿ ತಪಸ್ಸಿಗೆ ತೊಡಗುತ್ತಾನೆ. ಆದರೂ ಭರತನ ರಾಜ್ಯದಲ್ಲಿದ್ದೇನೆ ಎನ್ನುವ ಕೀಳರಿಮೆಯಿಂದ ಜ್ಞಾನೋದಯವಾಗುವುದಿಲ್ಲ. ಇದನ್ನರಿತ ಭರತ ಬಾಹುಬಲಿಯ ಹತ್ತಿರ ಬಂದು ಅರ್ಚಿಸಿ ಅವನ ಅನುಮಾನವನ್ನು ಬಗೆಹರಿಸುತ್ತಾನೆ. ಆಗ ಅವನಿಗೆ ಕೇವಲ ಜ್ಞಾನೋದಯವಾಗುತ್ತದೆ.

ಇತ್ತ ಆದಿದೇವ ಪರಿನಿರ್ವಾಣವಾಗುತ್ತಾನೆ. ಭರತ ಚಕ್ರವರ್ತಿ ಬಂದು ಪೂಜಾವಿಧಿಗಳನ್ನು ನೆರವೇರಿಸುತ್ತಾನೆ. ಮುಂದೆ ಭರತನೂ ದೀಕ್ಷೆಯನ್ನು ಕೈಗೊಳ್ಳುತ್ತಾನೆ. ಒಟ್ಟಾರೆಯಾಗಿ ಆದಿಪುರಾಣ ಧರ್ಮಗ್ರಂಥ ಅಷ್ಟೆ ಆಗದೆ ಅದೊಂದು ರಸವತ್ತಾದ ಕಾವ್ಯ. ಭೋಗಜೀವನದಿಂದ ಯೋಗಜೀವನದೆಡೆಗೆ ಸಕಲ ಜೀವಿಗಳನ್ನು ಕೊಂಡೊಯ್ಯುವ ಕೃತಿಯಾಗಿ ಮೂಡಿದೆ. ಆದಿದೇವ ಭೋಗದಿಂದ ಯೋಗದೆಡೆಗೆ ಸಾಗಿದರೆ ಬಾಹುಬಲಿ ವೈಭೋಗದಿಂದ ತ್ಯಾಗದೆಡೆಗೆ ಸಾಗುತ್ತಾನೆ. ಭರತನ ಅಹಂಕಾರದ ಪರಮಾವಧಿಯ ತಪ್ಪನ್ನು ಅತ್ಯಂತ ಸೂಕ್ಷ್ಮವಾಗಿ ತಿಳಿಸಿಕೊಡುತ್ತಾನೆ.

ಕುವೆಂಪುರವರು ಹೇಳುವಂತೆ ವಿಕ್ರಮಾರ್ಜುನ ವಿಜಯದಲ್ಲಿ ಬಹಿರ್ಮುಖತೆ ಧನುರ್ಧಾರಿಯಾಗಿದ್ದರೆ ಆದಿಪುರಾಣದಲ್ಲಿ ಅಂತರ್ಮುಖತೆ ಧ್ಯಾನಶೀಲವಾಗಿದೆ. ವಿಕ್ರಮಾರ್ಜುನ ವಿಜಯ ಹಿಂಸೆಯ ಕುರುಕ್ಷೇತ್ರಗಳನ್ನು ಸೃಷ್ಟಿಸಿದರೆ ಆದಿಪುರಾಣ ಅಹಿಂಸೆಯ ತಪಃಕ್ಷೇತ್ರಗಳನ್ನು ಸೃಷ್ಟಿಸುತ್ತದೆ. ಧರ್ಮದ ಹಿನ್ನೆಲೆಯನ್ನು ತಿಳಿಸಿಕೊಡುವ ಒಂದು ಶ್ರೇಷ್ಠ ಕೃತಿಯಾಗಿ ಆದಿಪುರಾಣ ಹೊರಹೊಮ್ಮಿರುವುದು ಕುವೆಂಪು ಮಾತುಗಳಲ್ಲಿ ತಿಳಿಯುತ್ತದೆ.

## ವಿಕ್ರಮಾರ್ಜುನ ವಿಜಯ (ಎಲ್. ಗುಂಡಪ್ಪ)

ವಿಕ್ರಮಾರ್ಜುನ ವಿಜಯದ ಒಂಭತ್ತು ಮತ್ತು ಹತ್ತನೇ ಸಂಧಿಗಳು ಅತ್ಯಂತ ವಿಶಿಷ್ಟವಾದವು. ದ್ಯೂತದಿಂದ ವನವಾಸವನ್ನು ಅನುಭವಿಸಿ, ಅಜ್ಞಾತವಾಸದಿಂದ ಪಾರಾಗಿ ರಾಜ್ಯವನ್ನು ಪಡೆಯಲು ಸಂಧಾನ ಪ್ರಾರಂಭಿಸುವ ಅಧ್ಯಾಯ ಒಂಭತ್ತನೆಯದು. ರಾಜಸೂಯ ಯಾಗದಲ್ಲಿ ದುರ್ಯೋಧನನ ಅವಮಾನ, ದ್ರೌಪದಿಯ ಮಾನಭಂಗ, ಭೀಮ ದ್ರೌಪದಿಯರ ಶಪಥ ಇವೆಲ್ಲದರ ಹಿನ್ನೆಲೆಯಲ್ಲಿ ಸಂಧಾನ ಕಾರ್ಯಕ್ಕೆ ಮಹತ್ವ ಬರುತ್ತದೆ. ಅಭಿಮನ್ಯುವಿನ ವಿವಾಹದಿಂದ ವಿರಾಟರಾಜನ ಬೆಂಬಲವನ್ನು ಪಡೆದ ಪಾಂಡವರು ದುರ್ಯೋಧನನ ಅಸೂಯೆಯ ಕೆಂಗಣ್ಣಿಗೆ ತುತ್ತಾಗುತ್ತಾರೆ. ಉತ್ತರಗೋಗ್ರಹಣ ದುರ್ಯೋಧನನ ಅವಮಾನದ ಸಂಗತಿಯಾಗಿ ಮಾರ್ಪಡುತ್ತದೆ. ಭೂಮಿಯನ್ನು ಕೊಡುವುದಕ್ಕೆ ದುರ್ಯೋಧನ ಸಂಪೂರ್ಣವಾಗಿ ತಿರಸ್ಕಾರ ಪೂರಕವಾಗಿದ್ದಾನೆ.

ಒಂಭತ್ತನೇ ಸಂಧಿ ಅಭಿಮನ್ಯು ಉತ್ತರೆಯ ವಿವಾಹದಿಂದ ಪ್ರಾರಂಭವಾಗುತ್ತದೆ. ವಿರಾಟರಾಯನ ಪರವಾಗಿರುವ ಪಾಂಡವರ ಪರವಾಗಿರುವ ರಾಜರುಗಳೆಲ್ಲ ಒಂದೆಡೆ ಸೇರಿದ್ದಾರೆ. ಕೃಷ್ಣನ ಸಹಾಯಕ್ಕಾಗಿ ಅರ್ಜುನ ದ್ವಾರಕೆಗೆ ಬಂದು ಕೃಷ್ಣನ ಪದತಲದಲ್ಲಿ ಕುಳಿತಿದ್ದಾನೆ. ದುರ್ಯೋಧನ ತಲೆಯಭಾಗದಲ್ಲಿ ಕುಳಿತಿದ್ದಾನೆ. ಇಲ್ಲಿಂದ ಕೃಷ್ಣನ ತಂತ್ರಗಾರಿಕೆ ಪ್ರಾರಂಭವಾಗುತ್ತದೆ. ಮೊದಲಿಗೆ ಅರ್ಜುನನನ್ನು ತಾನು ಕಂಡದ್ದರಿಂದ ಅವನಿಗೆ ಮೊದಲು ಅವಕಾಶ ಕೊಡುತ್ತಾನೆ. ಅರ್ಜುನ ಕೃಷ್ಣನನ್ನು ಆರಿಸಿಕೊಂಡರೆ, ದುರ್ಯೋಧನನಿಗೆ ಚತುರಂಗ ಬಲವನ್ನು ಯಾದವರನ್ನು ನೀಡುತ್ತಾನೆ. ವಿರಾಟರಾಯನ ಆಸ್ಥಾನಕ್ಕೆ ಬಂದ ಮೇಲೆ ಸಂಧಿಗಾಗಿ ಕೃಷ್ಣನನ್ನು ಕಳಿಸುವ ಏರ್ಪಾಟು ನಡೆಯುತ್ತದೆ. ಧರ್ಮರಾಯನ ಮಾತಿಗೆ ಭೀಮನನ್ನು ಉಳಿದು ಇತರರು ಎದುರಾಡುತ್ತಿಲ್ಲ. ಭೀಮನ ಕೋಪ ನೆತ್ತಿಗೇರುತ್ತದೆ. ದುರ್ಯೋಧನನ ಹೀನಕಾರ್ಯಗಳನ್ನು ಪಟ್ಟಿ ಮಾಡುತ್ತಾನೆ.

''ಆ ಲಾಕ್ಷಾಗೃಹ ದಾಹಮೊಂದೆ ವಿಷಸಂಯುಕ್ತಾನ್ನದುಂತೊಂದೆಪಾಂ
ಚಾಲೀ ನಿಗ್ರಹಮೊಂದೆ ಟಕ್ಕುದಗೆಯಿಂ ಗೆರ್ದ್ದಿರ್ದ ಜಂದೊಂದೆ ಶಾ
ದೂರ್ಲಾಭೀಲ ವನಂಗಳೊಳ್ ತಿರಿಪಿದೀಯುರ್ಕೊಂದೆ ಲೆಕ್ಕಂಗೊಳಲ್
ಕಾಲಂ ಸಾಲವೆ ಕಂಡು ಮುಂಡುಮೆಮಗಿನ್ನಾಂತಗಳೊಳ್ ಪಾಪಿಯೇ''.

ದುರ್ಯೋಧನ ಅರಗಿನ ಮನೆಯಲ್ಲಿ ನಮ್ಮನ್ನು ಸುಡಲು ಪ್ರಯತ್ನಿಸಿದ್ದು, ವಿಷವನ್ನು ಆಹಾರದಲ್ಲಿ ಹಾಕಿದ್ದು, ದ್ರೌಪದಿಯ ಅಪಮಾನ ಮಾಡಿದ್ದು, ಮೋಸದಿಂದ ಜೂಜನ್ನು ಗೆದ್ದಿದ್ದು, ಅರಣ್ಯಗಳಲ್ಲಿ ಅಲೆದಿದ್ದು ಲೆಕ್ಕವಿಡುತ್ತಾ ಹೋದರೆ ಕಾಲವೇ ಸಾಲದಾಗುತ್ತದೆ. ಹೀಗಿರುವಾಗ ಅವನೊಂದಿಗೆ ರಾಜ್ಯವನ್ನು ಹಂಚಿಕೊಳ್ಳುವ ಅಥವಾ ಅವನು ಕೊಡುವ ಊರುಗಳನ್ನು ಭಿಕ್ಷೆ ಬೇಡುವಂತೆ ಬೇಡಿ ಬದುಕುವುದು ಬೇಕಿಲ್ಲ ಎಂದು ಖಡಾಖಂಡಿತವಾಗಿ ಹೇಳುತ್ತಾನೆ. ಭೀಮನ ಮಾತುಗಳನ್ನು ಬೆಂಬಲಿಸುವಂತೆ ಧರ್ಮರಾಯ ಭೀಮನನ್ನು ಹೊಗಳುತ್ತಾನೆ. ಅವನ ಶೌರ್ಯ ಪರಾಕ್ರಮ ಮುಂತಾದವುಗಳನ್ನು ಎತ್ತಿ ಹಿಡಿಯುತ್ತಾನೆ.

''ಬಕ ಕಿಮ್ಮೀರ ಜಟಾಸುರೋದ್ಧತ ಜರಾಸಂದರ್ಕಳಂ ಸಂದ ಕೀ
ಚಕರಂ ನೂರ್ವರುಮಂ ಪಡಲ್ವಡಿಸಿದೀ ತ್ವಚ್ಚಂಡದೋರ್ದಂಡ ಮು
ಗ್ರ ಕುರುಕ್ಷ್ಮಾಸ ಮಹೀರುಹ ಪ್ರಕರಮಂ ಮತ್ತೇಭವಿಕ್ರೀಡಿತ
ಕ್ಕೆ ಕರಂ ಪೋಲ್ವೆಗೆ ವಂದು ಭೀಮ ರಣದೊಳ್ ನುರ್ಗಾಡದೇಂ
ಪೋಕುಮೇ''.

ಬಕ, ಕಿಮ್ಮೀರ, ಜಟಾಸರು, ಜರಾಸಂಧ ಕೀಚಕರಾದಿಯಾಗಿ ನೂರು ತಮ್ಮಂದಿರನ್ನು ಕೊಂದವನಿಗೆ ಕುರುವಂಶ ಲೆಕ್ಕವೇ ? ಯುದ್ಧ ಭೂಮಿಯಲ್ಲಿ ಕೌರವರು ನುಚ್ಚುನುಗ್ಗಾಗಿ ಹೋಗುವುದಿಲ್ಲವೇ ? ಎಂದು ಹೇಳುವುದರ ಮೂಲಕ ಒಂದೆಡೆ ಭೀಮನ ಪರಾಕ್ರಮ ಮತ್ತೊಂದೆಡೆ ಕೌರವರ ಬಗೆಗಿನ ಸಹೋದರತೆ ಎರಡನ್ನೂ ಬಿಟ್ಟುಕೊಡದ ಸ್ಥಿತಿಯಲ್ಲಿ ಕಂಡು ಬರುತ್ತಾನೆ. ಕೃಷ್ಣನನ್ನು ಸಂಧಿಗಾಗಿ ಕಳುಹಿಸುವ ಪ್ರಯತ್ನದಲ್ಲಿ ಧರ್ಮರಾಯ ಯಶಸ್ವಿಯಾಗುತ್ತಾನೆ.

ಕೃಷ್ಣ ದುರ್ಯೋದನನ ಆಸ್ಥಾನವನ್ನು ಪ್ರವೇಶಿಸುವ ಮೊದಲು ವಿದುರನ ಮನೆಯಲ್ಲಿ ಆತಿಥ್ಯವನ್ನು ಸ್ವೀಕರಿಸಿ ಮೂರನೆಯ ದಿನ ದುರ್ಯೋಧನನ ಆಸ್ಥಾನವನ್ನು ಪ್ರವೇಶಿಸುತ್ತಾನೆ.

''ಕುವಳಯ ಬಾಂಧವನೆಸೆವನೆ
ಕುವಳಯುಮಂ ಬೆಳಗಿ ಕುವಳಯಂ ಪೊದಿಗೆನೆ ಪಾಂ
ಡವರೆ ಪೊಟಿಗಾಗೆ ನಿನಗೀ
ಕುವಳಯ ಪತಿಯೆಂಬ ಪೆಂಪೊಡಂಬಡೆ ನೃಪತೀ''.

ಚಂದ ಕನ್ನೈದಿಲೆಯ ಒಡೆಯನಾಗಿರುವನು ಆಕಾಶವನ್ನು ಬೆಳಗುವುದರ ಜೊತೆಗೆ ಭೂಮಿಯನ್ನು ಬೆಳಗುತ್ತಾನೆ. ಹಾಗೆ ಪಾಂಡವರು, ಹೀಗಿರುವಾಗ ಪಾಂಡವರಿಲ್ಲದೆ ನೀನು ಭೂಮಿಯನ್ನು ಆಳಲು ಸಾಧ್ಯವೇ ಎಂದು ಹೇಳುವುದರ ಮೂಲಕ ಪಾಂಡವರನ್ನು ಚಂದ್ರನಿಗೆ ಹೋಲಿಸುವ ಕೆಲಸವನ್ನು ಮಾಡುತ್ತ ಚಂದ್ರನಿಲ್ಲದೆ ಕನ್ನೈದಿಲೆಯ ಪತಿ ಯಾರೂ ಆಗಲು ಸಾಧ್ಯವಿಲ್ಲ. ಹಾಗಿರುವಾಗ ನೀನು ಈ ಭೂಮಿಯ ಒಡೆಯನಾಗಲು ಸಾಧ್ಯವಿಲ್ಲ ಎನ್ನುತ್ತಾನೆ ಕೃಷ್ಣ.

''ಮನಂತದಿಂದೊಂದೊರ್ವರ
ನಿನಿಸನಗಲ್ದಿರ್ದಿಸೆರಿನಿ ನಿಮಗಂ ತಮಗಂ
ಮುನಿಸುಂಟೆ ಕಾಯ್ದ ಬೆನ್ನೀರ್
ಮನೆ ಸುಡದೆಂಬೊಂದು ನುಡಿಯವೋಲ್ ಕುರುರಾಜಾ''.

ಮನಸ್ಸಿನ ಬೇಸರದಿಂದ ಒಬ್ಬೊಬ್ಬರು ತಮತಮಗೆ ಮುನಿಸನ್ನು ಮಾಡಿಕೊಂಡು ಬದುಕಿದರೆ 'ಬಿಸಿನೀರಿನಿಂದ ಮನೆ ಸುಡಲು ಸಾಧ್ಯವಿದೆ' ಎನ್ನುವ ಗಾದೆ ಮಾತನ್ನು ನೆನಪಿಸಿದಂತಾಗುತ್ತದೆ. ನೀವೀರ್ವರೂ ಪರಸ್ಪರ ಮುನಿಸು, ದ್ವೇಷದಿಂದ ಬದುಕುವುದಕ್ಕಿಂತ ಹೊಂದಾಣಿಕೆ ಮಾಡಿಕೊಂಡು ಬದುಕುವುದೇ ಉತ್ತಮ ಎನ್ನುವಂತೆ ಕೃಷ್ಣ ಬುದ್ಧಿವಾದವನ್ನು ಹೇಳುತ್ತಾನೆ.

ಕೃಷ್ಣನನ್ನು ಸುಯೋಧನ, ದುಶ್ಯಾಸನಾದಿಗಳಲ್ಲಿ ಜಾತಿ ಹಿಡಿದು ಬಯ್ಯುವವರೆಗೆ ತಲುಪುತ್ತಾರೆ. ಕೃಷ್ಣ ಸಾಮ, ದಾನ, ಬೇದ, ದಂಡ ನಾಲ್ಕು ಉಪಾಯಗಳಲ್ಲಿ ಮೊದಲೆರಡರ ಮೂಲಕ ದುರ್ಯೋಧನನ ಮನಸ್ಸನ್ನು ಬದಲಾಯಿಸುವ ತಂತ್ರವನ್ನು ಮಾಡುತ್ತಾನೆ. ಆದರೆ ಅದರ ಹಿಂದಿನ ಉದ್ದೇಶ ಛಲವನ್ನು ಮೂಡಿಸಿ ಪಾಂಡವರ ಬಗ್ಗೆ ಕಠೋರ ನಿಲುವನ್ನು ತಾಳುವುದರಂತೆ ಮಾಡುವುದಾಗಿದೆ.

''ಸೀತೆಯ ದೂಸಣೆಂದಳೆದ ರಾವಣನಂತಿರೆ ನೀನುಮೀಗಳೀ
ಸೀತೆಯ ದೂಸರೆಂದರೆಯಲಾಟಿಸಿದ್ಯೆ ನಿನಗಂತು ಸೀತೆಯೇ
ಸೀತೆ ಕಡಂಗಿ ಕಾಯ್ದು ಕಡೆಗಣ್ಚಿದಳಪ್ಪೊಡೆ ಧಾತ್ರನಿಂ ತೊದ
ಖ್ಯಾತಿನೊಳೇನೋ ಪಾಂಡವರ ಕೆಯ್ಯೆಳೆ ನಿನ್ನ ನಿಸೇಕಮಾಗದೇ !

ಇಲ್ಲಿ ಸೀತೆ ಪದ ನಾಮಪದವಾಗಿ ಬಳಕೆಯಾಗುವುದಕ್ಕಿಂತ ಶ್ಲೇಷೆಯಾಗಿ ಬಳಕೆಯಾಗಿದೆ. ಭೂಮಿಯನ್ನು ಸೀತೆ ಎಂದು ಕರೆಯುವ ಕೆಲಸ ಮಾಡಿದ್ದಾನೆ ಪಂಪ. ಸೀತೆಯ ಅಂದರೆ ಭೂಮಿಯ ದೆಸೆಯಿಂದ ನೀನೀಗ ರಾವಣನಂತಾಗಿದ್ದೀಯ. ನಾಶ ಹೊಂದುತ್ತೇನೆ ಎಂದು ಗೊತ್ತಿದ್ದರೂ ರಾವಣ ಸೀತೆಯನ್ನು ರಾಮನಿಗೊಪ್ಪಿಸಲಿಲ್ಲ. ಹಾಗೆ ನೀನೂ ಕೂಡ ಪಾಂಡವರಿಗೆ ಭೂಮಿಯನ್ನು ಒಪ್ಪಿಸುತ್ತಿಲ್ಲ. (ಸೀತೆಯ)

ಭೂಮಿಯ ದೆಸೆಯಿಂದ ನಾಶಹೊಂದಲು ಬಯಸಿದಂತೆ ಬ್ರಹ್ಮ ನಿನ್ನಲ್ಲಿ ಬರೆದಂತಿದೆ. ಹೀಗಿರುವಾಗ ಉಪದೇಶದ ಮಾತುಗಳು ನಿನಗೆ ರುಚಿಸಲಾರವು. ಪಾಂಡವರ ಕೈಯಲ್ಲಿ ನಿನ್ನ ನಿಸೇಕವಾಗುತ್ತದೆ ಎನ್ನುವುದರ ಮೂಲಕ ಕೃಷ್ಣ ದುರ್ಯೋಧನನ ಅವಸಾನದ ಸೂಚನೆಯನ್ನು ನೀಡುತ್ತಾನೆ.

''ಗಜೆಗೊಳೆ ಭೀಮಸೇನನಿದಿರಾಂತು ಬರ್ದುಂಕುವ ವೈರಿ ಭೂಭುಜ
ಧ್ವಜನಿಗಳಿಲ್ಲದಲ್ಲದೆಯಲೀ ಯುವರಾಜನ ನೆತ್ತರಂ ಕುರು
ಧ್ವಜನಿಯೆ ನೋಡೆ ಪೀರ್ದು ಭವದೂರು ಯುಗಂಗಳನಾಜಿರುಗದೊಳ್
ಗಿಜಿ ಗಿಜಿಮಾಡಲೆಂದವನ ಪೂಣ್ದದು ನಿಕ್ಕುವಮಾಗದಿರ್ಕುಮೇ''.

ಯುದ್ಧದಲ್ಲಿ ಭೀಮಸೇನನ ಎದುರಿಗೆ ಬದುಕುವ ಶತ್ರು ರಾಜರುಗಳು ಯಾರೂ ಇಲ್ಲ. ಯುವರಾಜನ ರಕ್ತವನ್ನು ಹೀರುವ ಶಪಥ ಬೇರೆ ಮಾಡಿದ್ದಾನೆ. ಹೀಗಿರುವಾಗ ಯುದ್ಧರಂಗದಲ್ಲಿ ಕೌರವರನ್ನು ಗಿಜಗಿಜಿ ಮಾಡುವುದಾಗಿ ಪ್ರತಿಜ್ಞೆ ಮಾಡಿರುವುದು ನಿಮ್ಮನ್ನು ನಾಶಗೊಳಿಸದೇ ಬಿಡನು ಎಂಬುದಾಗಿ ಹೇಳುವುದರ ಮೂಲಕ ಕೌರವರ ನಾಶದ ಮುನ್ಸೂಚನೆಯನ್ನು ನೀಡುತ್ತಾನೆ.

''ಪೊಂಗಿ ಕಡಂಗಿ ಬೀರದೊಳೆ ಬೀಗುವ ನಿನ್ನಣುಗಾಳೆ ನೋಡೆ ನಿ
ನ್ನಂಗನೆಯರ್ ತೊವಲ್ಗೊಳೆ ಭಯಂಗೊಳೆ ಕೋಡಗಗಟ್ಟುಗಟ್ಟಿ ಚಿ
ತ್ರಾಂಗದನುಯ್ಯೆ ನಿನ್ನ ನೆಡೆಮಾಡದಸುಂಗೊಳೆ ಕೇದಿ ತಂದ ನೀ
ರಂಗರಿಗಂಗೆ ನೀಂ ಮಲೆದು ನಿಲ್ವುದ ಪಾಳೆವಲಂ ಸುಯೋಧನಾ''.

ಇಷ್ಟೆಲ್ಲ ಜಂಭ, ಅಹಂಕಾರವನ್ನು ತೋರಿಸುತ್ತಿರುವ ನಿನ್ನನ್ನು ಚಿತ್ರಾಂಗದನು ಬಂಧಿಸಿ ಹೊತ್ತೊಯ್ಯುವಾಗ ನಿನ್ನ ಅಂಗರಾಜ್ಯಾಧಿಪತಿಯಾದ ಕರ್ಣನಾಗಲೀ, ಸಹೋದರನಾಗಲೀ ಬಿಡಿಸಲಾಗಲಿಲ್ಲ. ನಿನ್ನ ಹೆಣ್ಣುಗಳ ಆಕ್ರಂದನಕ್ಕೆ ಕರಗಿ ಆಕಾಶಮಾರ್ಗದಲ್ಲಿ ಚಿತ್ರಾಂಗದನೆದುರಿಸಿ ಯುದ್ಧ ಮಾಡಿ ಬಿಡಿಸಿಕೊಂಡು ಬಂದವರ ವಿರುದ್ಧ ಯುದ್ಧಕ್ಕೆ ನಿಲ್ಲುವುದು ಸರಿಯೇ ಎಂದು ದುರ್ಯೋಧನನ ಹಿಂದಿನ ಘಟನೆಗಳನ್ನು ನೆನಪಿಸುತ್ತಾನೆ. ಇದರ ಉದ್ದೇಶ ದುರ್ಯೋಧನನ ಮನಕರಗಲಿ ಎಂದಲ್ಲ. ಪಾಂಡವರ ಶೌರ್ಯದ ಬಗ್ಗೆ ಅಸಹನೆಯುಂಟಾಗಿ ಕೋಪ ಹೆಚ್ಚಾಗಿ ಯುದ್ಧವನ್ನೇ ಆಯ್ದುಕೊಳ್ಳಲಿ ಎಂದು.

''ಗುರುವಿಲ್ಲಾ, ಕರ್ಣನಿಲ್ಲಾ, ಗುರುವಿನ ಮಗನಿಲ್ಲಾ, ಕೃಪಾಚಾರ್ಯನಿಲ್ಲಾ
ಕುರುರಾಜಾ ನಿನ್ನ ತಮ್ಮಂದಿರೊಳೆನಿಬರೊಳಾರಿಲ್ಲ ಗಾಂಗೇಯನಿಲ್ಲಾ
ಮರುಳೇ ಗಾಂಡೀವಿಯಾರೆಂದೆಣಿಕೆಗಳೆವೆ ಗಂದರ್ವರುಯ್ವಂಡು ನಿನ್ನಂ
ಕರುದಿಟ್ಟಂತಿರ್ದುದಿಲ್ಲಾ ನೆರೆದ ಕುರುಬಲಂ ತಂದವಂ ಪಾರ್ಥನಲ್ಲಾ''.

ಗಂಧರ್ವರು ನಿನ್ನನ್ನು ಅಪಹರಿಸುವಾಗ ನೀನೇಳುವಾದ ವೀರಾದಿವೀರರ

ಶೌರ್ಯ ಪರಾಕ್ರಮಗಳು ಏನಾಗಿದ್ದವು? ದ್ರೋಣ ನಿನ್ನ ಗುರು ಗೆಳೆಯನಾದ ಕರ್ಣ ದ್ರೋಣನ ಮಗ ಅಶ್ವತ್ಥಾಮ, ಕೃಪಾಚಾರ್ಯ ಇವರೆಲ್ಲರೂ ಮೌನವಾಗಿದ್ದೇಕೆ ? ಅಥವಾ ಅವರಲ್ಲಿ ಅಂತಹ ಪರಾಕ್ರಮವಿರಲಿಲ್ಲವೇ ? ಅದೂ ಹೋಗಲಿ ನಿನ್ನ ತಮ್ಮಂದಿರ ಶೌರ್ಯವೆಲ್ಲಿ ಹೋಗಿತ್ತು. ಭೀಷ್ಮನ ಪರಾಕ್ರಮವೇನಾಗಿತ್ತು ? ಅರ್ಜುನನಿಲ್ಲದಿದ್ದವೆ ನೀನೆಂದೂ ನಶಿಸಿಹೋಗುತ್ತಿದ್ದೆ. ನಿನಗೆ ಜೀವದಾನ ನೀಡಿರುವನು ಗಾಂಡೀವಿ. ಇಂದು ಅವರನ್ನೇ ಧಿಕ್ಕರಿಸಿ ಕಡೆಯವರ ಪರಾಕ್ರಮಗಳು ಅರ್ಜುನನಿಗೆ ಸರಿಸಾಟಿಯೇ ಅಲ್ಲ ಎಂದು ತೀರ್ಮಾನಿಸುತ್ತಾನೆ. ಕೊನೆಗೂ ಸಂಧಿ ಮುರಿದು ಬೀಳುತ್ತದೆ. ಕೃಷ್ಣ ಕುಂತಿಯೆಡೆಗೆ ಬಂದು ಕರ್ಣನ ತ್ಯಾಗವನ್ನು ಕುರಿತು ಮಾತನಾಡುತ್ತಾ ಕರ್ಣನ ಮೂಲಕ ತಮ್ಮ ಜಯಕ್ಕೆ ಅಡಿಗಲ್ಲನ್ನು ಹಾಕುವ ಪ್ರಯತ್ನಕ್ಕೆ ಕುಂತಿಯನ್ನು ಪ್ರೇರೇಪಿಸುತ್ತಾನೆ. ಇಂದ್ರನಿಗೆ ಕವಚ ಕುಂಡಲ ನೀಡಿದ ಕಥೆಯನ್ನು ನೆನಪಿಸುತ್ತಾನೆ. ತ್ಯಾಗದ ಬಗೆಗಿನ ಕರ್ಣನ ಅಭಿಮಾನವನ್ನು ಬಳಸಿಕೊಳ್ಳುವ ಹುನ್ನಾರವನ್ನು ಮಾಡುತ್ತಾನೆ.

ಸಾಮ, ದಾನದಿಂದ ದುರ್ಯೋಧನ ಬಗ್ಗದಿದ್ದಾಗ ಭೇದ ಪ್ರಕರಣಕ್ಕೆ ಕೃಷ್ಣ ಕೈಹಾಕುತ್ತಾನೆ. ಕರ್ಣನ ಶಕ್ತಿಯನ್ನು ಕುಂದಿಸುವುದರ ಮೂಲಕ, ಅವನ ಮನಸ್ಸಿನಲ್ಲಿ ಅಧೀರತೆಯ ಬೀಜವನ್ನು ಬಿತ್ತುವ ಪ್ರಯತ್ನ ಮಾಡುತ್ತಾನೆ. ದುರ್ಯೋಧನನ ಆಸ್ಥಾನದಿಂದ ಹೊರಬಿದ್ದು ಕರ್ಣನ ವಿಷಯವನ್ನು ಕುಂತಿಗೆ ತಿಳಿಸಿ ಕರ್ಣನನ್ನು ಸ್ವಲ್ಪ ದೂರ ಕಳುಹಿಸಿಕೊಟ್ಟು ಬಾ ಎಂದು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಹೊರಡುತ್ತಾನೆ. ಕರ್ಣನಿಗೋ ಆಶ್ಚರ್ಯದ ಮೇಲೆ ಆಶ್ಚರ್ಯ. ತೊಡೆಸೋಂಕಿನಲ್ಲಿ ಕುಳಿತುಕೊಂಡಾಗ ಮತ್ತಷ್ಟು ಆಶ್ಚರ್ಯ. ಇದುವರೆಗೂ ಕಾಣದ ಪ್ರೀತಿ ವಿಶ್ವಾಸ ಇಂದೇಕೆ? ಎನ್ನುವುದು. ಆಗ ಕೃಷ್ಣ ಬಾವ ಮೈದುನತನದ ಮೂಲಕ ಕರ್ಣನನ್ನು ಸೆಳೆಯುವ ಪ್ರಯತ್ನ ಮಾಡುತ್ತಾನೆ.

> ''ಭೇದಿಸಲೆಂದೆ ದಲ್ ನುಡಿದರೆನ್ನದಿರೊಯ್ಯನೆ ಕೇಳಕರ್ಣ ನಿ
> ನ್ನಾದಿಯೊಳಬ್ಬೆ ಕೊಂತಿ ನಿನಗಮ್ಮನಹರ್ಪತಿ ಪಾಂಡುನಂದನರ್
> ಸೋದರರರೆಯ್ದೆ ಮಯಲ್ಲಿನನೆನಾಂ ಪೆಳಿತೇಂ ಪಡೆಮಾತೋ ನಿನ್ನದೀ
> ವೇದಿನಿ ಪಟ್ಟಮುಂ ನಿನಪೆ ನೀನಿರೆ ಪೆಳಿರ್ ನರೇಂದ್ರರೇ''.

ನಿನ್ನ ಮನಸ್ಸಿನಲ್ಲಿ ಭೇದವನ್ನು ಉಂಟು ಮಾಡಲಿಕ್ಕೆಂದು ಮಾತನಾಡುತ್ತಿಲ್ಲ. ಇದುವರೆಗೂ ನೀನೆಣಿಸಿದಂತೆ ನೀನು ಸೂತಪುತ್ರನಲ್ಲ. ಕುಂತಿ ನಿನ್ನ ತಾಯಿ, ತಂದೆ ಸೂರ್ಯ, ಪಾಂಡವರು ಸಹೋದರರು, ಮೈದುನ ನಾನು ಹೀಗಿರುವಾಗ ಬೇರೆ ಮಾತೇಕೆ? ಈ ಭೂಮಿ ಪಟ್ಟ ನಿನಗೆ. ನೀನೆ ಇರುವಾಗ ಬೇರೆಯವರು ರಾಜನಾಗಿ ಬಾಳಲು ಸಾಧ್ಯವೇ ? ಎನ್ನುತ್ತಾನೆ. ಇದುವರೆಗೂ ಸೂತನೆಂದು ಮಾನಸಿಕ

ಹಿಂಸೆಯನ್ನು ಅನುಭವಿಸುತ್ತಿದ್ದ ಕರ್ಣನಿಗೆ ಬರಸಿಡಿಲೆರಗುತ್ತದೆ. ಒಂದೆಡೆ ಪಾಂಡವರ ಹಿರಿಯ, ಕುಂತಿಯ ಮಗ ಹಾಗೂ ಈ ಸಿಂಹಾಸನದ ದೊರೆ ಎನ್ನುವ ಆಶ್ಚರ್ಯ, ಇನ್ನೊಂದೆಡೆ ಇದು ಸಾಧ್ಯವೇ ? ಕರ್ಣ ಗೊಂದಲದಲ್ಲಿ ಸಿಲುಕುತ್ತಾನೆ.

ನಿನ್ನ ಜನ್ಮ ರಹಸ್ಯ ಕೆಲವರಿಗೆ ಮಾತ್ರ ಗೊತ್ತಿದೆ. ನಾನು, ಸಹದೇವ, ದುರ್ಯೋಧನ, ಕುಂತಿ ಈ ನಾಲ್ವರಿಗೆ ಬಿಟ್ಟರೆ ಉಳಿದವರಿಗೆ ತಿಳಿದಿಲ್ಲ ಎಂದು ಹೇಳುವುದರ ಮೂಲಕ ದುರ್ಯೋಧನನಿಗೆ ವಿಷಯ ಗೊತ್ತಾದ ಪ್ರಸಂಗವನ್ನು, ಆದರೂ ಅವನು ಸುಮ್ಮನಿರುವುದರ ಔಚಿತ್ಯವನ್ನು ಕೆಳಗಿನಂತೆ ಹೇಳುತ್ತಾನೆ. ದುರ್ಯೋಧನ ಮತ್ತು ನೀನು ಬೇಟೆಯಾಡಲು ಹೋಗಿ ಸತ್ಯಂತಪರ ಆಶ್ರಮವನ್ನು ಪ್ರವೇಶಿಸಿ ಅವರಿಂದ ಆಶೀರ್ವಾದ ಪಡೆಯುವಾಗ ಮೊದಲು ನಿನಗೆ ಆಶೀರ್ವಾದ ಮಾಡುತ್ತಾರೆ. ಆಗ ದುರ್ಯೋಧನ ನಿನ್ನನ್ನು ಆಚೆ ಕಳುಹಿಸಿ ಮುನಿಗಳನ್ನು ಕಾರಣ ಕೇಳುತ್ತಾನೆ. ಆಗ ಸತ್ಯಂತಪರು ನಿನ್ನ ಜನ್ಮ ರಹಸ್ಯವನ್ನು ತಿಳಿಸಿದರು. ಆಗ ದುರ್ಯೋಧನ ಆಲೋಚನೆ ಮಾಡಿದ್ದಾದರೂ ಏನನ್ನು ಎಂದು ವಿವರಿಸುತ್ತಾನೆ.

> ''ಆನಿರೆ ನೀಮಿದೇಕೆ ದಯೆಗೆಯ್ದಿರೋ ಮೀಂಗುಲಿಗಂಗೆ ಪೇಳೆಮೆಂ
> ದಾನರನಾಥನಂ ತಿಳಿಪೆ ತನ್ಮುನಿ ಭೂಭುಜನೆಯ್ದೆ ನಂಬಿ ಕಾ
> ನೀನ ಸಮಂತು ಪಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳನೆಂದು ತಾ
> ನೀ ನಯದಿಂದೆ ಪೆರ್ಚೆ ಪೊರೆದಪ್ಪಿಮೊಳಂದಡನುಂಡನಲ್ಲನೇ''.

ದುರ್ಯೋಧನ ಸತ್ಯಂತಪರನ್ನು ಕುರಿತು ನಾನಿರುವಾಗ ನೀವಿದೇಕೆ ಕರ್ಣನಿಗೆ ದಯೆಯನ್ನು ತೋರಿಸಿದಿರಿ. ಆವೀಂಗುಲಿಗನಾದವನಿಗೆ ಎಂದಾಗ ಮುನಿಗಳು ನಿನ್ನ ಜನ್ಮವೃತ್ತಾಂತವನ್ನು ತಿಳಿಸುತ್ತಾನೆ. ಆಗ ದುರ್ಯೋಧನ ಮುಳ್ಳಿನಿಂದ ಮುಳ್ಳನ್ನು ನಾಶ ಮಾಡುವೆನೆಂದು ನಿನ್ನನ್ನು ತನ್ನ ಹತ್ತಿರ ಉಳಿಸಿಕೊಂಡಿದ್ದಾನೆ. ಅಂದರೆ ಪಾಂಡವರ ಹಿರಿಯನಾದ ಕರ್ಣನಿಂದ ಉಳಿದ ಪಾಂಡವರನ್ನು ನಾಶಮಾಡುವ ಹುನ್ನಾರಕ್ಕೆ ಬರುತ್ತಾನೆ ಎಂದು ಹೇಳುವುದರ ಮೂಲಕ ದುರ್ಯೋಧನ ನಿನ್ನನ್ನು ಗೆಳೆಯನಾಗಿ ಉಳಿಸಿಕೊಂಡಿರುವುದಾದರೂ ಏತಕ್ಕಾಗಿ ಗೊತ್ತೆ ಎಂದು ಹೇಳುತ್ತಾನೆ.

ಇದರಿಂದ ಕರ್ಣನಲ್ಲಿ ದುಃಖದ ಕಣ್ಣೀರು ಹರಿಯುತ್ತದೆ. ಆಗ ಕರ್ಣ ನೀವೆಲ್ಲ ಈ ವಿಷಯವನ್ನು ಈಗ ಏಕೆ ಹೇಳಿದಿರಿ. ಈಗಾಗಲೇ ಯುದ್ಧ ನಿಶ್ಚಯವಾಗಿದೆ. ಪ್ರಸಿದ್ಧಿ ಮತ್ತು ಕೀರ್ತಿ ಇವೆರಡು ಸುಯೋಧನ ನನಗೆ ಒಳ್ಳೆಯದನ್ನು ಮಾಡಿರುವುದರಿಂದ ಬಂದಿರುವಂತಹುದು. ಇದರಿಂದ ಈಗ ನಾನು ಪಾಂಡವರ ಕಡೆ ಬಂದರೆ ನನ್ನ ಕೀರ್ತಿ, ಪ್ರಸಿದ್ಧಿ, ನಡತೆ ಮಾಸಿಹೋಗುವುದಿಲ್ಲವೇ ? ನೀವೇ ಯೋಚಿಸಿ ಎಂಬುದಾಗಿ ಕರ್ಣ ಕೃಷ್ಣನ ಮಾತಿಗೆ ಮರು ಉತ್ತರವನ್ನು ಕೊಡುತ್ತಾನೆ. ಅಷ್ಟೇ ಅಲ್ಲ ದುರ್ಯೋಧನ ನನ್ನಲ್ಲಿ ಎಂತಹ ವಿಶ್ವಾಸವನ್ನಿಟ್ಟಿದ್ದಾನೆ ಎಂಬುದನ್ನು

ಕೆಳಗಿನ ಮಾತುಗಳಲ್ಲಿ ಹೇಳುತ್ತಾನೆ.

> ''ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾ
> ಡುತ್ತಿರೆ ಲಂಬಣಂ ಪಳಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬ
> ಳ್ಕುತ್ತಿರೆಯೇವಮಿಲ್ಲದಿವನಾಯ್ದುವುದೋ ತಪ್ಪದೆ ಪೇಳೆಮೆಂಬ ಭೂ
> ಪೋತ್ತಮನಂ ಬಿಸುಟ್ಟೆರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ''.

ನೆತ್ತವನ್ನು ಆಡುತ್ತಿರುವಾಗ ಭಾನುಮತಿ ಸೋಲುತ್ತಾಳೆ. ಸೋಲಿಗೆ ಪಣವಾವುದೆಂದು ಚರ್ಚಿಸುತ್ತಿರುವಾಗ ಕರ್ಣ ಭಾನುಮತಿಯ ಕೊರಳಿನ ಹಾರಕ್ಕೆ ಕೈಹಾಕುತ್ತಾನೆ. ಆಗ ಹಾರ ಕಿತ್ತು ಮಣಿಗಳು ಚೆಲ್ಲಾಪಿಲ್ಲಿಯಾಗಿ ಬೀಳುತ್ತವೆ. ಆಗ ಅಲ್ಲಿಗೆ ಬಂದ ದುರ್ಯೋಧನ ಅವುಗಳನ್ನು ಆಯ್ದುಕೊಡಲೇ ಎನ್ನುತ್ತಾನೆ. ಬೇರೆಯವರಾಗಿದ್ದರೆ ಸಂಶಯವನ್ನುಪಡುತ್ತಿದ್ದರು. ದುರ್ಯೋಧನನಾದವನಿಗೆ ಅಂತಹ ಮನಸ್ಸಿರಲಿಲ್ಲ. ಅಂತಹ ಗೆಳೆಯನನ್ನು ಬಿಟ್ಟು ಬಂದರೆ ನಾನು ಬೇಡನಾಗುತ್ತೇನೆಯೇ ಹೊರತು, ಕೀರ್ತಿ ಪ್ರಸಿದ್ಧಿಗಳನ್ನು ನಾಶ ಮಾಡಿಕೊಳ್ಳುತ್ತೇನೆ ಎಂದು ಹೇಳುವುದರ ಮೂಲಕ ದುರ್ಯೋಧನನ್ನು ಬಿಟ್ಟು ಬರಲು ಸಾಧ್ಯವಿಲ್ಲ ಎಂದು ಸೂಚ್ಯವಾಗಿ ಹೇಳುತ್ತಾನೆ.

ಇಷ್ಟಾದ ಮೇಲೆ ಕರ್ಣನನ್ನು ಹಿಂದಕ್ಕೆ ಕಳುಹಿಸಿ ಕುಂತಿಗೆ ಮಗನಿಂದ ಭಾಷೆಯನ್ನು ಪಡೆಯಲು ಹೇಳಿ ಹೊರಡುತ್ತಾನೆ. ಭಾನುವಾರದಂದು ಗಂಗಾನದಿಯಲ್ಲಿ ಸೂರ್ಯನಿಗೆ ಅರ್ಘ್ಯವನ್ನು ಕೊಡುವಾಗ ಕುಂತಿಯ ಪ್ರವೇಶವಾಗುತ್ತದೆ. ಅದೇ ಸಮಯಕ್ಕೆ ಸೂರ್ಯ ಬಂದು ಕರ್ಣನನ್ನು ಎಚ್ಚರಿಸುತ್ತಾನೆ. ಆದರೂ ಅದರಿಂದ ಪ್ರಯೋಜನವಾಗಲಿಲ್ಲ. ಕುಂತಿಯ ಮಾತಿಗೆ ಕರ್ಣ ಭಾಷೆಯನ್ನು ಕೊಡುವ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಆದರೆ ಕರ್ಣನ ಪ್ರತಿಜ್ಞೆ ಎಂತಹವರನ್ನಾದರೂ ಮನಕರಗಿಸುತ್ತದೆ.

> ''ಪಿಡಿಯೆಂ ಪುರಗಣೆಯಂ ನರ
> ನೆಡೆಗೊಂಡೊಡಮುಳಿದ ನಿನ್ನ ಮಕ್ಕಳನಿನ್ನೇ
> ರ್ದೊಡಯಳೆಯಂ ಪೆರ್ಜಸಮನೆ
> ಪಿಡಿದೆನ್ನನೆ ರಣದೊಳಾವೆನಿರದಡಿಯೆತ್ತಿಂ'' ಎಂದು ಹೇಳುತ್ತಾನೆ.

ಸಾಕಿ ಬೆಳೆಸಲು ಸಾಧ್ಯವಾಗದ ಮಗನಿಂದ ಕುಂತಿ ಭಾಷೆಯನ್ನು ಪಡೆಯುತ್ತಾಳೆ. ಕುಂತಿಗೆ ಸ್ವಲ್ಪವೂ ಅಳುಕಿಲ್ಲ. ಆದರೆ ಕರ್ಣನ ನಿರ್ಧಾರ ಕುಂತಿಯನ್ನು ಅಧೈರ್ಯಗೊಳಿಸುತ್ತದೆ. ಬಾಣವನ್ನು ಹಿಡಿಯುವುದಿಲ್ಲ. ಅರ್ಜುನನನ್ನು ಬಿಟ್ಟು ಉಳಿದ ನಿನ್ನ ಮಕ್ಕಳನ್ನು ಸಾಯಗೆಡುವುದಿಲ್ಲ. ಹಾಗೇನಾದರೂ ಬಾಣವನ್ನು ಉಳಿದ

ಪಾಂಡವರ ಎದುರಿಗೆ ಹೂಡಿದ್ದಾದರೆ ನಾನೇ ಯುದ್ಧದಲ್ಲಿ ಅಳಿದು ಹೋಗುವೆನು ಎಂದು ಕುಂತಿಗೆ ಭಾಷೆಯನ್ನು ನೀಡುತ್ತಾನೆ.

ಒಂಭತ್ತನೇ ಅಶ್ವಾಸದ ಬಹುಮುಖ್ಯ ಭಾಗ ಇದಾಗಿದೆ. ಕುಂತಿ ಕರ್ಣರ ಸಂವಾದ, ಕರ್ಣನ ಪ್ರತಿಜ್ಞ, ಕೃಷ್ಣನ ಬೋಧೋಪಾಯ ನೀತಿ, ಕರ್ಣನ ತಂತ್ರ ಫಲಿಸಿರುವುದು ಮುಂತಾದ ಅಂಶಗಳನ್ನು ನಾವಿಲ್ಲಿ ಕಾಣುತ್ತೇವೆ. ಮುಖ್ಯವಾಗಿ ಕರ್ಣ-ಕೃಷ್ಣರರ ಸಂವಾದ, ಕುಂತಿ-ಕರ್ಣರ ಸಂವಾದವೇ ಅತಿಮುಖ್ಯವಾದುದು.

**ಹತ್ತನೇ ಆಶ್ವಾಸ**

ದುರ್ಯೋಧನ ಭೀಷ್ಮನಿಗೆ ಪಟ್ಟ ಕಟ್ಟುತ್ತಾನೆ. ಇದರಿಂದ ಕರ್ಣ ಭೀಷ್ಮರ ಸೇನಾಧಿಪತ್ಯದಲ್ಲಿ ಯುದ್ಧ ಮಾಡಲು ನಿರಾಕರಿಸುತ್ತಾನೆ. ಸಭೆಯಲ್ಲಿ ಪಾಂಡವ ಪಕ್ಷಪಾತಿಯಾದ ಕೃಷ್ಣನನ್ನು ದ್ರೋಣ, ಭೀಷ್ಮ, ಮೊದಲಾದವರು ಹೊಗಳುತ್ತಾರೆ. ಇದರಿಂದಾಗಿ ದುರ್ಯೋಧನ ಅಸಮಧಾನಗೊಳ್ಳುತ್ತಾನೆ. ಕೃಷ್ಣನನ್ನು ಬಂಧಿಸುವ ಯತ್ನವನ್ನು ಮಾಡಿದಾಗ ಭೀಷ್ಮ, ದ್ರೋಣ ಮುಂತಾದವರು ವಿರೋಧಿಸುತ್ತಾರೆ. ದುರ್ಯೋಧನನ ಅಸಮಧಾನವನ್ನು ಭೀಷ್ಮರು ಸಮಾಧಾನ ಮಾಡುತ್ತಾರೆ. ಭೀಷ್ಮರನ್ನು ಚಿಂತೆ ಕಾಡುತ್ತದೆ.

''ಮಕ್ಕಳ ಮೊಮ್ಮಕ್ಕಳ ರಥ
ಮೆಕ್ಕೆಯಿನೆಡೆಗೊಂಡೊಡವರನೋವದೆ ರಣದೊಳ್
ಮಕ್ಕಳನಾಂ ಕೊಂದೊಡೆ ತ
ನಿಕ್ಕಿದ ತತ್ತಿಯನೆ ಸಾವು ನೊಗೆವಂತಕ್ಕುಂ''.

ಮಕ್ಕಳು, ಮೊಮ್ಮಕ್ಕಳ ರಥವನ್ನು ನೋಡಿ ಸಂತೋಷಪಡದೆ ಯುದ್ಧ ಭೂಮಿಯಲ್ಲಿ ಮಕ್ಕಳನ್ನು ನಾನೇ ಕೊಲ್ಲುವಂತ ಸ್ಥಿತಿಯೊದಗಿದೆ ಇದು ಹೇಗೆಂದರೆ, ತಾನಿಕ್ಕಿದ ಮೊಟ್ಟೆಯನ್ನು ಹಾವು ತಾನೇ ತಿನ್ನುವಂತಾಯಿತೇ ಎನ್ನುತ್ತಾನೆ. ತಾನು ಸಾಕಿ ಬೆಳೆಸಿದ ಮಕ್ಕಳನ್ನು ತಾನೇ ಕೊಲ್ಲಬೇಕಾಗಿದೆಯಲ್ಲಾ ಎಂದು ಚಿಂತೆಯಲ್ಲಿ ಮುಳುಗಿ ಹೋಗುತ್ತಾನೆ. ದುರ್ಯೋಧನ ಭೀಷ್ಮನಿಗೆ ಪಟ್ಟ ಕಟ್ಟಿದ್ದಾನೆ. ಇದರಿಂದ ಕರ್ಣನಿಗೆ ಅಸಮಧಾನವಾಗಿದೆ. ಸಾವಿನಂಚಿನಲ್ಲಿರುವವರಿಗೆ ಪಟ್ಟವನ್ನು ಕಟ್ಟಿದ್ದು ಮೋಹದಿಂದಲೇ ಹೊರತು ಶೌರ್ಯ ಪರಾಕ್ರಮಕ್ಕೆ ಬೆಲೆಕೊಟ್ಟಲ್ಲ. ಇದರಿಂದ ಗುರುಗಳನ್ನು, ಕುಲಹಿರಿಯರನ್ನು ಯುದ್ಧ ಎನ್ನು ರಣಮಾರಿಗೆ ಔತಣಕೊಡಿಸಿದಂತೆ ಎಲ್ಲರಿಂದ ನಗೆಪಾಟಲಿಗೀಡಾಗಲು ಈ ಕೆಲಸವನ್ನು ಮಾಡಿದೆಯಾ ಎನ್ನುತ್ತಾನೆ.

''ಕಟ್ಟಿದ ಪಟ್ಟಮೆ ಸರವಿಗೆ
ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಿಂಗೆಣೆ ಕ

ಣ್ಣೆಟ್ಟ ಮುದುಪಂಗೆ ಪಗೆವರ
ನಿಟ್ಟೆಲ್ವಂ ಮುದಿವೊಡೆನಗೆ ಪಟ್ಟಂಗಟ್ಟಾ''.

ಈಗ ನೀನು ಪಟ್ಟ ಕಟ್ಟಿರುವುದು ಹುಲ್ಲಿನ ಹಗ್ಗಕ್ಕೆ. ಅದು ಅಶಕ್ತವಾದುದು. ಹೀಗಿರುವಾಗ ಬಿಲ್ಲನ್ನು ಗಟ್ಟಿಯಾಗಿ ಹಿಡಿಯಬೇಕಾದರೆ ನನ್ನಂಥವನಿಗೆ ಪಟ್ಟ ಕಟ್ಟು. ಅದನ್ನು ಬಿಟ್ಟು ಕಣ್ಣುಕಾಣದ ಮುದುಕನಿಗೆ ಪಟ್ಟ ಕಟ್ಟಿದರೆ ಯುದ್ಧ ಭೂಮಿಯಲ್ಲಿ ಹೋರಾಡಲು ಸಾಧ್ಯವೇ ಎಂದು ಹೀಯಾಳಿಸುತ್ತಾನೆ.

''ಆದಿಯೊಳವರಂ ಪಿರಿದೊಂ
ದಾದರದಿಂ ನಡಪಿದಜ್ಜರಪ್ಪುದರೆಂದಂ
ಕಾದರಿವರವರೊಳವರುಂ
ಕಾದರ್ ನೆರೆದಿವರೊಳೆಂತು ನಂಬುವೆ ನೃಪತಿ''.

ಪ್ರಾರಂಭದಲ್ಲಿ ಪಾಂಡವರನ್ನು ಹೆಚ್ಚಾದ ಆದರದಿಂದ ನಡೆಸಿಕೊಂಡವರು ಇವರು. ಹೀಗಿರುವಾಗ ಯುದ್ಧ ಭೂಮಿಯಲ್ಲಿ ಪಾಂಡವರ ವಿರುದ್ಧ ಯುದ್ಧ ಮಾಡುತ್ತಾರೆಯೇ ? ಇಂತಹವರನ್ನು ನೀನು ನಂಬಿದ್ದಾದರೂ ಹೇಗೆ ಎಂದು ಕರ್ಣ ದುರ್ಯೋಧನನನ್ನು ಪ್ರಶ್ನಿಸುತ್ತಾನೆ. ಇದನ್ನು ಕೇಳಿದ ದ್ರೋಣನಿಗೆ ಕರ್ಣನ ಮೇಲೆ ಸಿಟ್ಟು ಬರುತ್ತದೆ. ಭೀಷ್ಮನಂತಹ ಹಿರಿಯನನ್ನು ತೆಗಳಿದನಲ್ಲಾ ಎಂದು.

''ಸಿಂಗ ಮುಪ್ಪಂ ನೆಗಳ್ದೇ
ಗಾಂಗೇಯರ ಮುಪ್ಪು ಮಿಳಿಕೆವಡೆಗುಮೆ ವನಮಾ
ತಂಗಂಗಳಿನಸುಹೃಚ್ಚ ತು
ರಂಗ ಬಲಂಗಳಿನದೆಂತು ಮಂಗಾಧಿಪತೀ''.

ಸಿಂಹ ಮುಪ್ಪಾದರೆ ಅದರ ಖ್ಯಾತಿ ಹಾಳಾಗುತ್ತದೆಯೇ ? ಹಾಗೇ ಗಾಂಗೇಯನಾದ ಭೀಷ್ಮನ ಮುಪ್ಪು. ಅದನ್ನು ಅವಹೇಳನಕ್ಕೆ ಗುರಿಮಾಡುವುದು ಯೋಗ್ಯವಲ್ಲ. ಹೀಗಿರುವಾಗ ಚತುರಂಗ ಬಲದಲ್ಲಿ ಭೀಷ್ಮನ ಸರಿಸಾಟಿ ಯಾರೂ ಇಲ್ಲ. ಇದರಿಂದ ನೀನು ಹೀಗೆ ಅಪಮಾನ ಮಾಡಿ ಮಾತನಾಡುವುದು ಯೋಗ್ಯವೇ ?

''ಕುಲಜರನುದ್ದತರಂ ಭುಜ
ಬಲಯುತರಂ ಹಿತರನೀ ಸಭಾಮಧ್ಯದೊಳ್
ಗ್ಗಲಿಸಿದ ಮದದಿಂ ನಾಲಗೆ
ಕುಲಮಂ ತಟ್ಟುವವೊಲುರದೆ ನೀಂಕೆಡೆ ನುಡಿವೈ''.

ದ್ರೋಣಾಚಾರ್ಯರು ಕರ್ಣ ಭೀಷ್ಮರನ್ನು ಅವಹೇಳನ ಮಾಡಿದ್ದಕ್ಕೆ ಪ್ರತಿಕ್ರಿಯೆ ನೀಡುತ್ತಾರೆ. ಕುಲದಲ್ಲಿಯೇ (ವಂಶದಲ್ಲಿಯೇ) ಶ್ರೇಷ್ಠರಾದವರನ್ನು

ಬಲಶಾಲಿಗಳಾದವರನ್ನು ಸಭಾ ಮಧ್ಯದಲ್ಲಿ ಅವಹೇಳನ ಮಾಡುತ್ತಿದ್ದೀಯ, ಇದು ನಿನ್ನ ಅಹಂಕಾರ. ಇದರಿಂದ ನಾಲಗೆ ಕುಲವನ್ನು ತಿಳಿಸಿದಂತಾಗುವುದಿಲ್ಲವೇ ಎಂದು ಕಿಡಿ ನುಡಿಯುತ್ತಾರೆ. ಕರ್ಣನ ಮಾತುಗಳಿಂದ ಜಾತಿ ನಿರ್ಧರಿಸುವ ವೈಧಿಕ ಧರ್ಮದ ಹಿನ್ನೆಲೆಯನ್ನು ಕಾಣುತ್ತೇವೆ.

ಕರ್ಣನನ್ನು ಸಂಪೂರ್ಣವಾಗಿ ನಿರಾಸೆಗೊಳಿಸುವ, ಅಪಮಾನಿಸುವ, ಅವನ ಬದುಕನ್ನೇ ಚಿವುಟಿ ಹಾಕುವ ಎಲ್ಲಾ ತಂತ್ರಗಳೂ ಇಲ್ಲಿ ನಡೆಯುತ್ತವೆ. ಆದರೆ ದ್ರೋಣನ ಮಾತಿಗೆ ಕರ್ಣ ತೀವ್ರವಾಗಿ ಪ್ರತಿಭಟಿಸುತ್ತಾನೆ. ಇದು ಕರ್ಣನೊಬ್ಬನ ಪ್ರತಿಭಟನೆಯಾಗದೆ ಇಡೀ ಕೆಳವರ್ಗದ, ಅಸಹಾಯಕ, ಮೇಲ್ವರ್ಗದ ದಬ್ಬಾಳಿಕೆಗೆ ತುತ್ತಾದವರೆಲ್ಲರ ಪ್ರತಿಭಟನೆಯಾಗುತ್ತದೆ.

> ''ಕುಲಮನೆ ಮುನ್ನ ಮುಗ್ಗಡಿಪಿರೋ ಗಳ ನಿಮ್ಮ ಕುಲಂಗಳಾಂತು ಮಾ
> ರ್ಮಲೆವನನಟ್ಟಿ ತಿಂಬುವೆ ಕುಲಂ ಕುಲಮಲ್ತು ಚಲಂ ಕುಲಂ ಗುಣಂ
> ಕುಲಮಭಿಮಾನಮೊಂದೆ ಕುಲಮಣ್ಮುಕುಲಂ ಬಗೆವಾಗಳೀ, ಗಳೀ
> ಕಲಹದೊಳಣ್ಣ ನಿಮ್ಮ ಕುಲವಾಕುಲಮಂ ನಿಮಗುಂಟು ಮಾಡುಗುಂ''.

ಕರ್ಣನ ಈ ಪ್ರಶ್ನೆ ಪ್ರತಿಯೊಬ್ಬ ವಿಚಾರವಾದಿಯ ಪ್ರಶ್ನೆಯಾಗುತ್ತದೆ. ಜಾತಿ ಕುಲದ ಬಗ್ಗೆ ಮಾತನಾಡುವ ನೀವು ಕುಲವನ್ನು ಮೊದಲು ಪೋಷಿಸಿಕೊಂಡು ಬಂದಿರುವಿರಿ. ಅಂತಹ ಕುಲ ನಿಮ್ಮನ್ನೇನು ಮಾಡಿದೆ. ನಿಮ್ಮ ಹಿಂದೆ ಬಿದ್ದು ನಿಮ್ಮನ್ನು ಹಾಳುಗೆಡವಿದೆಯೇ ಹೊರತು ನಿಮ್ಮ ಉದ್ಧಾರಕ್ಕೆ ಪ್ರಯತ್ನಿಸಿಲ್ಲ. ನೀವು ಹೇಳುವ ಕುಲ ನಿಜವಾದ ಕುಲವಲ್ಲ. ಚಲ ಎನ್ನುವುದು, ಅಭಿಮಾನ, ತ್ಯಾಗ, ಇವುಗಳು ವ್ಯಕ್ತಿಯ ಹಿನ್ನೆಲೆಯನ್ನು ಸಾಬೀತುಪಡಿಸಬೇಕೇ ಹೊರತು ಜಾತಿಯಿಂದಲ್ಲ. ವ್ಯಕ್ತಿತ್ವವೇ ಬೇರೆ, ಜಾತಿಯೇ ಬೇರೆ. ಜಾತಿ ಕಲಹವನ್ನು ಮತ್ತೊಂದು ಜಾತಿಯ ಮಧ್ಯೆ ತಂದಿಟ್ಟಿದೆಯೇ ಹೊರತು ಮತ್ತೇನೂ ಮಾಡಲಾಗಿಲ್ಲ. ನಿಮಗೇನು ಮಾಡಿದೆ ನಿಮ್ಮ ಕುಲ ಎಂದು ಪ್ರಶ್ನಿಸುತ್ತಾನೆ. ಈ ಮೂಲಕ ಪಂಪ ಜಾತಿ ಪ್ರಶ್ನೆಯನ್ನು ಎತ್ತಿ ಅದಕ್ಕೊಂದು ಸಮರ್ಥವಾದ ಉತ್ತರವನ್ನು ಕೊಡಲಿಚ್ಛಿಸಿದ್ದಾನೆ.

ಕರ್ಣ ಭೀಷ್ಮ ಸೇನಾಧಿಪತಿಯಾಗಿರುವವರೆಗೆ ಬಿಲ್ಲನ್ನು ಹಿಡಿಯುವುದಿಲ್ಲ ಎಂದು ಪ್ರತಿಜ್ಞೆಗೈಯ್ಯುತ್ತಾನೆ. ಇದರಿಂದಾಗಿ ದುರ್ಯೋಧನನಿಗೆ ಮಾಡುವ ಸಹಾಯದಿಂದಲೂ ವಂಚಿತನಾಗುತ್ತಾನೆ.

> ''ಕಲಿತನದುರ್ಕು ಜವ್ವನದ ಸೊರ್ಕು, ನಿಜೇಶನ ನಚ್ಚು ಮಿಕ್ಕ ತೋ
> ಳ್ಬಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ ಭಾರತಂ
> ಕಲಹಮಿದಿರ್ಚುವಂ ಹರಿಗನಪ್ಪೊಡೆ ಮೊಕ್ಕಳಮೇಕೆ ನೀಂ ಪಳಂ
> ಚಲೆದಪೆಯಣ್ಣ ಸೊಳ್ಪಡೆಯಲಪ್ಪುದು ಕಾಣ ಮಹಾಜಿರಂಗದೊಳ್''.

ಭೀಷ್ಮ ಕರ್ಣನ ಪ್ರತಿಜ್ಞೆಗೆ ಪ್ರತಿಕ್ರಿಯಿಸುತ್ತಾ, ಪ್ರಾಯದ ಉತ್ಸಾಹ, ಪರಾಕ್ರಮದ ಅಬ್ಬರ, ಯೌವ್ವನ, ಅಹಂಕಾರ, ಅನ್ನ ಕೊಟ್ಟವನಿಗೆ ಗೌರವ ಕೊಡಬೇಕೆಂಬ ಮನಸ್ಸು, ತೋಳ್ಬಲದಲ್ಲಿನ ಶಕ್ತಿ ಇವೆಲ್ಲವೂ ನಿನಗುಂಟೇ ಕರ್ಣ. ಭಾರತ ಜಗಳದಿಂದ ಕೂಡಿರುವುದು ವಿಷ್ಣುವಿರುವಾಗ ಮಕ್ಕಳ ಮೇಲಿನ ಮೋಹವನ್ನು ಬಿಡಬೇಕಿದೆ. ಈ ಯುದ್ಧದಲ್ಲಿ ನಿನ್ನ ಸರದಿಯೂ ಬರುತ್ತದೆ ಎನ್ನುತ್ತಾನೆ. ಅಂದರೆ ಈಗ ಬಂದಿರುವುದು ನನ್ನ ಸರದಿ. ಅದೂ ಮುಗಿಯುತ್ತದೆ. ಮುಂದೆ ನಿನ್ನ ಸರದಿಯೂ ಬರುತ್ತದೆ. ಆದರೂ ನಿನ್ನದು ಮುಗಿಯುತ್ತದೆಯೇ ಹೊರತು ನೀನು ಮಹಾಭಾರತ ಯುದ್ಧವನ್ನು ಗೆಲ್ಲಲು ಸಾಧ್ಯವಿಲ್ಲ ಎಂಬುದಾಗಿ ಭೀಷ್ಮ ಮಾರ್ಮಿಕವಾಗಿ ತಿಳಿಹೇಳುತ್ತಾನೆ. ಭೀಷ್ಮನ ರಾಜಕೀಯ ಕೌಶಲ್ಯವನ್ನು ಮುಂದಾಲೋಚನೆಯ ಭವಿಷ್ಯವನ್ನು ಕಾಣುತ್ತೇವೆ.

''ಪಿಡಿಯೆಂ ಚಕ್ರಮನೆಂಬ ಚಕ್ರಿಯನಿಳಾ ಚಕ್ರಂ ಭಯಂಗೊಳ್ವಿನಂ
ಪಿಡಿಯಪ್ಪೆಂ ಕರಚಕ್ರಮಂ ನರರಥಂ ತೂಳ್ದಾ ಕುರುಕ್ಷೇತ್ರದಿಂ
ಪಡುವೆಣ್ಣಾವುದು ಪೋಗೆ ಪೋಗಡಿಸುವೆಂ ನಿಚ್ಚಂ ಧರಾಧೀಶರಂ
ಪಡಲಿಟ್ಟಂತಿರೆ ಮಾಣ್ಪೆನೋವದೆ ಪಯಂಭಾಸಿರ್ವರುಂ ಯುದ್ಧದೊಳ್''.

ಭೀಷ್ಮ ಕರ್ಣನ ಮಾತಿಗೆ ಪ್ರತಿಕ್ರಿಯಿಸುತ್ತಾ ತನ್ನ ನಿರ್ಧಾರವನ್ನು ಪ್ರಕಟಿಸುತ್ತಾನೆ. ಚಕ್ರವನ್ನು ಕೃಷ್ಣನೆದುರಿಗೆ ಹಿಡಿಯುವುದಿಲ್ಲ. ಕೃಷ್ಣ ಚಕ್ರ ಭಯಗೊಳ್ಳುವಂತೆ ಮಾಡುತ್ತಾನೆ. ನನ್ನ ಕೈಚಳಕದಿಂದ ಅರ್ಜುನನಾದಿಯಾಗಿ ಅವನ ರಥವೂ ಸೇರಿದಂತೆ ಕುರುಕ್ಷೇತ್ರದಿಂದ ದೂರ ಸಾಗುವಂತೆ ಮಾಡುತ್ತೇನೆ. ಭೂರಾಜರನ್ನು ಮಣಿಸುತ್ತೇನೆ. ದಿನವೊಂದಕ್ಕೆ ಇಪ್ಪತ್ತೈದು ಸಾವಿರ ಜನರನ್ನು ನಾಶಮಾಡುತ್ತೇನೆಂದು ಶಪಥಗೈಯ್ಯುತ್ತಾನೆ. ಇಲ್ಲಿಯೂ ಯುದ್ಧವನ್ನು ಗೆಲ್ಲುತ್ತೇನೆ ಎಂದು ಹೇಳುವುದಿಲ್ಲ. ಸೈನಿಕರನ್ನು ಕೊಲ್ಲುತ್ತೇನೆ ಎಂಬುದಾಗಿ ಮಾತ್ರ ಹೇಳುತ್ತಾನೆ. ಭೀಷ್ಮ ಪಾಂಡವರ ಪಕ್ಷಪಾತಿಯೆನ್ನುವುದನ್ನು ನೇರವಾಗಿ ನಾವಿಲ್ಲಿ ಕಾಣುತ್ತೇವೆ.

''ಜಳಧಿಯೊಳಾದ ಮುತ್ತುಗಳವೇಂ ಪೊಸತಾದುವೆ ನಿನ್ನ ತೋಳ ಬಾ
ಳೊಳೆ ಬಲ ಗರ್ವದಿಂ ತಗೆದುದಗ್ರ ವಿರೋಧಿ ಮದೇಭ ಮಸ್ತಕ
ಸ್ಥಳ ಜಳರಾಶಿಯೊಳ್ ಬೆಳೆದ ನಿರ್ಮಳ ನಿವ್ರ್ರಣ ವೃತ್ತಮೌಕಿಕಾ
ವಳಿಯನೆ ತರ್ಪುದೆಂದು ನುಡಿದವ್ಕಿರೊಳಾಣೆಸಿದಳ್ ನಿಜೇಶನಂ''.

ನೀರಿನಿಂದಾದ ಮುತ್ತುಗಳು ನಿನ್ನ ತೋಳಿನಲ್ಲಿ ಹೊಸದಾಗಿ ಮಾರ್ಪಡುತ್ತಿವೆಯೇನೋ ಎಂಬಂತ ಬಲಶಾಲಿಯಾದ ನೀನು ವಿರೋಧಿಗಳಲ್ಲಿ ಶ್ರೇಷ್ಠರಾದವರನ್ನು ನಾಶಪಡಿಸುತ್ತಿರುವೆ. ಮದವೇರಿದ ತಲೆಯ ಮೇಲ್ಭಾಗದಲ್ಲಿ

ನೀರಿನ ಪ್ರೋಕ್ಷಣೆಯಾದಂತೆ ನಿರ್ಮಲವಾದ, ಪರಿಶುದ್ಧವಾದ ಹಾರವಾಗಿ ಮಾರ್ಪಡುತ್ತವೆ ಎಂದು ಒಬ್ಬೊಬ್ಬರೂ ಒಬ್ಬೊಬ್ಬ ರಾಜರನ್ನು ಆರಿಸಿಕೊಂಡರು ಎನ್ನುತ್ತಾನೆ. ಯುದ್ಧ ಮಾಡುವಾಗ ಉಂಟಾದ ಬೆವರಿನ ಹನಿಗಳು, ಮತ್ತೊಂದೆಡೆ ವಿರೋಧಿಗಳ ನಾಶ ಇವೆಲ್ಲವೂ ಕೀರ್ತಿ ಎನ್ನುವ ಕೊರಳ ಹಾರದ ಪದಕಗಳಂತೆ ಹೊಸಮಯಗಳು ಬಂದು ಸೇರ್ಪಡೆಯಾದಂತೆ, ಒಬ್ಬೊಬ್ಬ ರಾಜನ ಪರಾಕ್ರಮಿಯ ಸಾವೂ ಕೂಡ ಹೊಸ ಮುತ್ತಿನಂತೆ ಬಲಶಾಲಿಯಾದವನ ಕೀರ್ತಿಗೆ ಸೇರ್ಪಡೆಯಾಯಿತು ಎನ್ನುತ್ತಾನೆ. ಇಲ್ಲಿ ವಿರೋಧಿ ಪರಾಕ್ರಮಿಗಳು ಸಾವು ಮುತ್ತಾಗಿ ಮಾರ್ಪಡುವುದನ್ನು ಪಂಪ ಭೀಷ್ಮ ಗಂಗೆಯ ಮಗ, ನೀರಿನ ಹನಿಗಳು ಮುತ್ತಾಗಿ ಭೀಷ್ಮನ ಪರಾಕ್ರಮಕ್ಕೆ ಸಾಕ್ಷಿಯಾದವು ಎನ್ನುತ್ತಾನೆ.

ಹತ್ತನೇ ಆಶ್ವಾಸ ಕರ್ಣನ ಪ್ರತಿಜ್ಞ, ಭೀಷ್ಮ ಪ್ರತಿಜ್ಞ, ಕುಲದ ಬಗೆಗೆ ಕರ್ಣ, ದ್ರೋಣರ ವಾಗ್ವಾದ, ಮಹಾಭಾರತ ಯುದ್ಧದ ಭವಿಷ್ಯ ನಿರ್ಧಾರ ಮುಂತಾದ ಅಂಶಗಳು ಇಲ್ಲಿ ಮುಖ್ಯವಾದವುಗಳು. ಯುದ್ಧ ವರ್ಣನೆಯನ್ನು ಪಂಪ ಅತ್ಯಂತ ಸಮರ್ಥವಾಗಿ ವರ್ಣಿಸುತ್ತಾನೆ. ಪಂಪ ಕಲಿ ಎನ್ನುವುದಕ್ಕೆ ಈ ಭಾಗ ಸಾಕ್ಷಿಯಾಗಿದೆ. ಕವಿಯೂ ಎನ್ನುವುದನ್ನು ಮತ್ತೆ ಮತ್ತೆ ಹೇಳಬೇಕಾಗಿಲ್ಲ. ಆದರೂ ಪಂಪ ಕಾವ್ಯಗಳು ರಸಘಟ್ಟ ಎನ್ನುವುದರಲ್ಲಿ ಎರಡು ಮಾತಿಲ್ಲ.

**ನಡುಗನ್ನಡ: ಬಸವಣ್ಣನವರ ವಚನಗಳು (ಸಂ) ಡಾ|| ಎಲ್. ಬಸವರಾಜು**

'ವಚನ'ವೆಂಬ ಪದವೇ ವಚನಕಾರರ ಸಿದ್ಧ-ಸಾಧಕ ಮನೋಭಾವನೆಯ ಅರ್ಥಗರ್ಭವನ್ನು ಸ್ಪಷ್ಟಪಡಿಸಿಕೊಡುತ್ತದೆ. ವಚನಕಾರರು ಎಂದೂ ಕಾವ್ಯ ರಚಿಸಿ ಬದುಕ ಹಸನುಗೊಳಿಸಿಕೊಳ್ಳಬೇಕೆಂದು ಹೊರಟವರಲ್ಲ. ಮೂಲತಃ ಸಾಹಿತಿಗಳೂ ಅಲ್ಲ. ಈ ಸಮಾಜದ ಅಂಧಕಾರ-ಮೌಢ್ಯತೆಯ ಕ್ರೂರ-ಬರ್ಬತೆಯನ್ನು ವೈಚಾರಿಕ-ಸಾಮಾಜಿಕ ಸಮಾನತೆಯ ತಳಹದಿಯ ಮೇಲೆ ಹೊಸ ಧಾರ್ಮಿಕ ಪಂಥವನ್ನು ಕಟ್ಟಿ, ನವ ಸಮಾಜ ನಿರ್ಮಾಣ ಮಾಡಲು ಸುಧಾರಣಾವಾದಿಗಳಾಗಿ, ತತ್ವಬೋಧಕರಾಗಿ, ಸತ್ಯಾನ್ವೇಷಕರಾಗಿ ಮತ್ತು ಅಧ್ಯಾತ್ಮಿಕ ಚಿಂತಕರಾಗಿ ಮೂಡಿಬಂದವರು. ಅದು ಧಾರ್ಮಿಕತೆಯ ಸ್ವರೂಪದಿಂದಲೇ ಸುಧಾರಣೆಗೆ ತೊಡಗಿದುದು ವಿಪರ್ಯಾಸ. ಯಾವ ಧಾರ್ಮಿಕ-ಸಾಮಾಜಿಕ, ಅಂಧಕಾರತ್ವ-ಮೌಢ್ಯತೆ ಮನೆ ಮಾಡಿಕೊಂಡು ಸಾಮಾನ್ಯ ಜನರನ್ನು ಕಡೆಗಣಿಸಿ ಅಸಮಾನತೆಯ ನ್ನುಂಟು ಮಾಡುತ್ತಿತ್ತೋ ಅದೇ ಧಾರ್ಮಿಕ ಅಂಶಗಳನ್ನು ಬದಲಿಸಿ ಜಾತಿ-ಮತ-ಧರ್ಮಗಳನ್ನು ಮೀರಿ ಹೊಸ ಚಿಂತನೆಗಳ ತಳಹದಿಯಲ್ಲಿ ವಚನಕಾರರು ಧಾರ್ಮಿಕ ಪಂಥವನ್ನು ಕಟ್ಟಿ, ಜೀವನದ ರೀತಿ-ನೀತಿ, ರಚನೆ-ಭಾಷೆ-ಛಂದಸ್ಸು-ಧೋರಣೆಗಳನ್ನು ಅಭಿವ್ಯಕ್ತಿಪಡಿಸುವುದರ ಮೂಲಕ ಹೆಚ್ಚು ಮಾನವೀಯವಾಗ ತೊಡಗಿದರು. ಈ ಮುಖಾಂತರವಾಗಿಯೇ ಸಾಮಾಜಿಕ ಧಾರ್ಮಿಕ ಸಮಾನತೆಗಾಗಿ

ಒಂದು ಆಂದೋಲನವನ್ನು ಉಂಟು ಮಾಡಿದುದು ಅದ್ಭುತವೆನಿಸುತ್ತದೆ.

ವಚನಸಾಹಿತ್ಯ ಕಾಲಗರ್ಭದಲ್ಲಿ ಅಡಗಿದ್ದ ಸಾಮಾಜಿಕ-ಧಾರ್ಮಿಕ-ಸಾಹಿತ್ಯಕ ನಿರ್ಮಿತಿಗಳ ಅಡ್ಡಗೋಡೆಗಳನ್ನು ಸಾಧ್ಯವಾದಷ್ಟು ಛಿದ್ರಗೊಳಿಸಿ ಪ್ರತಿಭಟನಾತ್ಮಕ ಚೌಕಟ್ಟುಗಳನ್ನು ತನ್ನ ಮಡಿಲಿನಲ್ಲಿ ಅಡಗಿಸಿಕೊಂಡಿತು. ಅದು ಮುಂದಿನ ಸಾಮಾಜಿಕ ಜನಜೀವನದ ಮೌಲ್ಯ ಪ್ರತಿಪಾದನೆಗಳಿಗೆ ಒಂದು ಹೊಸ ಅಲೆಯನ್ನು ಉಂಟು ಮಾಡಿ ಬಂಧವನ್ನು ಕೊಟ್ಟು, ''ಕಾವ್ಯಂ ಕೇಳ್ದು ಜನ ಬದುಕಬೇಕು'' ಎನ್ನುವ ರಾಘವಾಂಕನ ಕಾವ್ಯದ ಸಾಲುಗಳು ಅಂದಿನ ಜನಜೀವನದ ದಿಕ್ಕು-ದೆಸೆಗಳನ್ನು ಪ್ರತಿಬಿಂಬಿಸಿರುವ ಕಾವ್ಯಧೋರಣೆಯ ಗಟ್ಟಿಯ ಮಾತುಗಳು.

ವಚನಗಳ ರಚನೆಗಳು ಜೀವನಾನುಸರಗಳಿಂದ, ವಿಚಾರಾನುಭವ ಮಂಥನಗಳಿಂದ ವಿಶಿಷ್ಟವಾಗಿ ಮೂಡಿಬಂದಿರುವಂತಹ ಮುಕ್ತಕಗಳು. ವಚನಕಾರರ ವಚನಗಳು ಅನುಭವ ಮೂಸೆಯಿಂದ ಮೂಡಿ ಬಂದಿದವುಗಳಾದರೂ ತಮಗೇ ಅರಿವಿಲ್ಲದೆಯೇ ಅವರು ಆಡಿದ ಮಾತುಗಳು ಕಾವ್ಯದ ಸತ್ವಗಳನ್ನು ಪಡೆದುಕೊಂಡವು. ಸುತ್ತ-ಮುತ್ತಲಿನ ವಾಸ್ತವ ಬದುಕಿನ ಪ್ರಕೃತಿ-ವಸ್ತು-ಪ್ರಾಣಿಗಳ ರೂಪಗಳನ್ನು ತಮ್ಮ ಚಿತ್ರಭಿತ್ತಿಗಳಲ್ಲಿ ಅರಗಸಿಕೊಂಡು, ಆ ಮೂಲಕ ಮನುಷ್ಯನ ಸ್ವಭಾವಗಳನ್ನು ಮನೋವೈಜ್ಞಾನಿಕವಾಗಿ ಬೋಧಿಸಿದವರು. ರಸ-ಧ್ವನಿ-ಭಾವ-ಲಯ-ಛಂದಸ್ಸುಗಳೆಂಬ ಕಾವ್ಯ ಬಂಧಗಳನ್ನು ತಮ್ಮ ಮಾತುಗಳೆಂಬ ಕಾವ್ಯಾವಂಶಗಳಲ್ಲಿ ಬಂಧಿಸಿ, ಉಪಮೆ-ರೂಪಕ-ದೃಷ್ಟಾಂತಗಳನ್ನು ಬಳಸಿ ತಮ್ಮ ರಚನೆಗಳನ್ನು ಅದ್ಭುತ ಕಾವ್ಯವಾಗಿಸಿದರು. ಆದ್ದರಿಂದಲೇ ''ವಚನ ಸಾಹಿತ್ಯ ಕನ್ನಡದ ಮಹತ್ವದ ಕೊಡುಗೆ ಅಲ್ಲದೆ ವಿಶ್ವ ಸಾಹಿತ್ಯದಲ್ಲಿ ಇದೊಂದು ಅಪರೂಪದ ಕೊಡುಗೆ'' ಎಂದು ಕೆಲವರು ಅಭಿಪ್ರಾಯಪಟ್ಟಿರುವುದು. ಅದು ವಚನಕಾರರ ಅನುಭವ ಸಮರ್ಥ ಅಭಿವ್ಯಕ್ತಿಯಾದಲ್ಲಲ್ಲಾ ಶ್ರೇಷ್ಠ ಕಾವ್ಯದಂತೆ ಕಾಣತೊಡಗುತ್ತದೆ.

ಬಸವಣ್ಣ ಮತ್ತು ಅಕ್ಕಮಹಾದೇವಿಯರ ವಚನಗಳು ಇಡೀ ವಚನಕಾರರಲ್ಲಿಯೇ ಹೆಚ್ಚು ಭಾವತೀವ್ರತೆಯಿಂದ, ಕಾವ್ಯ ಮೌಲ್ಯಗಳಿಂದ ಕೂಡಿದ ರಚನೆಗಳು, ಅವರ ರಚನೆಗಳು ಸುಂದರ ಕವನಗಳಂತೆ ಕಂಡುಬರುತ್ತವೆ. ಏಕೆಂದರೆ ಅವುಗಳಲ್ಲಿರುವ ಭಾವನೆಗಳು ಜೀವರಸದ ಭಾವತೀವ್ರತೆಯಿಂದ ಕೂಡಿ ಸಹಜವೂ ಆದ ಅಸಲಿ ಅನುಭಾವಗಳಂತೆ ಅವರ ಪ್ರಾಮಾಣಿಕ ಅನುಭವ ಕಥನವು ನಮ್ಮ ಮನಸ್ಸನ್ನು ಸೆರೆ ಹಿಡಿಯುತ್ತವೆ. ಅವರು ಬಳಸುವ ಉಪಮೆ-ರೂಪಕ-ದೃಷ್ಟಾಂತಗಳು ಅದ್ಭುತವಾದವುಗಳು. ಆಯ್ಕೆ ಮಾಡಿಕೊಂಡ ವಸ್ತುವು ಕಾವ್ಯಾಂಶಗಳನ್ನು ಸಿದ್ಧಿಸಿಕೊಂಡು ಬೆಳೆಯುವಂತೆ ಅದಕ್ಕೆ ನೀರೆರೆದು ಬಳಸುವ ಭಾಷೆಯ ಬಂಧ, ಲಯಗಳು ಸೊಗಸಾಗಿ ಕಂಡುಬರುತ್ತದೆ. ಈ ದೃಷ್ಟಿಯಿಂದ ಅವರ ವಚನಗಳು ರಚನೆಗಳು ಮೋಹಕ ಗುಣವನ್ನು ಒಳಗೊಂಡು ಸಾಹಿತ್ಯ ಭಾಗವೂ ಆಗಿದೆ. ಅದು

ವಚನಕಾರರ ಅನುಭವ ಸಮರ್ಥ ಅಭಿವ್ಯಕ್ತಿಯಾದಲ್ಲೆಲ್ಲಾ ಶ್ರೇಷ್ಠ ಕಾವ್ಯದಂತೆ ಕಾಣತೊಡಗುತ್ತದೆ.

''ಸಾಹಿತ್ಯ ಎನ್ನುವುದು ವ್ಯಕ್ತಿಯ ಮಾನಸಿಕ ಒತ್ತಡದ ಫಲವಾಗಿ ಮೂಡುವಂತಹದ್ದು'' ಎಂಬ ಮಾತುಗಳು ಸಾಹಿತ್ಯದ ಆಳ-ವಿಸ್ತಾರಗಳನ್ನು ಮನದಟ್ಟು ಮಾಡಿಕೊಡುತ್ತದೆ. ಆದ್ದರಿಂದಲೇ ನಾವು ಆಗಾಗ್ಗೆ ಸಾಹಿತ್ಯದ ಪರಮ ಗುರಿ ಸಮಕಾಲೀನ ಸಮಸ್ತ ಜನಾಂಗದ ಜೀವನ ಚಿತ್ರಣವನ್ನು ಪ್ರತಿಬಿಂಬಿಸುವುದಾಗಿರುತ್ತದೆ.

ಕಾವ್ಯ ಭಾಷೆಯನ್ನು ಸಾಮಾನ್ಯ ಜನರ ಆಡು ಮಾತಿನಲ್ಲಿ ಕಸಿಕಟ್ಟಿ, ತೀವ್ರತೆಯ ಭಾವನೆಯನ್ನು ಮನ-ಮಿಡಿಯುವಂತೆ ಬಸವಣ್ಣನವರು ಬಳಸಿರುವ ಭಾಷೆಯ ಅರ್ಥ ಮನುಷ್ಯನ ಅಂತರಂಗದ ತುಮುಲಗಳನ್ನು ಅರ್ಥೈಸುವ ರೀತಿ, ಅದರ ಧ್ವನ್ಯಾರ್ಥ ಅದ್ಭುತವಾಗಿ ಮನದಟ್ಟಾಗುತ್ತದೆ.

ಮನೆಯೊಳಗೆ ಮನೆಯೊಡೆಯನಿದ್ದಾನೋ
ಇಲ್ಲವೋ :
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ
ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೋ
ಇಲ್ಲವೋ
ತನುವಿನೊಳಗೆ ಹುಸಿತುಂಬಿ
ಮನದೊಳಗೆ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲಾ
ಕೂಡಲಸಂಗಮದೇವಾ

ಈ ವಚನದಲ್ಲಿ ಅಂತರಂಗದ ಪರಿಶುದ್ಧತೆಯ ಕ್ರಿಯೆಯು ಅಳಿದು, ಅರಾಜಕತೆಯ ಸ್ಥಿತಿಯನ್ನು ಪಡೆದುಕೊಂಡಿರುವ ಮನುಷ್ಯನ 'ಪರಿಶುದ್ಧ' 'ಮನಸ್ಸಿ'ನ ಹುಡುಕಾಟದ ಕ್ರಿಯೆಯೂ ಆಗಿದೆ. ಈ ಕ್ರಿಯೆಯಲ್ಲಿ ಇಡೀ ವಚನವೇ 'ಮನೆ'ಯ ಒಂದು ಪ್ರತೀಕವಾಗಿ 'ಮನೆಯೊಡೆಯನಿದ್ದಾನೋ ಇಲ್ಲವೋ' ಎಂಬ ಅನುಮಾನದಿಂದ ಆರಂಭವಾಗಿ ಕೊನೆಗೆ ನಿರ್ದಿಷ್ಟತೆಯನ್ನು ಮುಟ್ಟಿ 'ಮನೆಯೊಡೆಯನಿಲ್ಲಾ' ಎಂಬ ನಿರ್ಧಾರಕ್ಕೆ ಬಂದು ನಿಲ್ಲುತ್ತದೆ. ಇಲ್ಲಿ ಬರುವ 'ಹೊಸ್ತಿಲಲ್ಲಿ ಹುಲ್ಲು ಹುಟ್ಟಿ', 'ಮನೆಯೊಳಗೆ ರಜ ತುಂಬಿ', 'ತನುವಿನೊಳಗೆ ಹುಸಿತುಂಬಿ', ಮನದೊಳಗೆ ವಿಷಯ ತುಂಬಿ - ಸಾಲುಗಳಲ್ಲಿ ಕಾವ್ಯಾಂಶದ ಭಿತ್ತಿಗಳು ಹೇಗೆ ಒಂದಕ್ಕೊಂದು ಒಳಾರ್ಥಗಳನ್ನು ಬಿಡಿಸಿದಂತೆ ಬಿಚ್ಚಿಕೊಳ್ಳುವಲ್ಲಿ ಅರ್ಥಗರ್ಭಿತವಾಗಿವೆ ಎನ್ನುವುದು ಇಲ್ಲಿ ಸೊಗಸಾಗಿ ಕಂಡುಬರುತ್ತದೆ. ಈ ಭಾಗಗಳೇ ವಚನದ ಕಾವ್ಯ ಜೀವಾಳದ ಅಂಶಗಳು.

ಮನೆಯೊಡೆಯನ ಅಹಂಕಾರದ ಚಿತ್ರವನ್ನು ಕೊಡುತ್ತದೆ. ಅಲ್ಲದೆ ಆತನ 'ತನುವಿನೊಳಗೆ ಹುಸಿ', 'ಮನೆಯೊಳಗೆ ರಜ', 'ಮನದೊಳಗೆ ವಿಷಯ' - ಇಂತಹ ವಿಕೃತ ಭಾವನೆಗಳು, 'ಮನೆ-ಮನ'ದೊಳಗೆ ಮನೆ ಮಾಡಿಕೊಂಡು ವಾಸ ಮಾಡುತ್ತಿರುವ ಕಾರಣದಿಂದ ಮನೆಯೊಳಗೆ ಮನೆಯೊಡೆಯ ಇಲ್ಲ. ಇಂತಹ ಕಡೆಯಲ್ಲಿ 'ಮನದ ಒಡೆಯ ಶಿವನೂ' ಇರಲು ಸಾಧ್ಯವಿಲ್ಲದ ಸ್ಥಿತಿಯನ್ನು ಎಣೆದು ನಿಲ್ಲಿಸುತ್ತದೆ. ಎಲ್ಲಿ 'ಮನಸ್ಸಿನ ಪರಿಶುದ್ಧತೆ' ಇರುತ್ತದೆಯೋ ಅಲ್ಲಿ 'ಶಿವ'ನಿರಲು ಸಾಧ್ಯ - ಒಡೆಯನಿರಲು ಸಾಧ್ಯವಾಗುವಂತಹ ಅಂಶಗಳನ್ನು ಗುರುತಿಸಬಹುದು. ಇಲ್ಲಿ ಬಸವಣ್ಣನವರಿಗೆ ಶಿವನ ಅಂಶವೇ 'ಪರಿಶುದ್ಧತೆಯ ಮನಸ್ಸು'.

ನೆರೆ ಕೆನ್ನೆಗೆ ತೆರೆಗಲ್ಲಕೆ
ಶರೀರ ಗೂಡು ಹೋಗದ
ಮುನ್ನ
ಹಲ್ಲು ಹೋಗಿ ಬೆನ್ನು ಬಾಗಿ
ಅನ್ಯರಿಗೆ ಹಂಗಾಗದ
ಮುನ್ನ
ಕಾಲ ಮೇಲೆ ಕೈಯ್ಯನೂರಿ
ಕೋಲ ಹಿಡಿಯುವ
ಮುನ್ನ
ಪೂಜಿಸುವುದು ಕೂಡಲಸಂಗದೇವನ

'ಮುಪ್ಪು' - 'ಸಾವಿನ' ಸ್ಥಿತಿ ಮನುಷ್ಯನ ಭೀತಿಯ ಸಮಚಿತ್ತದ ಸ್ಥಿತಿಯಲ್ಲಿ ನಿಸ್ಸಹಾಯಕನಾಗುವ ವ್ಯಕ್ತಿಯ ಚಿತ್ರವನ್ನು ಒಂದು ಪ್ರತಿಮೆಯಲ್ಲಿ ಕಟ್ಟಿರುವ ಚಿತ್ರ ಸುಂದರವಾಗಿ ಈ ವಚನದಲ್ಲಿ ಮೂಡಿಬಂದಿದೆ. 'ನೆರೆ ಕೆನ್ನೆಗೆ ತೆರೆಗಲ್ಲಕೆ' - ಪದಗಳ ಜೋಡಣೆ ಪ್ರಾಸ, ಲಯಗತಿಯಿಂದ ಛಂದೋಬಂಧವಾಗಿ ಓಡುವ ಗತಿಯಿಂದ ಮುಂದಿನ ಸಾಲುಗಳಲ್ಲಿ ಹಿನ್ನಡೆಯ ಸ್ಥಿತಿಗತಿಯನ್ನು ಸೂಚಿಸುತ್ತಿರುತ್ತದೆ.

'ಹಲ್ಲು ಹೋಗಿ' - 'ಬೆನ್ನು ಬಾಗಿ' - 'ಅನ್ಯರಿಗೆ ಹಂಗಾಗು'ವಲ್ಲಿ ಮುಪ್ಪಿನ ಸ್ಥಿತಿಯನ್ನು 'ಕಾಲಮೇಲೆ ಕೈಯ್ಯನೂರಿ', 'ಕೋಲ ಹಿಡಿಯು'ವಲ್ಲಿ ನಿಸ್ಸಹಾಯಕ ಸಾವಿನ ಸ್ಥಿತಿಯನ್ನು ಧ್ವನಿಪೂರ್ಣವಾಗಿ ಧ್ವನಿಸುತ್ತದೆ. 'ನೆರೆ-ತೆರೆ', 'ಕೆನ್ನೆ-ಗಲ್ಲ' ಇವುಗಳು ಶರೀರದ ಒಂದು ಭಾಗವಾಗಿದ್ದರೂ ಅವುಗಳೆಲ್ಲ ಮುಪ್ಪಿನಿಂದ ಸುಕ್ಕು ಹಿಡಿದು ಮುದುಡಿ ಹೋಗುವ ಸಂದರ್ಭಕ್ಕಿಂತ ಮುಂದೆ ಮನುಷ್ಯನು ಎಚ್ಚೆತ್ತುಕೊಂಡು ಸಾರ್ಥಕ ಬದುಕಿನಲ್ಲಿ ಭಕಿ-ಭಕ್ತರ ಐಕ್ಯಸ್ಥಿತಿಯ ಕ್ರಿಯೆಯ ಬಂಧನವನ್ನು ನಿರ್ಮಾಣ ಮಾಡಿಕೊಳ್ಳಬೇಕು. ಅದು ಹೆಚ್ಚು ಮಾನವೀಯವಾಗಿ ಆದರ್ಶಯುತವಾಗಿ ಜೀವನವನ್ನು ರೂಪಿಸಿಕೊಳ್ಳಬೇಕು. ಆಗಲೇ ಈ ಮನುಷ್ಯನ

ಬದುಕಿಗೊಂದು ಅರ್ಥ-ಭಾವಬಂಧ. ಹುಟ್ಟು ಸಾರ್ಥಕತೆಯನ್ನು ಪಡೆದುಕೊಳ್ಳುವುದರ ತುಡಿತದೊಳಗೆ ಸಿಲುಕಿಕೊಳ್ಳಬೇಕು. ಇಲ್ಲದಿದ್ದರೆ 'ಗೂಡುಹೋಗಿ' -'ಬೆನ್ನುಬಾಗಿ'- 'ಕೈಯ್ಯನೂರಿ' ಪದಪುಂಜಗಳ ದೈನ್ಯತೆಯ ಅಸಹಾಯಕ ಸ್ಥಿತಿಯಲ್ಲಿ ಮೌಲ್ಯವನ್ನು ಕಳೆದುಕೊಳ್ಳುತ್ತವೆ.

ಕರಗಿಸಿ ಎನ್ನಮನದ ಕಾಳಿಕೆಯ
ಕಳೆಯಯ್ಯ
ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ
ನೋಡಯ್ಯ
ಕಡಿಹಕ್ಕೆ ಬಡಿಹಕ್ಕೆ ತಂದೆನ್ನ
ಕಡೆಯಾಣಿಯ ಮಾಡಿ
ನಿಮ್ಮ ಶರಣರ ಪಾದಕ್ಕೆ
ತೊಡುಗೆಯ ಮಾಡಿ
ಸಲಹಯ್ಯ ಕೂಡಲಸಂಗಮದೇವ

ಭಕ್ತ-ಭಗವಂತನಲ್ಲಿ ಆತ್ಮಶೋಧನೆಯ ಪ್ರಕ್ರಿಯೆಯ ದಿಕ್ಕಿನಲ್ಲಿ ಆತ್ಮ ಸಮರ್ಪಣೆ ಮಾಡಿಕೊಳ್ಳುವ ಭಕ್ತನ 'ಮನಸ್ಸು' ಸುಂದರ ಆಭರಣವಾಗಿ ತೊಡಿಗೆಯ ಕ್ರಿಯೆಯಾಗಬೇಕೆಂಬ ಹಂಬಲದ ಸ್ಥಿತ ಇದೆ. ಅದು ಅಕ್ಕಸಾಲಿಗ ಚಿನ್ನವನ್ನು, ಶಿಲ್ಪಿಯು ಕಲ್ಲೊಂದನ್ನು 'ಕರಗಿಸಿ' ಒಂದು ಸುಂದರ ತೊಡಿಗೆಯಾಭರಣವಾಗಿ-ಮೂರ್ತಿಯಾಗಿ ರೂಪಗೊಳಿಸುವಂತೆ ಮನಸ್ಸಿನ ಕಳವಳವನ್ನು ಕಳೆದು 'ಒರೆಬಣ್ಣಕ್ಕೆ' - 'ಪುಟವಿಕ್ಕಿ' ಚೈತನ್ಯವುಂಟು ಮಾಡುವ ಚಕ್ರದ ಗತಿಗೆ 'ಕಡೆಯಾಣಿ'ಯಾಗ ಬೇಕೆಂಬ ಭಕ್ತನ ಹಂಬಲ ವಿಶಿಷ್ಟವಾದುದು. ಕೊನೆಯಲ್ಲಿ ಬರುವ 'ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹಯ್ಯ' - ಎಂಬ ಭಕ್ತನ ಆರ್ದ್ರತೆಯ ಅರ್ಪಣಾ ಮನೋಭಾವದ ಕೊನೆಯ ಸ್ಥಿತಿಯನ್ನು ಭಕ್ತನ ಮನಸ್ಸು ಮುಟ್ಟುತ್ತದೆ.

'ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ', 'ಕಡಿಹಕ್ಕೆ ಬಡಿಹಕ್ಕೆ ತಂದೆನ್ನ', 'ಕಡೆಯಾಣೆಯ ಮಾಡಿ ತೊಡಿಗೆಯ ಮಾಡಿ' - ಎಂಬ ಅಲಂಕಾರಿಕ ಮಾತುಗಳು ಭಕ್ತನೊಬ್ಬನು ಮನಸ್ಸನ್ನು ಕರಗಿಸಿ ಶೋಧಿಸಿಕೊಳ್ಳುವ ಪರಿಶುದ್ಧತೆಯ ಅಪ್ಪಟ ಸಾಚಾತನದ ಪ್ರಾಮಾಣಿಕತೆಯನ್ನು ವ್ಯಕ್ತಪಡಿಸುತ್ತವೆ.

ಮರಮರನ ಮಥನದಿಂದಾಗ್ನಿ
ಹುಟ್ಟಿ
ಆ ಮರನೆಲ್ಲವ ಸುಡುದಿಪ್ಪುದೆ
ಮಹಾನುಭಾವರ ಸಂಗದಿಂದ
ಜ್ಞಾನಾಗ್ನಿ

ಹುಟ್ಟಿ
ಎನ್ನ ತನುಗುಣವೆಲ್ಲವ
ಸುಡದಿಪ್ಪುದೆ
ಇದು ಕಾರಣ ಮಹಾನುಭಾವರ ತೋರಿಸು
ಕೂಡಲಸಂಗಮದೇವ.

ಮರದಗ್ನಿ-ಜ್ಞಾನಾಗ್ನಿಗಳು ಪರಸ್ಪರ ಒಂದಕ್ಕೊಂದು ಪೂರಕವಾದ ಪ್ರಕ್ರಿಯೆಗಳಾದರೂ ಜ್ಞಾನಾಗ್ನಿ ಮನುಷ್ಯನ ಅಂತರಂಗದ ನಿರ್ಗುಣಗಳೆಲ್ಲವನ್ನೂ ಸುಟ್ಟು ಸದ್ಗುಣಗಳನ್ನು ಸೃಷ್ಟಿಸುವ ಸೃಷ್ಟಿಕ್ರಿಯೆಗಳಾದರೆ-ಮರದಗ್ನಿ ಆಗಲ್ಲ. ಹುಟ್ಟಿದ ಪರಿಸರವನ್ನೇ ಸುಟ್ಟು ಧ್ವಂಸ ಮಾಡುವ ದುರ್ಗುಣದ ಸೃಷ್ಟಿಕ್ರಿಯೆಯಾಗಿ ಹುಟ್ಟನ್ನು ಪಡೆದುಕೊಳ್ಳುತ್ತದೆ. ಇಲ್ಲಿ 'ಮಹಾನುಭಾವರ ಸಂಗದಿಂದ ಹುಟ್ಟಿದ ಜ್ಞಾನಾಗ್ನಿ ತನುಗುಣಗಳನ್ನು ಸುಡುವಲ್ಲಿ ಸದಾ ಕ್ರಿಯಾಶೀಲವಾಗಿರುತ್ತದೆ. ಆದ್ದರಿಂದಲೇ ಇಂತಹ ಮಹಾನುಭಾವದ ದರ್ಶನದ ಹಂಬಲ ಭಕ್ತನಾದವನಿಗೆ ಅಧ್ಯಾತ್ಮದ ಜ್ಞಾನ ಅತ್ಯವಶ್ಯಕವಾಗಬೇಕೆಂಬ ಕೋರಿಕೆ ಬಸವಣ್ಣನವರದು. ಮಥನದಿಂದಗ್ನಿ - ಮರನೆಲ್ಲವ ಸುಡುವ ಪ್ರಕ್ರಿಯೆಗೆ ಮನುಷ್ಯನ ತನುಗುಣಗಳಾಗಿ ಹೋಲಿಸಿ ಹೇಳುವ ಅಂಶವನ್ನು ಇದರಲ್ಲಿ ಅರ್ಥೈಸಬಹುದಾಗಿದೆ.

ಎನ್ನ ಕಾಯವ ದಂಡಿಗೆಯ
ಮಾಡಯ್ಯ
ಎನ್ನ ಶಿವ ಸೋರೆಯ
ಮಾಡಯ್ಯ
ಎನ್ನ ನರವ ತಂತಿಯ
ಮಾಡಯ್ಯ
ಎನ್ನ ಬೆರಳ ಕಡ್ಡಿಯ
ಮಾಡಯ್ಯ
ಬತ್ತೀಸರಾಗವ
ಹಾಡಯ್ಯ
ಉದರದಲ್ಲೊತ್ತಿ ಬಾರಿಸು
ಕೂಡಲ ಸಂಗಮದೇವ

ಇಡೀ ದೇಹವನ್ನೇ - ತಂಬೂರಿಯಾಗಿಸಿಕೊಂಡಿರುವ ಪ್ರತಿಮೆ ವಿಶೇಷವಾದುದು. ಈ ರಚನೆಯು ಭಕ್ತನ ಅನನ್ಯ ದೈನ್ಯತೆಯ - ಸಮರ್ಪಣಾಭಾವ - ಇಲ್ಲಿ ಮಡುಗಟ್ಟಿ ಅಭಿವ್ಯಕ್ತಸ್ವರೂಪಿಯಾಗಿದೆ. ಪರಮಾತ್ಮನು ನುಡಿಸಿದಂತೆ ನುಡಿಯುವ ತಂಬೂರಿಯಾಗಬೇಕೆಂಬ ಭಾವ ಭಕ್ತನ ಕೋರಿಕೆಯಾಗಿದೆ. ಇಲ್ಲಿ

'ಮಾಡಯ್ಯ' 'ಮಾಡಯ್ಯ' ಪದದ ದೈನ್ಯತಾಭಾವ ಪರಿ-ಪರಿಯಾಗಿ ಬೇಡಿಕೊಳ್ಳುವ ಭಕ್ತನ ಸ್ಥಿತಿಯು ಕರುಣೆಯನ್ನು ಉಕ್ಕಿಸಿ ಪರಮಾತ್ಮನ ತೀವ್ರತೆಯ ಅವಶ್ಯಕತೆಯ ಹಂಬಲವನ್ನುಂಟು ಮಾಡುತ್ತದೆ.

'ಕಾಯವ ದಂಡಿಗೆಯಾಗಿಸಿ', 'ಶಿರವ ಸೋರೆಯಾಗಿಸಿ', 'ನರವ ತಂತಿಯಾಗಿಸಿ', 'ಬೆರಳ ಕಡ್ಡಿಯಾಗಿಸುವ' ಮಾತುಗಳು ನಮ್ಮ ಕಣ್ಣ ಮುಂದೆ ತಂಬೂರಿಯ ರಚನೆಯು ಹಾದು ಹೋಗುತ್ತ ಸ್ತಬ್ಧ ಚಿತ್ರದಂತೆ ಭಾಸವಾಗುತ್ತಿದೆ. ಇಲ್ಲಿ ಕಾಯವೇ ತಂಬೂರಿಯಾಗಿ ಪರಿವರ್ತನೆ ಹೊಂದುತ್ತದೆ. 'ಬತ್ತೀಸ ರಾಗವ ಹಾಡಯ್ಯ', 'ಉದರಲೊತ್ತಿ ಬಾರಿಸು' ಎನ್ನುವಾಗ ಅಭಿವ್ಯಕ್ತವಾದ ಭಾವದ ಸಂಕೀರ್ಣತೆ 'ಬತ್ತೀಸ' 'ಉದರಲೊತ್ತಿ ಬಾರಿಸು' ಎನ್ನುವಾಗ ಒತ್ತುಗಳ ಒತ್ತು ಬಿದ್ದು ಅಭಿನಯವಾಗಿ ನುಡಿಸಿದ 'ಅನುಭಾವ' ಭಾವತೀವ್ರತೆಯನ್ನು ತಂದುಕೊಡುತ್ತದೆ.

ಲಿಂಗವ ಪೂಜಿಸಿದ ಬಳಿಕ
ಜಂಗಮಕ್ಕಂಜಲೇ ಬೇಕು
ದಕ್ಕನುಂಗಿನಂತೆ ಬೆರೆದುಕೊಂಡಿರಬೇಡ
ಬೀಗಿ ಬೆಳೆದ ಗೊನೆಬಾಳೆಯಂತೆ
ಬಾಗಿಕೊಂಡಿದ್ದರೆ
ಬೇಡಿದ ಪದವಿಯ ನೀವ
ಕೂಡಲ ಸಂಗಮದೇವ

'ಲಿಂಗ', 'ಜಂಗಮ' ರೂಪಗಳು ಒಂದಕ್ಕೊಂದು ಸಾಮರಸ್ಯವನ್ನು ಮೂಡಿಸುವ ಸಂಕೇತಗಳು. 'ಲಿಂಗಪತಿಯಾಗಿ', 'ಶರಣಸತಿಯಾಗಿರುವ' ಅಂತರ್ಭಾವವನ್ನು ಈ ವಚನ ರಚಿಸುತ್ತದೆ. ಇಲ್ಲಿ 'ಲಿಂಗ ಜಂಗಮವಾಗಿ', 'ಜಂಗಮ ಲಿಂಗವಾಗಿ' ಬೆರೆತುಕೊಳ್ಳುವ ಕ್ರಿಯೆಯು 'ದಕ್ಕನುಂಗಿ'ದಂತೆ ಎನ್ನುವಾಗ ತಕ್ಷಣ ನಡೆದು ಹೋಗುವ ಕ್ರಿಯೆಯಾಗಿಬಿಡಬೇಕೆಂಬ ಭಕ್ತನ ಮಹಾದಾಸೆ ತುಂಬಿಕೊಂಡಿದೆ. ಅದು 'ಬೀಗಿ ಬಾಳೆಗೊನೆವಾಳೆ'ಯಂತೆ 'ಬಾಗಿಕೊಂಡಿದ್ದರೆ' ಮಾತ್ರ ಸಾಧ್ಯ. ಆಗ ಫಲಾಪೇಕ್ಷೆಯೂ ಆಗಿ ಪರಿವರ್ತನೆಗೊಳ್ಳುತ್ತದೆ.

'ಬೀಗಿ ಬೆಳೆದ ಗೊನೆವಾಳೆ' - 'ಬಾಗಿಕೊಂಡಿದ್ದರೆ' ಎನ್ನುವ ಪದದ ಭಾವ ತೀವ್ರತೆಯು ಭಕ್ತನೊಬ್ಬನ ಹದಗೊಂಡ ಪರಿಪಕ್ವತೆಯ ಮಾಗಿದ ಸ್ಥಿತಿಯನ್ನು 'ಬೀಗಿ' 'ಬಾಗಿ' - 'ಬೇಡಿ' ಎಂಬಲ್ಲಿ ಧ್ವನಿಪೂರ್ಣತೆಯನ್ನು ಪಡೆದುಕೊಳ್ಳುತ್ತದೆ. ಕೊನೆಗೆ 'ಬೇಡಿದ ಪದವಿಯನೀವ' ಪರಿಕಲ್ಪನೆಯು ಭಕ್ತನ ಮನಸಿನ ಸಾಧಕ ಸ್ಥಿತಿಗೆ ಸಂದ ಗೌರವವೂ ಆಗಿಬಿಡುತ್ತದೆ.

ಉದಕದೊಳಗೆ ಬೈಚಿಟ್ಟ
ಬೈಕೆಯ ಕಿಚ್ಚಿನಂತೆ ಇದ್ದಿತ್ತು
ಸಸಿಯೊಳಗಣ
ರಸದ ರುಚಿಯಂತೆ ಇದ್ದಿತ್ತು
ನೆನೆಯೊಳಗಣ
ಪರಿಮಳದಂತೆ ಇದ್ದಿತ್ತು
ಕೂಡಲ ಸಂಗಮದೇವರ ನಿಲವು
ಕನ್ನೆಯ ಸ್ನೇಹದಂತೆ ಇದ್ದಿತ್ತು

ಭಕ್ತ-ಭಗವಂತನ ಸ್ವರೂಪವು ಹೇಗೆ ನಿರ್ದಿಷ್ಟತೆಯನ್ನು ಪಡೆದುಕೊಂಡು ಭಕ್ತನಲ್ಲಿ ಮೋಹಕತೆಯನ್ನು ಅಂತರ್ಗತ ಮಾಡಿಕೊಂಡಿರುತ್ತೇನ್ನುವುದನ್ನು ಇಡೀ ವಚನವು ಉಪಮೆಗಳ ಮೂಲಕವೇ ಅಭಿವ್ಯಕ್ತಪಡಿಸುತ್ತದೆ. ಭಕ್ತನೊಬ್ಬನು, ಅದು ಅಮೂರ್ತವಾದ ಘಟ್ಟದಲ್ಲಿ ಭಗವಂತನ ನಿಲುವು ಸಾಕ್ಷಾತ್ಕಾರಗೊಳ್ಳಬೇಕು. ಆಗ ಅನುಭಾವವು ಅಧ್ಯಾತ್ಮಿಕವಾಗಿ ಉನ್ನತಿಗೇರುತ್ತದೆ. ಭಕ್ತನಿಗೆ 'ದೇವರ ನಿಲುವು' ಇಂತಿಷ್ಟೇ ಎಂದು ಅಳೆಯಲು ಆಗದಿರುವ ಒಂದು ಬಂಧ. ಅದು 'ಉದಕದೊಳಗೆ ಬೈಚಿಟ್ಟಕಿಚ್ಚಿನಂತೆ', 'ರಸದ ರುಚಿಯಂತೆ', 'ಪರಿಮಳದಂತೆ', 'ಕನ್ನೆಯ ಸ್ನೇಹದಂತೆ' ಅಮೂರ್ತವಾಗಿರುವ ಪರಿಶುದ್ಧತೆಯ ಅಂಶ.

'ರುಚಿ', 'ಪರಿಮಳ', 'ಸ್ನೇಹ' ಇವು ಒಂದಕ್ಕೊಂದು ಆಕರ್ಷಣೀಯ ವಾಗಿದ್ದರೂ ಅಷ್ಟು ಸುಲಭವಾಗಿ ಭಕ್ತನಿಗೆ ದಕ್ಕುವುದಿಲ್ಲ. ಆತನು ಸಿದ್ಧ-ಸಾಧಕನ ಮಟ್ಟವನ್ನು ತಲುಪಿದಾಗ ತಾನಾಗಿಯೇ ಒಲಿಯುವಂತಹವು. ಇದ್ದಿತ್ತು-ಇದ್ದಿತ್ತು - ಎನ್ನುವಾಗ ಅದರ ಒತ್ತು ಸ್ಪಟಿಕದಂತೆ ಸ್ಪುಟವಾಗಿರುವ ದೇವರ ನಿಲುವು ಖಚಿತತೆಯನ್ನು ಪಡೆದುಕೊಳ್ಳುತ್ತದೆ. ಈ ವಚನವು ಪ್ರಾಸ, ಲಯದ ಗೇಯಗುಣಗಳಿಂದ ಮನಸ್ಸನ್ನು ಸೂರೆಗೊಳ್ಳುತ್ತದೆ.

ಸೂರ್ಯನುದಯ ತಾವರೆಗೆ ಜೀವಾಳ
ಚಂದ್ರನುದಯ ನೈದಿಲೆಗೆ ಜೀವಾಳ
ಕೂಪರ ಠಾವಿನಲಿ ಕೂಟ - ಜೀವಾಳವಯ್ಯ
ಒಲಿದ ಠಾವಿನಲ್ಲಿ ನೋಟ-ಜೀವಾಳವಯ್ಯ
ಕೂಡಲ ಸಂಗನ ಶರಣರ ಬರವೆನಗೆ
ಪ್ರಾಣ - ಜೀವಾಳವಯ್ಯ

'ಪ್ರಾಣ'-'ಜೀವಾಳ'ವೆರಡು ಒಂದೇ ಆದರೂ ಅನುಭಾವದಲ್ಲಿ ಬೇರೆ ಬೇರೆಯಾಗಿ ರೂಪಪಡೆದುಕೊಳ್ಳುತ್ತದೆ. ಪ್ರಾಣ-ದೇಹದಲ್ಲಿ , ಜೀವಾಳ-ಅಧ್ಯಾತ್ಮದಲ್ಲಿ ಅಂತರ್ಗತವಾಗಿರುವ ಭಕ್ತನ ನಿಲುವುಗಳು. ಇಲ್ಲಿ 'ಪ್ರಾಣ

ಭಗವಂತ''ಜೀವಾಳ ಶರಣ' ಇದು ಬಸವಣ್ಣನವರ ಖಚಿತ ನಿಲುವು. ಅದನ್ನು ಉಪಮೆಗಳ ಮೂಲಕ ಮತ್ತಷ್ಟು ಸ್ಪಷ್ಟಪಡಿಸುತ್ತಾರೆ. 'ಸೂರ್ಯನುದಯ ತಾವರೆಗೆ ಜೀವಾಳವಾದಂತೆ' 'ಚಂದ್ರನುದಯ ನೈದಿಲೆಗೆ ಜೀವಾಳವಾದಂತೆ' 'ಶರಣದ ಕೂಟ' ಜೀವಾಳವಾಗಿ ಹುಟ್ಟಿನ ಸಾರ್ಥಕತೆಯನ್ನು ಪಡೆದುಕೊಳ್ಳುತ್ತದೆ. ಸೂರ್ಯನಿಂದ ತಾವರೆಗೆ, ಚಂದ್ರನಿಗೆ ನೈದಿಲೆಗೆ ಜೀವಸ್ಫುರಿಸಿದಂತೆ, ಶರಣರ ಕೂಟ ನೋಟದಿಂದ ಭಕ್ತನಿಗೆ ಜೀವವುಳಿಯುತ್ತದೆನ್ನುವ ಧಾಟಿ ಸೊಗಸಾಗಿದೆ. ಅದು ಶರಣರ ಬರವು ಪ್ರಾಣ-ಜೀವವು ಆಗಿ ದೇಹದಲ್ಲಿ ಸಂಚಾರವಾಗಿ 'ಜೀವಾಳ'ವಾಗುವುದು ವಚನದ ಗಟ್ಟಿ ನಿಲುವು. 'ಕೂಟ-ಜೀವಾಳವಯ್ಯ', 'ನೋಟ-ಜೀವಾಳವಯ್ಯ' ಎಂಬಲ್ಲಿ ಭಕ್ತನ ದೈನ್ಯತೆಯ, ಕೋರಿಕೆಯ ಅಳಲನ್ನು ತೋಡಿಕೊಳ್ಳುವ ಕ್ರಿಯೆಯು ಅಡಗಿದೆ.

ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ?<br>
ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ?<br>
ಜಂಗಮವಿಲ್ಲದೆ ಮಾಡಬಹುದೆ?<br>
ರೂಢೀಶನ ಭೇದಿಸಬಹುದೆ?<br>
ಒಡಲಿಲ್ಲದ ನಿರಾಳ ಕರ್ತೃ ಕೂಡಲ ಸಂಗಮದೇವ<br>
ಜಂಗಮ ಮುಖಲಿಂಗವಾನಾಗಿ<br>
ಮತ್ತೊಂದನರಿಯೆನಯ್ಯ

ಪ್ರಶ್ನಾರ್ಥವಾಗಿಯೇ ಆರಂಭವಾಗುವ ಈ ವಚನವು 'ಜಂಗಮನ ಕುರುಹು' ಅಸ್ತಿತ್ವ ಲಿಂಗದಲ್ಲಿ ಬಹಳ ಮುಖ್ಯವಾಗುತ್ತಿದೆ. ಲಿಂಗ-ಜಂಗಮವಾಗದಿದ್ದರೆ, ಜಂಗಮ ಲಿಂಗವಾಗದಿದ್ದರೆ ಭಕ್ತಿಯ ಸ್ವರೂಪಕೆ ಅರ್ಥವೆ ಇಲ್ಲ. ಅದು 'ಭಿತ್ತಿಯಿಲ್ಲದೆ ಬರೆದ ಚಿತ್ತಾರದಂತೆ', 'ಧರೆಯಿಲ್ಲದೆ ಬಿತ್ತಿ ಬೆಳೆದಂತೆ' ನಿರರ್ಥಕವಾಗುವ ಸ್ಥಿತಿಯನ್ನು ಈ ವಚನ ಅಭಿವ್ಯಕ್ತಪಡಿಸುತ್ತದೆ.

'ಭಿತ್ತಿಯಿದ್ದರೆ ಚಿತ್ತಾರ', 'ಧರೆಯಿದ್ದರೆ ಬೆಳೆ', 'ಜಂಗಮವಿದ್ದರೆ ಲಿಂಗ', 'ಲಿಂಗವಿದ್ದರೆ ಜಂಗಮ' ಇವೆರಡು ಬೆರೆತುಕೊಂಡಿರಬೇಕು. ಈ ರೀತಿಯ ಐಕ್ಯಸ್ಥಿತಿ ಆಧ್ಯಾತ್ಮಕ ಸ್ಥಿತಿಯೂ ಆಗುತ್ತದೆ. ಆಗ ಮತ್ತೊಂದನರಿಯದಂತೆ ಮಾಡುವಲ್ಲಿ ಯಶಸ್ವಿಯಾಗುತ್ತದೆ. ಈ ತಾರ್ಕಿಕತೆಯ ಬಂಧನದಿಂದ ಈ ವಚನದ ಭಾವ ತೀವ್ರತೆಯನ್ನುಂಟುಮಾಡುತ್ತದೆ.

ಇಲ್ಲಿ ಕೆಲವು ವಚನಗಳನ್ನು ಮಾತ್ರ ಕಾವ್ಯ ಮೌಲ್ಯದ ದೃಷ್ಟಿಯಿಂದ ವಿಶ್ಲೇಷಣೆ ಮಾಡಲಾಗಿದೆ. ಒಟ್ಟಾರೆ ಬಸವಣ್ಣನವರ ವಚನಗಳೆಲ್ಲವೂ ಕಾವ್ಯ ಜೀವಾಳದಿಂದಲೇ ಪುಟಿಯುತ್ತವೆ. ಅವರ ಸಮಗ್ರ ವಚನಗಳನ್ನು ವಿಶ್ಲೇಷಣೆಗೆ ಮಾಡಿದ್ದೆ ಆದರೆ ಅವುಗಳಲ್ಲಿರುವ ಗಾಢವಾದ ಅನುಭವ, ಭಾವ

ತೀವ್ರತೆ-ಮೊನಚಾದ ಆಲೋಚನೆಗಳು ಜನಸಾಮಾನ್ಯರ ಬದುಕನ್ನು ಆಧರಿಸಿ, ಬರೆದ 'ಆಧುನಿಕ ಮಹಾ ಕಾವ್ಯ'ದಂತೆ ಜನರ ಮನದಲ್ಲಿ ನಿಲ್ಲುತ್ತದೆ. ಅಲ್ಲದೆ ಅವರು ಬಳಸಿರುವ ವಸ್ತು-ಭಾಷೆ-ರಚನೆ-ರೀತಿ- ಪ್ರಾಸ-ಲಯ-ಗೇಯತೆ ಛಂದೋಬದ್ಧವಾಗಿ ಜನರ ನಾಲಿಗೆಯಲ್ಲಿ ನಿಂತಿವೆ. ಈ ದೃಷ್ಟಿಯಿಂದ ನಿಜವಾಗಿಯೂ ವಚನ ಸಾಹಿತ್ಯ ಆಧುನಿಕ 'ಮಹಾಕಾವ್ಯ'.

**ಬಸವರಾಜದೇವರ ರಗಳೆ (ಸಂ) ಟಿ.ಎಸ್. ವೆಂಕಣ್ಣಯ್ಯ**

'ಬಸವರಾಜದೇವರ ರಗಳೆ' ಬಸವಣ್ಣನ ವ್ಯಕ್ತಿತ್ವವನ್ನು ಉಜ್ವಲವಾಗಿ ಅನಾವರಣಗೊಳಿಸಿರುವ ಮಹತ್ವದ ಕೃತಿ. ವಚನಕಾರರ ನಂತರದಲ್ಲಿ ಬಂದ ಹರಿಹರ ಸಹಜವಾಗಿ ಭಕ್ತಿ ಕವಿಯಾದ್ದರಿಂದ ಬಸವಣ್ಣನ ಹೋರಾಟದ ಬದುಕಿನ ತಾತ್ವಿಕ ಚಿಂತನೆಗಳನ್ನು ಭಕ್ತಿ ಪರವಶತೆಯ ಭಾವಾವೇಶದಲ್ಲಿ ಕಡೆದು, ಪುರಾಣ-ಇತಿಹಾಸ ಪ್ರತೀಕವಾದ ಆಯಾಮದಲ್ಲಿ ನಿರೂಪಿಸಿದ್ದಾನೆ. ಹರಿಹರನ ಕಾಲಕ್ಕಾಗಲೇ ಬಸವಣ್ಣ ಸಾಮಾನ್ಯ ವ್ಯಕ್ತಿತ್ವವನ್ನು ಕಳೆದುಕೊಂಡು ಅಸಾಮಾನ್ಯ ವ್ಯಕ್ತಿತ್ವದ ಮಹಾಪುರುಷನಾಗಿದ್ದ. ಈತನು ಜನಗಳ ಮಧ್ಯ ದೈವತ್ವಕ್ಕೇರಿದ ಪವಾಡ ಪುರುಷನಾಗಿ, ಒಂದು ಕಡೆ ದೇವರಂತೆ, ಇನ್ನೊಂದು ಕಡೆ ಜನಗಳೊಳಗಿರುವ ರಾಜನಂತೆ ಪ್ರತಿಬಿಂಬಿಸಲ್ಪಟ್ಟಿದ್ದ. ಹಾಗಾಗಿ ಹರಿಹರ ಬಸವಣ್ಣನ ವ್ಯಕ್ತಿತ್ವವನ್ನು ರಾಜ-ದೇವರ ಪರಿಕಲ್ಪನೆಯಲ್ಲಿ ಚಿತ್ರಿಸಲು ಸಹಕಾರಿಯಾಗಿದೆ. ಹರಿಹರನ ಕಾವ್ಯದ ಪರಿಕಲ್ಪನೆ ಹೊಚ್ಚ ಹೊಸದು. ಭಕ್ತಿ ಪರವಶತೆಯಲ್ಲಿ ಕ್ರಾಂತಿಕಾರಕ ತತ್ವ ಚಿಂತನೆಯನ್ನು ಅಳವಡಿಸಿ, ಅದಕ್ಕೊಂದು ಪ್ರಗತಿಪರ ಆಯಾಮವನ್ನು ನೀಡಿದ್ದಾನೆ. ಈತನ ಕಾವ್ಯದ ನಾಯಕರು ಜಾತಿಯಿಂದ ಕಡೆಗಣಿಸಲ್ಪಟ್ಟ ಸಾಮಾನ್ಯರಾದ ಕೆಳಜಾತಿಯವರು. ಇವರ ಹುಟ್ಟು ಕೈಲಾಸದಲ್ಲಿ. ಅದು ಶಿವನ ಒಡ್ಡೋಲಗದಲ್ಲಿ. ಶಿವಗಣಗಳಲ್ಲಿ ಒಂದಾಗಿದ್ದ ಶಿವಭಕ್ತರು ಯಾವುದೋ ತಪ್ಪನ್ನು ಮಾಡಿ ಪರಶಿವನಿಂದ ಶಾಪಗ್ರಸ್ಥರಾಗಿ ಅದರ ವಿಮೋಚನೆಗಾಗಿ ಭೂಲೋಕದಲ್ಲಿ ಹುಟ್ಟಿ ಬೆಳೆದು ಶಾಪ ಪರಿಹಾರ ಮಾಡಿಕೊಂಡು ದೊಡ್ಡ ಸಾಧಕರಾಗಿ ಬೆಳೆದು ಕೊನೆಗೆ ಶಿವನ ಪರೀಕ್ಷೆಯಲ್ಲಿ ಶಿವನನ್ನೇ ಸೋಲಿಸಿ, ನಡುಗಿಸುವ ನಿಜ ಶಿವಶರಣರಾಗಿರುತ್ತಾರೆ. ಇವರಿಗೆ ಕೈಲಾಸ-ಭೂಲೋಕಗಳು ಸಲೀಸಾಗಿ ಓಡಾಡಿ ಬರುವ ತಾಣಗಳಾಗಿವೆ. ಈ ಮಾದರಿಯಲ್ಲಿ ಹರಿಹರ ನಿರ್ಲಕ್ಷಿಸಲ್ಪಟ್ಟ ಸಾಮಾನ್ಯ ಕೆಳಜಾತಿಗಳನ್ನು ಔನತ್ತೀಕರಿಸಿ ಮೇಲು ಜಾತಿಯವರಿಗಿಂತ ಶ್ರೇಷ್ಠರು ಎಂದು ಸಾಬೀತುಪಡಿಸಲು ಕಾವ್ಯವನ್ನು ದೂಷಿಸಿಕೊಂಡಿದ್ದಾನೆ. ಹಾಗಾಗಿ ಹರಿಹರನ ಕ್ರಾಂತಿಕಾರಕತನದ ಭಕ್ತಿಗೆ ವಿಶೇಷವಾದ ಅರ್ಥವಿದೆ.

ಹರಿಹರನ ಪ್ರಕಾರ ಬಸವಣ್ಣನು ಕೈಲಾಸದ ಶಿವನ ಒಡ್ಡೋಲಗದಲ್ಲಿ ವೃಷಭಮುಖನಾಗಿದ್ದು ಯಾವುದೋ ಮಾಡಿದ ತಪ್ಪಿಗಾಗಿ, ಅದರ ಶಾಪ ವಿಮೋಚನೆಗಾಗಿ ಭೂಲೋಕದಲ್ಲಿ ಬಾಗೇವಾಡಿಯಲ್ಲಿ ಮಾದಿರಾಜ, ಮಾದಲಾಂಬಿಕೆಯರಿಗೆ ಮಗನಾಗಿ ಜನಿಸುತ್ತಾನೆ. ತನ್ನ ಭಕ್ತಿ ನಿಷ್ಠೆ, ಪೂಜೆಗಳಿಂದಾಗಿ ಹಂತ ಹಂತವಾಗಿ ಬೆಳೆದು ವೈಚಾರಿಕಮಟ್ಟದ ಶಿವಭಕ್ತನಾಗುತ್ತಾನೆ. ಈತನ ವೈಚಾರಿಕತೆ ''ಕರ್ಮಲತೆಯಂತಿರ್ದ ಜನ್ನಿವರಮಂ ಕಳೆದು ಬಿಸುಟ್ಟು, ಹೋತಿನಗಂಟಲಂ ಬಿಗಿವಂತಿರ್ದ ಮೌಂಜಿಯಂ ಪಳೆದು ಬಿಸುಟ್ಟು, ನವ್ಯದುಕೂಲಮಂ ತೆಗೆದುಟ್ಟು ದಿವ್ಯವಾಸ್ತ್ರಮಂ ಹೊದೆದು'' ಬಸವಣ್ಣ ಬಾಗೇವಾಡಿಯನ್ನು ಬಿಟ್ಟು ಬರುವಾಗ ತನಗೆ ಕರ್ಮಕಾಂಡವಾಗಿದ್ದ ಬ್ರಾಹ್ಮಣ್ಯವನ್ನು ನಿರಾಕರಿಸಿಕೊಳ್ಳುತ್ತಾನೆ. ಈ ಮೂಲಕ ಹರಿಹರ ಬಸವಣ್ಣನನ್ನು ಜಾತ್ಯಾತೀತನಾಗಿ ಸುತ್ತಾನೆ. ಇದು ಕ್ರಾಂತಿಕಾರಿ ಕವಿಯ ಪರಿಕಲ್ಪನೆಯ ತಾತ್ವಿಕ ಚಿಂತನೆಯಾಗಿದೆ. ಕಪ್ಪಂಡಿ ಸಂಗಮದಲ್ಲಿ ಬಸವಣ್ಣನ ಭಕ್ತಿಯ ಸ್ವರೂಪವನ್ನು ಹರಿಹರ ಸಂಗಮನಾಥನ ಮತ್ತು ಬಸವಣ್ಣನವರು ಮುಖಾಮುಖಿಯಾಗಿ ಸಂಧಿಸುವ, ಸಂಭಾಷಿಸುವ ಸಂದರ್ಭದಲ್ಲಿ ಸರಳವಾದ ನೆಲೆಯಲ್ಲಿಯೇ ನಿರೂಪಿಸುತ್ತಾನೆ. ಇಲ್ಲಿ ಭಕ್ತಿಯು ಭಕ್ತ-ಭಗವಂತರ ನಡುವೆ ಸಹಜವಾದ ಪ್ರಕ್ರಿಯೆಯಾಗಿದೆ. ಆತ್ಮೀಯರಂತೆ ಒಬ್ಬರಿಗೊಬ್ಬರು ನಿವೇದಿಸಿ ಮಾತನಾಡಿಕೊಳ್ಳುತ್ತಾರೆ. ''ಎಲೆ ಮಗನೆ, ಬಸವ ಬಸವಣ್ಣ ಬಸವಿದೇವ ನಿನ್ನಂ ಮಹೀತಳದೊಳು ಮೆರೆದಪೆವು. ನೀಂ ಬಿಜ್ಜಳರಾಯ ನಿಪ್ಪ ಮಂಗಳವಾಡಕ್ಕೆ ಹೋಗು'' ಎಂದು ಅಪ್ಪಣೆ ಮಾಡುತ್ತಾನೆ. ನಂತರ ಬಸವಣ್ಣ ಅದಕ್ಕೆ ಪ್ರತಿಯಾಗಿ ನಿರಾಶ್ರಿತನಾಗಿ ಸಂಗಮನಾಥನಲ್ಲಿ ಮಂಗಳವಾಡಕ್ಕೆ ಹೋಗಲು ನಿರಾಕರಿಸುತ್ತಾನೆ. ಹೀಗೆ ಇಲ್ಲಿ ಹರಿಹರನ ಭಕ್ತಿಕ್ರಿಯೆಯಲ್ಲಿ ಭಯ-ಭಕ್ತಿಗಳ ಜಂಜಾಟವಿಲ್ಲ. ಬದಲಾಗಿ ಭಕ್ತಿಯೂ ಆತ್ಮೀಯತೆಯ ಆತ್ಮವಿಶ್ವಾಸದ ಜ್ಞಾನದ ಮಾರ್ಗವಾಗಿದೆ.

ಸಂಗಮೇಶ್ವರನ ಅಣತಿಯಂತೆ ಬಂದ ಬಸವಣ್ಣನ ನಿಜವಾದ ಸಾಧನೆ-ಸಿದ್ಧಿ ಕಂಡು ಬರುವುದು ಬಿಜ್ಜಳನ ಪ್ರಾಂತ್ಯವಾದ ಮಂಗಳವಾಡದಲ್ಲಿ. ಈ ಭಾಗದಲ್ಲಿ ಹರಿಹರ ಬಸವಣ್ಣನ 'ರಾಜ-ದೇವರ' ವ್ಯಕ್ತಿತ್ವದ ಜಂಗಮ ಸ್ವರೂಪಗಳನ್ನು ಅತ್ಯಂತ ಮಹತ್ವಪೂರ್ಣವಾಗಿ ನಿರ್ವಹಿಸಿದ್ದಾನೆ. ಬಸವಣ್ಣನ ಪ್ರವೇಶ ''ಅಕ್ಷರ ಜ್ಞಾನಮುಂಟದ ನೈದೆ ಮಾಡುವೆಂ'' ಎಂದು ಗುರು ಜಂಗಮನಂತೆ ಕಾಣಿಸಿಕೊಳ್ಳುತ್ತಾನೆ. ಬಿಜ್ಜಳನ ಆಸ್ಥಾನದಲ್ಲಿ ಲೆಕ್ಕದ ಗಣಕರು ತಪ್ಪುಲೆಕ್ಕಗಳನ್ನು ನೀಡಿ ರಾಜ್ಯ ಭಂಡಾರವನ್ನು ವಂಚಿಸುತ್ತಿದ್ದ ತಪ್ಪು ಲೆಕ್ಕಗಳೆಲ್ಲವನ್ನೂ ತೋರಿಸಿ, ತನ್ನ ಗಣಕ ವಿದ್ಯೆಯ ಚಾಣಾಕ್ಷತನ, ಬುದ್ಧಿವಂತಿಕೆಯನ್ನು ಮೆರೆಯುತ್ತಾನೆ. ಇದರಿಂದ ಸಂತುಷ್ಟನಾದ ಭಂಡಾರಿ ಸಿದ್ಧರಸು ಬಿಜ್ಜಳ ರಾಜನಿಂದ ಅರಮನೆಯಲ್ಲಿ ಗಣಕನನ್ನಾಗಿ ನೇಮಿಸುವಂತೆ ಮಾಡುತ್ತಾನೆ. ಕಾಲಾನುಗತವಾಗಿ ಬಸವಣ್ಣನು ತನ್ನ ಪ್ರಾಮಾಣಿಕತೆ,

ಲೋಕೋದ್ಧಾರಗಳ ಚಿಂತನೆಗಳ ಮಹಿಮೆಗಳಿಂದಾಗಿ ಸಿದ್ಧರಸನ ನಂತರ ಮಂಗಳವಾಡದ ರಾಜಸೂತ್ರಗಳನ್ನು ಹಿಡಿದುಕೊಂಡು ರಾಜ್ಯದ ಭಕ್ತಿ ಭಂಡಾರಿಯಾಗುತ್ತಾನೆ. ಇದಕ್ಕೆಲ್ಲ ಕಾರಣ ಸಂಗಮೇಶನ ಆಶ್ವಾಸನೆಯಂತೆ ''ನಿನ್ನಂ ಮಹೀತಳದೊಳು ಮೆರೆದಪೆವು'', ''ವಸುಮತಿಗೈದೆ ಪೂಣ್ದು ಮೆರೆದಪ್ಪೆವು'' ಎಂಬುದಾಗಿತ್ತು. ಹಾಗಾಗಿ ಸಿದ್ಧರಸ ಮಂತ್ರಿಯ ಸಕಲ ಐಶ್ವರ್ಯವು ಬಸವಣ್ಣನದಾಗಿತ್ತು. ಅರಮನೆಯಲ್ಲಿ ರಾಜಮರ್ಯಾದೆಯಿಂದಾಗಿ ರಾಜಸ್ಥಾನದಲ್ಲಿ ಸುಪ್ರತಿಷ್ಠಿತ ಶಕ್ತಿ-ವ್ಯಕ್ತಿಯಾಗಿದ್ದ. ಹರಿಹರನ ವರ್ಣನೆಯಂತೆ ''ತನತನಗೆ ಪೊಡಮಡುವ ರಾಜಪುತ್ರ, ದಂಡನಾಥ ಮಂಡಳಿಕರ್ಗೆ ಅಭಯಮನೀವುತ್ತ ಒಡ್ಡೋಲಗದ ನಡುವೆ ''ಈತ ಪ್ರಸನ್ನ ದಂಡನಾಥ, ಗಂಭೀರ ಶಿರೋಮಣಿ, ವಿಳಾಸನಿಧಿ''. ಬಿಜ್ಜಳನು ಬಸವಣ್ಣನ ಶಿವಕಳಾ ಪರಿಪೂರ್ಣ ''ತೇಜಃ ಪ್ರತಾಪ ರೂಢಿಂಗೆ'' ಮಾರು ಹೋಗುತ್ತಿದ್ದ. ಬಿಜ್ಜಳನ ಸಮಗದ್ದುಗೆಯ ಮೇಲೆ ಬಸವಣ್ಣನ ಸ್ಥಾನ ಪರಿಗಣಿಸಲ್ಪಟ್ಟಿತ್ತು. ಬಸವಣ್ಣನು ರಾಜನಿಗೆ ಸಮಬಲನಾಗಿ ಇದ್ದರೂ ಈತನ ನಿಜವಾದ ಕಾಯಕನಿಷ್ಠೆ, ನಿಚ್ಚ ಶಿವರಾತ್ರಿ, ''ಶರಣ ಸಮಾರಾಧನೆ'' ಮುಖ್ಯವಾಗಿದ್ದವು. ''ಭಕ್ತರ ಬಂಧುವಾಗಿ ಶರಣರ ಪರುಷದ ಕಣಿಯಾಗಿ ನಿತ್ಯಸುಖಿಯಾಗಿ'' ಶರಣರ ಸೇವೆಯಲ್ಲಿ ಮೆರೆಯುತ್ತಿದ್ದನು. ಇಂತಹ ಕಾರ್ಯಗಳನ್ನು ನೆರವೇರಿಸುವ ಮುಖೇನ ಬಸವಣ್ಣನು ಪ್ರಜೆಗಳ ರಾಜನಾಗಿದ್ದನು. ಮಂಗಳವಾಡದಲ್ಲಿ ಬಸವಣ್ಣನನ್ನು ಈ ತೇಜಸ್ಸಿನಿಂದ ಕಾಣಿಸುವುದು ಭಕ್ತಕವಿ ಹರಿಹರ ಭಕ್ತಿಯ ಮಹಿಮೆಯಾಗಿದೆ. ಬಸವಣ್ಣನು ಜನಗಳನ್ನು ಕಾಯುವ ಕಾಯಕ ನಿಷ್ಠೆಯಿಂದಾಗಿ ಪ್ರತಿದಿನವೂ ಈತನನ್ನು ಸಂಧಿಸಲು ಹನ್ನೆರಡು ಸಾವಿರಕ್ಕೂ ಮಿಕ್ಕಿ ಶರಣರ ಬಳಗವು ಬಂದು ಹೋಗುತ್ತಿತ್ತು. ಆ ರೀತಿಯಲ್ಲಿ ಬಸವಣ್ಣ ನಿಜವಾದ ಜನನಾಯಕನಾಗಿದ್ದನು. ಹರಿಹರನ ಪ್ರಕಾರ ಈ ಪದವಿಯೂ ಬಿಜ್ಜಳನ ರಾಜ ಪದವಿಗಿಂತಲೂ ಮಿಗಿಲಾದುದಾಗಿತ್ತು.

ಬಸವಣ್ಣನವರ ಪ್ರಜಾಪ್ರಭುತ್ವದ ಮಾರ್ಗದರ್ಶಿಗಳು, ಕಾರ್ಯೋನ್ಮುಖ ಕಾರ್ಯಸಾಧನೆಗಳು ದಿನೇ ದಿನೇ ವೃದ್ಧಿಸುತ್ತಾ ಹೋದಂತೆಲ್ಲ ಬಸವಣ್ಣನ ವಿರೋಧಿ ಗಳಿಗೆ ಸಹಿಸಲಾಗುವುದಿಲ್ಲ. ಇವರು ಶರಣಕುಲದ ಪ್ರಜಾ ಸಮೂಹಕ್ಕೆ ದಾಸೋಹ, ಸಹಪಂಕ್ತಿ ಭೋಜನ, ವಸ್ತ್ರಾಭರಣ, ಧನಕನಕಾದಿಗಳೆಲ್ಲವನ್ನು ಅರ್ಪಿಸಿ ಸೇವೆ ಮಾಡಿದ ಕಾಯಕನಿಷ್ಠೆಯನ್ನು ಪ್ರಶ್ನಿಸಿ, ಆರೋಪ ಹೊರಿಸುತ್ತಾರೆ. 'ರಾಜ್ಯದ ಭಂಡಾರದಿಂದ ಹಣದ ದುರುಪಯೋಗವಾಗಿದೆ' ಎಂದು ಬಿಜ್ಜಳನಿಗೆ ಈತನ ಗುರುವಾದ ನಾರಣಕ್ರಮಿತನ ನೇತೃತ್ವದಲ್ಲಿ ಸೌರಿಭಟ್ಟ, ವಿಷ್ಣುಪೆದ್ದಿ ಮೊದಲಾದ ವೈಷ್ಣವರು ''ಎಲೆ ಎಲೆ ಮರುಳರಸಾ, ಬಸವನು ನಿನ್ನ ಭಂಡಾರದಲ್ಲಿದ್ದ ಲೋಕೋತ್ತರವಾದ ಒಡವೆ ವಸ್ತ್ರಗಳನ್ನು ದಿವ್ಯವಾದ ವಾಹನಗಳನ್ನು ಶರಣರಿಗೆ

ಕೊಟ್ಟು ಬಿಟ್ಟಿರುವನು ಈಗ ನಮ್ಮನ್ನು ಕೇಳುವವರಾರು'' ಎಂದು ದೂರು ನೀಡುತ್ತಾರೆ. ಇದನ್ನು ಆಲಿಸಿದ ದೊರೆ ಬಿಜ್ಜಳನು ಬಸವಣ್ಣನನ್ನು ಪರೀಕ್ಷೆ ಮಾಡಲು ಭಂಡಾರದ ಹಣವು ಸ್ವಲ್ಪವೂ ದುರುಪಯೋಗವಾಗದೆ ಭಂಡಾರದ ಹಣವು ಶರಣರಿಗೆ ಖರ್ಚು ಮಾಡಿದುದಕ್ಕಿಂತ ನೂರು, ಸಾಸಿರ ಮಡಿ ವೃದ್ಧಿಯಾಗುತ್ತದೆ. ಈ ಪವಾಡ ಬಸವಣ್ಣನ ಕಾಯಕನಿಷ್ಠೆಗೆ ಸಾಕ್ಷಿಯಾಗಿದೆ. ಹೀಗೆ ಅನೇಕ ಆಪಾದನೆಗಳಿಗೆ ಬಸವಣ್ಣನು ಎದೆಗುಂದದೆ ತನ್ನ ತೀಕ್ಷ್ಣ ಬುದ್ಧಿವಂತಿಕೆಯಿಂದ ಅನೇಕ ಪವಾಡಗಳನ್ನು ತೋರಿಸುತ್ತಾನೆ. ಕಳ್ಳವೇಷದ ಜಂಗಮರು ಇಲ್ಲಿದ್ದ ಬದನೆಕಾಯಿಗಳೆಲ್ಲವೂ ಲಿಂಗಗಳಾಗುತ್ತವೆ. ಕಿನ್ನರಿ ಬೊಮ್ಮಯ್ಯನ ಉಳ್ಳಿ ಪ್ರಸಂಗದಲ್ಲಿ ಉಳಿಯಾನ್ನ 'ಅಭೋಜ್ಯ' ವೆಂದು ಅಂದಿದ್ದಕ್ಕಾಗಿ, ಅದರಿಂದ ಮುನಿಸಿಕೊಂಡ ಬೊಮ್ಮಯ್ಯನನ್ನು ಸಂತೃಪ್ತಗೊಳಿಸಿ 'ಉಳ್ಳಿಯ ಉತ್ಸವ' ವನ್ನು ಏರ್ಪಡಿಸಿ ತನ್ನ ಪವಾಡವನ್ನು ಮೆರೆಯುತ್ತಾನೆ.

ಹರಿಹರನ ಕ್ರಾಂತಿಕಾರಿ ಭಕ್ತಿಯ ನಿಷ್ಠೆಯ ನಿರ್ವಹಣೆಯಲ್ಲಿ ಬಸವಣ್ಣನಿಂದ ಮಾಡಿಸುವ ಸಂಬೋಳಿ ನಾಗಿದೇವನ ಪ್ರಸಂಗದಲ್ಲಿ ಜರುಗುವ ಪವಾಡ ಅತ್ಯದ್ಭುತವಾದುದು. ಬಸವಣ್ಣನ ಜಾತ್ಯಾತೀತವಾದ ಮನೋಧರ್ಮದ ಪ್ರತೀಕವಾದ ಈ ಪ್ರಸಂಗ ಬಸವಣ್ಣ ಮತ್ತು ಹರಿಹರ ಇವರಿಬ್ಬರ ಕಾಲಾತೀತ ಧೋರಣೆಗಳ ಜಂಗಮ ತತ್ವವಾಗಿದೆ. ಆ ಕಾಲದ ಅಮಾನವೀಯವಾದ ಜಾತಿಯ ಅವಮಾನವನ್ನು ಈ ಪ್ರಸಂಗದಲ್ಲಿ ಬಸವಣ್ಣನ ಮೂಲಕ ಅತ್ಯಂತ ಶ್ರೇಷ್ಠವಾಗಿ ಖಂಡಿಸುತ್ತಾನೆ. ಬಸವಣ್ಣನು ಹೊಲೆಯನಾದ ಸಂಬೋಳಿ ನಾಗಿದೇವನ ಮನೆಯಲ್ಲಿ ಉಂಡು ತನ್ನ ಜಾತ್ಯಾತೀತವಾದ ನಿಲುವನ್ನು ವ್ಯಕ್ತಪಡಿಸುತ್ತಾನೆ. ಈತನ ಮನೆಯಲ್ಲಿ ಊಟ ಮಾಡಿದ್ದು ತನಗೆ ಪಾವಿತ್ರ್ಯವೆಂದು ಹೇಳಿಕೊಳ್ಳುತ್ತಾನೆ. ಬಿಜ್ಜಳನ ಸವಾಲಿನಂತೆ ನಾಗಿದೇವನ ಹೆಬ್ಬೆರಳಿನಿಂದ ಹಾಲಿನ ಹಾಲಾಹಲವನ್ನು ಸುರಿಸಿ ತನ್ನ ಪವಾಡವನ್ನು ತೋರಿಸುತ್ತಾನೆ. ವೈಷ್ಣವ ಭಕ್ತರ ವೈರತ್ವದ ಅಹಂಕಾರವನ್ನು ಮುರಿಯುತ್ತಾನೆ. ಇನ್ನೊಂದು ರೀತಿಯಲ್ಲಿ ಹರಿಹರ ವೀರಶೈವ ಧರ್ಮದ ಜಾತ್ಯಾತೀತ ನಿಲುವುಗಳನ್ನು ವೈಷ್ಣವ ಧರ್ಮದ ಅಜಾತ್ಯಾತೀತ ನಿಲುವುಗಳನ್ನು ಖಂಡಿಸಲು ಇಲ್ಲಿನ ಅನೇಕ ಪವಾಡಗಳನ್ನು ಚಿತ್ರಿಸಿದಂತೆ ಕಂಡು ಬರುತ್ತದೆ. ಕಳಿಂಗ ದೇಶದಿಂದ ಬಂದ ಮಹದೇವಸೆಟ್ಟಿಯ ದಾನಧರ್ಮ ಪ್ರಸಂಗದಲ್ಲಿ ಸಂಗಮೇಶ್ವರನೆ ಕುಬೇರನನ್ನು ಬರಮಾಡಿಕೊಂಡು ಬಸವಣ್ಣನ ದಾನದ ಅಕ್ಷಯ ಸ್ವರೂಪವನ್ನು ಮೆರೆಸುತ್ತಾನೆ. ಹೀಗೆ ಬಸವಣ್ಣ ನೂರಾರು ಪವಾಡಗಳಿಂದ ಪ್ರಜಾಸಮೂಹಕ್ಕೆ ಬೆರಗನ್ನು ಉಂಟು ಮಾಡಿ, ಜನಗಳ ಮನಸ್ಸಿನ ಜಗತ್ತಿನಲ್ಲಿ ದೈವತ್ವಕ್ಕೇರಿ ಪವಾಡ ಪುರುಷನಾಗುತ್ತಾನೆ.

ಕಾವ್ಯದ ಕೊನೆಯ ಭಾಗದಲ್ಲಿ ಸಂಗಮೇಶ್ವರನೆ ಮಾರುವೇಷದಲ್ಲಿ ಪರಮ ಭಕ್ತ ಬಸವಣ್ಣನನ್ನು ಪರೀಕ್ಷೆ ಮಾಡಿ ಲೋಕಕ್ಕೆ ತೋರಿಸುವ ಪ್ರಸಂಗ ಹರಿಹರನ

ಜಂಗಮ ನಿಷ್ಠೆಗೆ ಸಾಕ್ಷಿಯಾಗಿದೆ. ಬಸವಣ್ಣ ಎಂತಹ ತ್ಯಾಗಿ ಎಂದರೆ ಮಾರುವೇಷದ ಪರಶಿವ ಬಸವಣ್ಣನ ಮನೆಗೆ ಅತಿಥಿಯಾಗಿ ಬಂದು ಕೇಳುವ ಭಿಕ್ಷೆ ಸಾಮಾನ್ಯವಾದದ್ದಲ್ಲ. ''ಬಸವರಾಜಾ, ನಾವು ಹೆಂಗೂಸಿಲ್ಲದೆ ಇದ್ದುದಿಲ್ಲ' ಎಂದು ಹೇಳಿ ರಾತ್ರಿಯಲ್ಲಿ ಮಲಗಲು ಹೆಣ್ಣನ್ನು ಅಪೇಕ್ಷಿಸುತ್ತಾನೆ. ಬಸವಣ್ಣ ಪಟ್ಟಣವನ್ನೆಲ್ಲ ಹುಡುಕಿದರೂ ಸಿಕ್ಕದಿದ್ದಾಗ ತನ್ನ ಹೆಂಡತಿ ಮಾಯಿದೇವಿಯನ್ನು ಕಳುಹಿಸಿಕೊಡುತ್ತಾನೆ. ಬಸವಣ್ಣನ ಈ ತ್ಯಾಗ ಅಸಾಮಾನ್ಯವಾದದು. ಪರಶಿವ ಬಸವಣ್ಣನ ದೃಢಭಕ್ತಿಗೆ ಮೆಚ್ಚಿ ತನ್ನ ನಿಜಸ್ವರೂಪವನ್ನು ತೋರಿಸಿ, ತಾನೇ ಸೋತು ಶರಣಾಗುತ್ತಾನೆ. ಶಿವನು ''ಜಂಗಮಾಕಾರದೊಳ್ ನಿಂದು'' ಬಸವಣ್ಣನಿಗೆ ''ನೀನು ಈ ಲೋಕದಲ್ಲಿರುವುದು ಸಾಕು, ಪುಷ್ಪಕದಲ್ಲಿ ಕೈಲಾಸಕ್ಕೆ ಬಾ'' ಎಂದು ಕರೆದು ಬಸವಣ್ಣನ ದೃಢಭಕ್ತಿಯನ್ನು ಲೋಕಕ್ಕೆ ಸಾರುತ್ತಾನೆ. ಹೀಗೆ ಹರಿಹರ ಬಸವಣ್ಣನ ವ್ಯಕ್ತಿತ್ವದ ಮಹಿಮಾ ಜಗತ್ತಿನಲ್ಲಿ ಬಸವಣ್ಣನನ್ನು, ತನ್ನನ್ನು ಬಳಸಿಕೊಂಡು ಯುಗಧರ್ಮದ ಕ್ರಾಂತಿಕಾರಿ ಕವಿಯಾಗಿದ್ದಾನೆ. ಸಂಶೋಧಕರಾದ ಎಚ್. ದೇವೀರಪ್ಪನವರು ಅಭಿಪ್ರಾಯ ಪಡುವಂತೆ ''ಹರಿಹರನು ಚಿತ್ರಿಸಿರುವ ಬಸವಣ್ಣನು ಮಹಾಕಾರಣಿಕ, ವಿಚಾರವಾದಿ, ಭಕ್ತಪ್ರೇಮಿ, ಜಂಗಮ ಪ್ರಾಣಿ, ಪವಾಡ ಪುರುಷ, ಸಮರ್ಪಣಾಭಾವ ಆತನ ಬಾಳ ಉಸಿರು, ಮಾನವತಾವಾದ ಭೂತದಯೆಗಳು ಅವನೆರಡು ಕಣ್ಣುಗಳು, ಸದ್ವಿನಯ, ಸತ್ಯಸಂಧತೆ, ದಾನಾದಿ ಸದ್ಗುಣಗಳ ನಿಧಿಯಾತ. ಅವನು ಮೆರೆಯಲಿಲ್ಲ. ಅವನ ಕೀರ್ತಿಯೂ ಅವನ ವಚನಗಳೂ ದೇಶ ದೇಶಗಳಲ್ಲಿ ಮೆರೆದವು'' ಎನ್ನುವ ಮಾತುಗಳು ಅರ್ಥಪೂರ್ಣವಾದುದು.

## ಉದ್ಯೋಗ ಪರ್ವ ಸಂಗ್ರಹ (ತ.ಸು. ಶಾಮರಾವ್)

ಕನ್ನಡ ಮಹಾಭಾರತದ ಕರ್ತೃ ಕುಮಾರವ್ಯಾಸ ನಡುಗನ್ನಡದ ಮಹಾಕವಿ. ಕಾಲದ ದೃಷ್ಟಿ ಮತ್ತು ಭಾಷೆಯ ಕಾರಣಕ್ಕೆ ಮಾತ್ರ ಮಧ್ಯಕಾಲೀನನಾದರೂ ಇಡೀ ಪ್ರಪಂಚಕ್ಕೆ ಅದ್ಭುತವೆನ್ನಬಹುದಾದ ವ್ಯಾಸಭಾರತವನ್ನು ಆದರಿಸಿ 'ಗದುಗಿನ ಭಾರತ' ಅಥವಾ 'ಕರ್ನಾಟಕ ಭಾರತ ಕಥಾಮಂಜರಿ' ಎನ್ನುವ ಕಾವ್ಯವನ್ನು ಷಟ್ಪದಿಯಲ್ಲಿ ರಚಿಸಿ ಜನಪ್ರಿಯತೆಯನ್ನು ಗಳಿಸಿದ ಯಶಸ್ವಿ ಕವಿ. ಆದ್ದರಿಂದಲೇ ಈತನ ಕಾವ್ಯಕ್ಕೆ ಕುಮಾರವ್ಯಾಸ ಭಾರತ ಎಂದು ಹೆಸರು ಬಂದಿರುವುದು. 'ಕುಮಾರವ್ಯಾಸ' ಎಂಬ ಹೆಸರು ಕಾವ್ಯನಾಮವಾಗಿದ್ದು ಮೂಲ ಹೆಸರು ನಾರಣಪ್ಪ ಎಂದು ನಾರಣಪ್ಪನ ಕಾಲವನ್ನು ಕ್ರಿ.ಶ. 1230 ರಿಂದ 35 ರ ನಡುವೆ ಎಂಬುದಾಗಿ ಗುರುತಿಸಲಾಗಿದೆ. ಈ ಮಹಾಕವಿಯನ್ನು ವೀರಶೈವನೆಂದು, ಬ್ರಾಹ್ಮಣನೆಂದು, ಬ್ರಾಹ್ಮಣರಲ್ಲಿ ಸ್ಮಾರ್ತನೆಂದು, ವೈಷ್ಣವನೆಂದು, ಭಾಗವತ ಪಂಥದವನೆಂದು ಎಂದೆಲ್ಲ ಅವರವರ ಆಸಕ್ತಿಗನುಗುಣವಾಗಿ ವಾದ ಮಾಡಿರುವುದುಂಟು. ಆದರೆ ಮಹಾಕವಿಯಾದವನು

ಎಲ್ಲ ಧರ್ಮಗಳ ಸಾರವನ್ನು ಹೀರಿ ಅನನ್ಯವಾದ ಸಮನ್ವಯತ್ವವನ್ನು ಸಾಧಿಸಿರುತ್ತಾನೆಂಬುದು ಕುಮಾರವ್ಯಾಸನಿಂದ ವೇದ್ಯವಾಗುತ್ತದೆ.

ನಾರಣಪ್ಪನ ಹುಟ್ಟೂರು ಕೋಳಿವಾಡ. ಇದು ಅವರ ವಂಶದವರಿಗೆ ಉಂಬಳಿಯಾಗಿ ದೊರೆತಿದ್ದಿತು. ಗದುಗಿನ ವೀರನಾರಾಯಣಸ್ವಾಮಿಯ ಅಂಕಿತದಲ್ಲಿ ಕಾವ್ಯರಚಿಸಿದಾದ 'ವೀರನಾರಾಯಣನೆ ಕವಿ ಲಿಪಿಕಾರ ಕುವರವ್ಯಾಸ' ಎಂಬುದಾಗಿ ಅಭಿಮಾನದಿಂದ ಹೇಳಿಕೊಂಡಿದ್ದಾನೆ. ಸಂಸ್ಕೃತ ಭಾರತದ ಮೊದಲ ಹತ್ತು ಪರ್ವಗಳ ಕಥೆಯನ್ನು ಮಾತ್ರ ಕನ್ನಡದಲ್ಲಿ ಪುನರ್‌ರಚಿಸಿದ್ದಾನೆ. ಅಷ್ಟಕ್ಕೆ ಸುಮಾರು ಎಂಟು ಸಾವಿರಕ್ಕೂ ಹೆಚ್ಚಿನ ಪದ್ಯಗಳಾಗಿ ಬೆಳೆದಿದೆ. ಭಾರತ ಕಥೆಯನ್ನು ನಾರಣಪ್ಪ ಉದ್ದೇಶಪೂರ್ವಕವಾಗಿಯೇ ಆಯ್ಕೆ ಮಾಡಿಕೊಂಡಿದ್ದು ಕೃಷ್ಣ ಕಥೆಯನ್ನು ತಿಳಿಯಹೇಳುವೆನೆಂದು ಸ್ಪಷ್ಟೀಕರಣ ನೀಡುತ್ತಾ ಪಂಚಮವೇದವೆಂಬುದಾಗಿ ಪರಿಗಣಿತವಾದ ಭಾರತವನ್ನು ಕಾವ್ಯವಾಗಿ ಕಟ್ಟಿದ್ದರೂ ಅದರ ನರನಾಡಿಗಳಲ್ಲೆಲ್ಲ ಧರ್ಮರಸ ಹರಿದಿದೆ. ಆದರೂ ಅದು ಧಾರ್ಮಿಕ ಗ್ರಂಥವಲ್ಲ. ಬೃಹತ್ ಕಾವ್ಯವಾಗಿ ಎಲ್ಲ ಕಾಲಕ್ಕೂ ಪ್ರಸ್ತುತವಾಗುತ್ತದೆ. ಭಾರತ ಕಥೆಯನ್ನು ನಾರಣಪ್ಪನಿಗೂ ಪೂರ್ವದಲ್ಲಿ ಪಂಪ ಕನ್ನಡದಲ್ಲಿ ರಚಿಸಿದ್ದರೂ ಪಂಪನ ದೃಷ್ಟಿಯೇ ಬೇರೆ. ತನ್ನ ಮೆಚ್ಚಿನ ದೊರೆಯನ್ನು ಕಾವ್ಯದಲ್ಲಿ ತಂದು ಹಲವಾರು ಬದಲಾವಣೆಗಳೊಂದಿಗೆ ಪಂಡಿತಮಾನ್ಯಗೊಳಿಸಿದರೆ, ನಾರಣಪ್ಪನ ದೃಷ್ಟಿ ಜನಸಾಮಾನ್ಯರ ಉದ್ಧಾರ, ಮನರಂಜನೆಗಳಿಗಾಗಿ ಜನಭಾಷೆಯ ಛಂದಃ ಪ್ರಕಾರದಲ್ಲಿ ಶ್ರೋತೃಗಳಿಗಾಗಿ ಕಟ್ಟಿದ ಕಾವ್ಯವಾದ್ದರಿಂದ ಪಂಪನಷ್ಟು ಅಚ್ಚುಕಟ್ಟುತನ ಇಲ್ಲದಿದ್ದರೂ ಅಪಾರ ಜನಪ್ರಿಯತೆಯನ್ನು ಸಾಧಿಸಿದ ಕೃತಿ ಕುಮಾರವ್ಯಾಸ ಭಾರತ.

ಉದ್ಯೋಗ ಪರ್ವದ ಕಥೆ ಪ್ರಾರಂಭವಾಗುವುದು ವಿರಾಟನಗರದಲ್ಲಿ. ಪಾಂಡವರು ಉತ್ತರ ಗೋಗ್ರಹಣದಲ್ಲಿ ವಿಜಯ ಸಾಧಿಸಿದ ನಂತರ. ಮಹಾಭಾರತ ಕಥೆಯಲ್ಲಿ ಉದ್ಯೋಗ ಪರ್ವವೇ ಅತಿಮುಖ್ಯವಾದ ತಿರುವು. ಕುರುಕ್ಷೇತ್ರ ಯುದ್ಧಕ್ಕೆ ಸನ್ನದ್ಧವಾಗುವ ಪ್ರಕ್ರಿಯೆಗಳೆಲ್ಲ ಘಟಿಸುವುದೇ ಈ ಪರ್ವದಲ್ಲಿ. ಆದ್ದರಿಂದ ಇದು ಯುದ್ಧೋದ್ಯೋಗಕ್ಕೆ ತಯಾರಿಗೊಳಿಸುವ ಅಥವಾ ಶಕ್ತಿ ಸಂಚಯನಗೊಳಿಸಿಕೊಳ್ಳುವ ಕ್ರಿಯೆ ಇಲ್ಲಿ ಪ್ರಧಾನವಾಗಿದೆ. ಯುದ್ಧಸಿದ್ಧತೆಯನ್ನು ಮಾಡುತ್ತಲೇ ಯುದ್ಧ ತಡೆಯುವ ಅಥವಾ ಶಾಂತಿಯ ಮಾತುಗಳನ್ನಾಡುವ ಉಪಚಾರದ ನಾಟಕವೂ ಇದಾಗಿದೆ. ಅಂತಿಮವಾಗಿ ಯುದ್ಧಕ್ಕೆ ಬದ್ಧವಾಗುವ ನೆಲೆಗಳನ್ನು ಗಟ್ಟಿಗೊಳಿಸುವ ಅಥವಾ ದೈವನಿಯಾಮಕ ಸತ್ವವನ್ನು ಮೀರಲಾಗದ ಸ್ಥಿತಿಯನ್ನು ತಂದೊಡ್ಡುತ್ತದೆ ಉದ್ಯೋಗ ಪರ್ವ. ವಿರಾಟನಗರದಲ್ಲಿ ನೆರೆದಿದ್ದ ಅರಸರ ಮಧ್ಯೆ ಪಾಂಡವರು ಪಡಬಾರದ ಕಷ್ಟಗಳನ್ನು ಅನುಭವಿಸಿದ್ದಾರೆ. ಕಪಟದ್ಯೂತದಿಂದಾಗಿ ಇವರಿಗೆ ಪುನಃ ರಾಜ್ಯವನ್ನು ಗಳಿಸಿಕೊಡುವುದು ಹೇಗೆ ? ಎನ್ನುವ ಪ್ರಶ್ನೆಯನ್ನೆತ್ತಿದ

ಶ್ರೀಕೃಷ್ಣ ಉತ್ತರವನ್ನೂ ಹೇಳುತ್ತಾನೆ. ಸಕಲ ಸಿದ್ಧತೆಗಳನ್ನು ಸಿದ್ಧಗೊಳಿಸಿ ಯುದ್ಧಕ್ಕಾಗಿ ಎಲ್ಲ ರಾಜರ ಬೆಂಬಲಗಳನ್ನು ಗಳಿಸಬೇಕೆಂಬುದಾಗಿ ಮತ್ತೊಂದು ಕಡೆ ಕುರುರಾಜನಲ್ಲಿಗೆ ಕೌತ್ಯ ಕಾರ್ಯಕ್ಕಾಗಿ ಯೋಗ್ಯರನ್ನು ಕಳುಹಿಸಬೇಕೆಂದು, ಸಕಲರ ಸಮ್ಮತಿಯೊಂದಿಗೆ ಪಾಂಡವರ ರಕ್ಷಣೆಯ ಭರವಸೆಯಿತ್ತು ದ್ವಾರಕೆಗೆ ಹೊರಡುತ್ತಾನೆ ಕೃಷ್ಣ.

ಇಲ್ಲಿಂದ ಮುಂದೆ ಕೌರವ-ಪಾಂಡವರು ಯುದ್ಧ ಸಿದ್ಧತೆಗಳನ್ನು ನಡೆಸುವ ಕೆಲಸದಲ್ಲಿ ಮಗ್ನರಾಗುತ್ತಾರೆ. ದುರ್ಯೋಧನ-ಅರ್ಜುನರಿಬ್ಬರು ಕೃಷ್ಣನ ಸಹಾಯ ಕೋರಿ ದ್ವಾರಾವತಿಗೆ ಹೋಗುತ್ತಾರೆ. ಅರ್ಜುನನಿಗೆ ಕೃಷ್ಣನ ಅಭಯವಿದ್ದರೆ ದುರ್ಯೋಧನನಿಗೆ ಸಮಸ್ತ ಸೈನ್ಯದ ಬೆಂಬಲ ಸಿಕ್ಕುತ್ತದೆ. ಉದ್ಯೋಗ ಪರ್ವದ ಕೃಷ್ಣನ ವ್ಯಕ್ತಿತ್ವ ಪರಿಶೀಲನೆ ನಡೆಯುತ್ತದೆ. ಕೃಷ್ಣನು ಪಾಂಡವರಿಗೆ ನೀವು ದೇವರೆಂದೆ ಬಗೆಯುವಿರಿ ನನ್ನಲಿ ದೇವತನವೇನೂ ಇಲ್ಲ ಎಂದರೂ ಅರ್ಜುನನು ಬರಿಯ ದೇವರಲ್ಲ, ದೇವರ ದೇವರೊಡೆಯ ಎಂಬ ದೃಷ್ಟಿ, ನಂಬಿಕೆ, ಆತ್ಮವಿಶ್ವಾಸಗಳಿಂದ ಪಾಂಡವರ ರಕ್ಷಣೆಯ ಹೊಣೆಗಾರಿಕೆಯನ್ನು ಕೃಷ್ಣನೇ ಹೊತ್ತುಕೊಳ್ಳುತ್ತಾನೆ.

ಯುದ್ಧ ಸಿದ್ಧತೆಯ ನಡುವೆಯೂ ಸಂಜಯನ ಮೂಲಕ ಸಂಧಿಕಾರ್ಯ ವಿಫಲವಾಗುತ್ತದೆ. ಇಲ್ಲಿ ಕೌರವನ ಸ್ಪಷ್ಟ ನಿರ್ಧಾರ ''ಸಂಗರದಲ್ಲಿ ಅಸಿಧಾರೆಯಲ್ಲಿ ರಾಜ್ಯವನ್ನು ಕೊಡಬೇಕೆ ಹೊರತು ಹಾಗೆಯೇ ಕೊಟ್ಟರೆ ಅಧರ್ಮವಾದೀತು'' ಎನ್ನುವ ಮಾತುಗಳು ಸಂಗ್ರಾಮವನ್ನೇ ಬಯಸುವಂಥದ್ದು ಮತ್ತು ರಾಜ್ಯ ನೀಡಿಕೆಯ ನಿರಾಕರಣೆ ಮಾಡಿದಾಗ ಪಾಂಡವರು ಕೃಷ್ಣನ ಮೊರೆಹೋಗುತ್ತಾರೆ. ಸ್ವತಃ ಕೃಷ್ಣನೇ ಸಂಧಿಗಾಗಿ ಕೌರವನ ಬಳಿ ಹೋಗುವ ನಿಶ್ಚಯಕ್ಕೆ ಬರುವ ಮೊದಲು ಸಹದೇವನನ್ನು ಉಳಿದು ಮಿಕ್ಕ ಪಾಂಡವರೆಲ್ಲ ಸಂಧಿಗೆ ಸಹಮತ ವ್ಯಕ್ತಪಡಿಸಿದಾಗ ದ್ರೌಪದಿ ಕಿಡಿಕಿಡಿಯಾಗಿ ಭೀಮನನ್ನು ಹೀಯಾಳಿಸಿ ಭೀಮನ ಪೌರಷ ಮತ್ತು ಪರಾಕ್ರಮಗಳನ್ನು ಜಾಗೃತಗೊಳಿಸಿದ ಮೇಲೆ ಭೀಮ ಅಣ್ಣನ ಗಡಿಯನ್ನು ದಾಟಿ ಪ್ರತಿಜ್ಞಾಮುಖವಾಗಿ ಮುಂದುವರಿಯುತ್ತಾನೆ. ನನಗೆ ಕೌರವನ ಎರಡು ಊರು (ತೊಡೆ)ಗಳೇ ಸಾಕು ಎಂದು ಸಮರಕ್ಕೆ ಮುಂದಾದಾಗ ಪಾಂಡವರಲ್ಲೆ ಒಮ್ಮತಾಭಿಪ್ರಾಯ ಮೂಡದಾಗ ಧರ್ಮರಾಯ ಕೃಷ್ಣನಿಗೆ ವಹಿಸುತ್ತಾನೆ. ''ಏನು ಮಾಡಬೇಕೆಂಬುದು ನಿನಗೇ ಗೊತ್ತು. ನಮ್ಮ ಅಭ್ಯುದಯ ನಿನ್ನ ಅಧೀನ'' ಎಂದು ನಿರ್ಧಾರವನ್ನು ಕೃಷ್ಣನಿಗೆ ವಹಿಸಿದಾಗ ಕೃಷ್ಣ ಕೌರವನ ಬಳಿ ರಾಯಭಾರಿಯಾಗಿ ಹೊರಡುತ್ತಾನೆ.

ಹಸ್ತಿನಾವತಿಯಲ್ಲಿ ಕೃಷ್ಣನ ಬರವಿಗಾಗಿ ಸಕಲ ಸಿದ್ಧತೆಗಳೊಂದಿಗೆ ಕಾಯುತ್ತಿದ್ದ ದುರ್ಯೋಧನಾದಿ ಶ್ರೇಷ್ಠರ ಮನೆಯನ್ನು ಬಿಟ್ಟು ವಿಧುರನ ಆತಿಥ್ಯ ಸ್ವೀಕರಿಸಿದ ಕೃಷ್ಣ ಕೌರವನ ಕೋಪಾಗ್ನಿಯನ್ನು ಅಧಿಕಗೊಳಿಸಿ ವೈರತ್ವ ಸಾಧನೆಗೆ ತೊಡಗುತ್ತಾನೆ. ಕೃಷ್ಣ ತನ್ನ ಮಹಿಮೆಯಿಂದ ಸೆಟೆದು ಕುಳಿತಿದ್ದ ಕೌರವನನ್ನು ತನ್ನ ಕಾಲಿಗೆ ಬೀಳಿಸಿಕೊಂಡಾಗ

ಅಪಮಾನಿತನಾದ ಕೌರವ ಕೃಷ್ಣನನ್ನು ಬಂಧಿಸುವ ವಿಫಲ ಪ್ರಯತ್ನ ನಡೆಸುತ್ತಾನೆ. ಕೊನೆಗೆ ವಿಶ್ವರೂಪದರ್ಶನದಿಂದ ಸಮಸ್ತ ಸಭೆ ಕೃಷ್ಣನ ಅಂಘ್ರಿಗಳಿಗೆರಗಿದರೂ ಕೌರವ ಕೃಷ್ಣನ ಶಕ್ತಿ ಅರಿತೂ ಅವನೇ ನನ್ನಲ್ಲಿ ನಿಂದು ಸಂಧಿಯನ್ನು ಮುರಿದ ಶೀಘ್ರ ಮೋಕ್ಷಕ್ಕಾಗಿ ಯುದ್ಧವೇ ನನ್ನ ನಿದರ್ಶವೆಂಬುದಾಗಿ ನನ್ನ ಸಾಮರ್ಥ್ಯವನ್ನೆಲ್ಲ ತೊಡಗಿಸಿ ಯುದ್ಧ ಮಾಡುತ್ತೇನೆ. ಜಯಾಪಜಯಗಳು ಅಂತಿಮವಾಗಿ ಕೃಷ್ಣನದೇ ಎನ್ನುವ ನಿಲುವನ್ನು ತಳೆದು ಯುದ್ಧೋನ್ಮುಖನಾಗುತ್ತಾನೆ. ಹೀಗೆ ಸಂಧಿ ಮುರಿದು ಕರ್ಣನೊಡನೆ ಸಖ್ಯ ತೋರಿ ಏಕಾಂಗಿಯಾಗಿ ಸಮೀಪ ಕೂರಿಸಿಕೊಂಡು ಕರ್ಣನ ಜನ್ಮರಹಸ್ಯವನ್ನು ತಿಳಿಸಿ ಪಾಂಡವರಿಗೆ ಸಹಾಯಕನಾಗುವಂತೆ ಆಹ್ವಾನಿಸಿ ವಿಫಲನಾಗಿ ಕರ್ಣನಿಂದ ಬೀಳ್ಕೊಡುತ್ತಾನೆ. ಮಾರನೆಯ ದಿನ ಕುಂತಿ ಕರ್ಣನನ್ನು ಸಂಧಿಸಿ ಕರ್ಣನನ್ನು ಸೆಳೆಯುವಲ್ಲಿ ಸೋಲುತ್ತಾಳೆ. ಕರ್ಣ ತನ್ನ ಸ್ವಾಮಿಯ ಅಭ್ಯುದಯವನ್ನೇ ಆಯ್ಕೆ ಮಾಡಿಕೊಂಡಾಗ ಕೊನೆಗೆ ಕುಂತಿ 'ನಿನ್ನ ಐವರು ತಮ್ಮಂದಿರನ್ನು ತಲೆಗಾಯಿ, ತೊಟ್ಟ ಬಾಣವನ್ನು ತೊಡಬೇಡ ಎಂಬುದಾಗಿ ಕರ್ಣನಿಂದ ವಚನವನ್ನು ಪಡೆಯುತ್ತಾಳೆ. ಅಲ್ಲಿಂದ ಮುಂದೆ ಎರಡೂ ಪಾಳಯದ ಯೋಧರು ಕುರುಕ್ಷೇತ್ರದಲ್ಲಿ ಅಪಾರ ಸೈನ್ಯದೊಂದಿಗೆ ಮುಖಾಮುಖಿಯಾಗುತ್ತಾರೆ. ಇದಿಷ್ಟು ಉದ್ಯೋಗ ಪರ್ವದ ಕಥಾಸಾರಾಂಶ. ಇಲ್ಲಿ ಯುದ್ಧಕ್ಕಾಗಿ ಶಕ್ತಿ ಸಂಚಯನ ಪ್ರಕ್ರಿಯೆಯಲ್ಲಿ ತೊಡಗಿದ ಎರಡೂ ತಂಡಗಳಲ್ಲಿನ ಸೂಕ್ಷ್ಮಗಳನ್ನು ಗಮನಿಸಿದರೆ ಪಾಂಡವರ ಪಕ್ಷಕ್ಕೆ ಭೌತಿಕ ಶಕ್ತಿಗಿಂತಲೂ ಹೆಚ್ಚಾಗಿ ಆತ್ಮಶಕ್ತಿ ಮತ್ತು ದೈವಶಕ್ತಿಯ ಬೆಂಬಲವು ಅಭಯವನ್ನಿತ್ತರೆ ಕೌರವನ ಪಾಳಯದಲ್ಲಿ ಈ ಮೊದಲು ಇದ್ದ ಶಕ್ತಿಗೂ ಮೀರಿದ ಸೈನ್ಯ ತೋರಿಕೆಗಾಗಿ ತನ್ನ ಪಾಳಯದಲ್ಲಿದ್ದರೂ ಅಂತರಂಗದಲ್ಲಿ ದುರ್ಬಲಗೊಂಡಿರುವುದನ್ನು ಗುರುತಿಸಬಹುದು. ಮಹತ್ವದ ಯೋಧರೆಲ್ಲರೂ ಪಾಂಡವರಲ್ಲಿ ಮನಸ್ಸು ಕೊಟ್ಟು ಅನ್ನದ ಋಣಭಾರದಿಂದಾಗಿ, ಸ್ವಾಮಿ ದ್ರೋಹ ಬಗೆಯಲಾರದೆ ಸಣ್ಣ-ಪುಟ್ಟ ಕಾರಣಗಳಿಗಾಗಿ ಶಸ್ತ್ರಾಸ್ತ್ರ ತ್ಯಜಿಸಿ ಕೌರವನ ಶಕ್ತಿ ಕುಂದಿಸಿದವರೇ ಹೆಚ್ಚು. ಉದಾ. ವಿಧುರನ ಮನೆಯ ಆತಿಥ್ಯ ಸ್ವೀಕರಿಸಿದ್ದಕ್ಕಾಗಿ ಕೃಷ್ಣನನ್ನು ಹೀಯಾಳಿಸಿ ವಿಧುರನನ್ನು ನಿಂದಿಸಿದ ಕಾರಣದಿಂದ ವಿಧುರನು ಭೀಮ ಕೌರವನ ತೊಡೆ ಮುರಿಯುವಾಗ ಬಳಸಬೇಕೆಂದಿದ್ದ ತನ್ನ ಬಿಲ್ಲನ್ನು ಮುರಿದು ಹಾಕುತ್ತಾನೆ. ತನ್ನ ಗೆಳೆಯನ ಜಯವನ್ನೇ ನಿರೀಕ್ಷಿಸುತ್ತಿದ್ದ ಕರ್ಣ ಪಾಂಡವರ ಸಂಹಾರದ ಏಕೈಕ ಉದ್ದೇಶದಲ್ಲಿದ್ದವನು ಕೃಷ್ಣನ ವಿಭೇದ ನೀತಿಗೆ ಬಲಿಬೀಳುತ್ತಾನೆ. ತಾಯಿಗೆ ಪಾಂಡವರನ್ನುಳಿಸುವಂತೆ ವಚನ ಕೊಟ್ಟು ಶಕ್ತಿಗುಂದುತ್ತಾನೆ. ಹಿರಿಯ ಚೇತನಗಳಾದ ಭೀಷ್ಮ, ದ್ರೋಣ, ಕೃಪ ಇವರೆಲ್ಲರ ಮನಸ್ಸೂ ಪಾಂಡವರ ಒಳಿತನ್ನು ಬಯಸಿತ್ತು. ಸಾಕ್ಷಾತ್ ದೈವ ಮಾನವ ಕೃಷ್ಣನೇ ಪಾಂಡವರು ನನ್ನ ಪಕ್ಷದವರೆಂದು ಘೋಷಿಸಿ ಅವರಿಗೆ ಅಭಯವನ್ನೀಯುವ ಪ್ರಸಂಗ. ಹೀಗೆ ಪಾಂಡವರ ಕಡೆಗೆ ಅಭೌತಿಕ ಶಕ್ತಿ ಹೆಚ್ಚಳವಾಗಿ ಕೌರವನ ಕಡೆಯಲ್ಲಿದ್ದ

ಶಕ್ತಿ ದುರ್ಬಲಗೊಳ್ಳುವ ಕಾರಣ ಮುಂದಿನ ಜಯ ಯಾರಿಗೆ ಲಭ್ಯವಾಗುವುದೆಂಬ ಸತ್ಯ ಉದ್ಯೋಗ ಪರ್ವದಲ್ಲಿಯೇ ನಿರ್ಧಾರವಾಗುವಂಥದ್ದು. ಆದ್ದರಿಂದ ಉದ್ಯೋಗ ಪರ್ವ ಭಾರತ ಕಥೆಗೆ ಒಂದು ತಿರುವನ್ನು ಒದಗಿಸಿಕೊಡುತ್ತದೆ.

ಉದ್ಯೋಗ ಪರ್ವದಲ್ಲಿ ಪ್ರಧಾನವಾಗಿ ವೀರ ರಸವತ್ತಾಗಿ ಮೂಡಿ ಬರುತ್ತದೆಯಾದರೂ ಕೃಷ್ಣನ ವಿಶ್ವರೂಪದರ್ಶನದ ಸಂದರ್ಭದಲ್ಲಿ ಅದ್ಭುತ, ಕರ್ಣ ಭೇದ ಸಂದರ್ಭದಲ್ಲಿ ಕರುಣ, ಕೃಷ್ಣ ಸಾಕ್ಷಾತ್ಕಾರ ಪ್ರಸಂಗಗಳಲ್ಲಿ ಭಕ್ತಿ ರಸಗಳು ಓತಪ್ರೋತವಾಗಿ ಹರಿದು ಬರುತ್ತವೆ. ಕಾವ್ಯ ಶಿಲ್ಪದಲ್ಲಿ ರೂಪಕಗಳನ್ನೇ ಎಣೆದಿರುವ ಕವಿ ನಾರಣಪ್ಪನ ಉಕ್ತ ವೈಚಿತ್ರ್ಯ, ಮಾತಿನ ಗಾರುಡಿತನ ವರ್ಣನಾತ್ಮಕ ಸೊಬಗು ಉದ್ಯೋಗ ಪರ್ವದಲ್ಲಿ ಮಡುಗಟ್ಟಿ ನಿಂತಿದೆ. ಉದಾ. ದ್ರೌಪದಿ ಪಲ್ಲಕ್ಕಿಯನ್ನಿಳಿದುದು, ಮಿಂಚಿನ ಗವಿಸಹಿತ ಮರಿಮೇಘ ಆವಿರ್ಭವಿಸಿದಂತಾಯಿತು! ಎಂಬುದಾಗಲಿ ಕೃಷ್ಣನು ಕೌರವನ ಸಭೆಗೆ ಬಂದು ಮೈಮುರಿದು ನಿಂತೊಡನೆ 'ಮಿಂಚಿನ ಹೊದರು ಹುರಿಗೊಂಡತಾಯಿತು' ಎಂಬ ಒಂದೆರಡು ಸಂದರ್ಭಗಳನ್ನು ಹೆಸರಿಸಿದರಷ್ಟೇ ಸಾಕಾಗಬಹುದೆಂದು ತೋರುತ್ತದೆ.

**ಭರತೇಶ ವೈಭವ ಸಂಗ್ರಹ (ತ.ಸು. ಶಾಮರಾವ್)**

ಭರತ ಚಕ್ರವರ್ತಿಯ ಚರಿತೆಯೆ ಭರತೇಶ ವೈಭವದ ಕಥಾವಸ್ತು. ಜೈನ ಧಾರ್ಮಿಕ ಸಾಹಿತ್ಯದಲ್ಲಿನ ಪ್ರಾಚೀನ ಕಥನ. ಜಿನಸೇನಾಚಾರ್ಯರ ಮಹಾಪುರಾಣದಲ್ಲಿ ಮೊದಲ ಬಾರಿಗೆ ಭರತ ಚಕ್ರವರ್ತಿಯ ಕಥೆ ಪ್ರಸ್ತಾಪವಾಗಿದೆ. ಆದಿತೀರ್ಥಂಕರ ಪುರುಪರಮೇಶ್ವರನ ಚರಿತೆಯ ಕೊನೆಯಲ್ಲಿನ ಕಥೆ. ತ್ರಿಷಷ್ಟಿ ಶಲಾಕಾಗ್ರ ಪುರುಷರಲ್ಲಿ ಒಬ್ಬನೂ, ಪುರುಪರಮೇಶ್ವರನ ಮಗನೂ, ಚಕ್ರವರ್ತಿಗಳಲ್ಲಿ ಮೊದಲಿಗನೂ ಆದ ಭರತನ ಕಥೆ ಕನ್ನಡದ ಆದಿಪುರಾಣ ದಲ್ಲಿಯೂ, ಚಾವುಂಡರಾಯ ಪುರಾಣದಲ್ಲೂ ಮೂಡಿಬಂದಿದೆ. ಹಿಂದಿನ ಕಾವ್ಯಗಳಲ್ಲಿ ಜಿನನಾಥನ ಕಥೆಯೊಂದಿಗೆ ಮೂಡಿಬಂದಿರುವ ಭರತನ ಕಥೆ ರತ್ನಾಕರನಲ್ಲಿ ಚಕ್ರವರ್ತಿಯ ಚರಿತೆಯಾಗಿ ಕಾವ್ಯನಾಯಕನ ಸ್ಥಾನಕ್ಕೇರಿದ್ದಾನೆ. ಇಂಥ ಕಥೆಯನ್ನು ವಸ್ತುವನ್ನಾಗಿರಿಸಿಕೊಂಡ ರತ್ನಾಕರ ಎಂಬತ್ತು ಸಂಧಿಗಳಲ್ಲಿ ಸುಮಾರು ಹತ್ತು ಸಾವಿರ ಸಾಂಗತ್ಯ ಪದ್ಯಗಳಲ್ಲಿ ಭರತೇಶನ ನಿಡುಗತೆಯನ್ನು ಬಣ್ಣಿಸಿದ್ದಾನೆ.

ಭೋಗವಿಜಯ, ದಿಗ್ವಿಜಯ, ಯೋಗವಿಜಯ, ಮೋಕ್ಷವಿಜಯ, ಅರ್ಕಕೀರ್ತಿವಿಜಯವೆಂಬುದಾಗಿ ಐದು ವಿಭಾಗಗಳನ್ನಾಗಿ ಕಾವ್ಯವನ್ನು ತನ್ನ ಉದ್ದೇಶ ಸಾಧನೆಗಾಗಿ ವಿಭಜಿಸಿ ರಚಿಸಿರುವ ಕಾವ್ಯ ಭರತೇಶ ವೈಭವ. ಜಿನಸೇನರ ಮಹಾಪುರಾಣವನ್ನು ಅನುಸರಿಸಿರುವ ಕಾರಣದಿಂದಾಗಿ ಧಾರ್ಮಿಕ ಕಾವ್ಯದ ಧೋರಣೆಯನ್ನು ಮುಂದುವರಿಸಿಯೂ ಕವಿ ಕೆಲವಾರು ಕಡೆ ತನ್ನ ಪ್ರತಿಭಾ

ಸ್ವಾತಂತ್ರ್ಯವನ್ನು ಮೆರೆದಿದ್ದಾನೆ. ವಸ್ತುಕ ಕಾವ್ಯಕ್ಕಿಂತಲೂ ವರ್ಣಕ ಕಾವ್ಯದ ಕಡೆಗೆ ತನ್ನ ಒಲವನ್ನು ವ್ಯಕ್ತಪಡಿಸಿರುವ ರತ್ನಾಕರ ರಾಜವರ್ಣನೆಯಿಂದಲೇ ದೇಸಿ ಛಂದಸ್ಸಿನ ಬಂಧದಲ್ಲಿ ಕಾವ್ಯವನ್ನು ಆರಂಭಿಸಿದ್ದಾನೆ. ತೀರ್ಥಂಕರರ ಚರಿತೆಗಿಂತಲೂ ಚಕ್ರವರ್ತಿಯ ಚರಿತೆ ಹೆಚ್ಚು ಆಕರ್ಷಕ ಮತ್ತು ಅಷ್ಟೇ ಪವಿತ್ರವೆಂಬುದಾಗಿ ರತ್ನಾಕರ ಬಣ್ಣಿಸಿದ್ದಾನೆ. ತೀರ್ಥಂಕರನಿಗಿಂತ ಯಾವುದೇ ದೃಷ್ಟಿಯಿಂದಲೂ ಚಕ್ರವರ್ತಿ ಕಡಿಮೆಯಲ್ಲ. ಆತನೂ ಜಿನನೇ ಆಗಿರುವುದನ್ನು ವ್ಯಕ್ತಪಡಿಸಲೊಸುಗ ಕಾವ್ಯ ರಚನೆಗೆ ತೊಡಗಿದ್ದಾನೆ.

ಪಂಚ ಕಲ್ಯಾಣ ತತ್ವದನ್ವಯ ತನ್ನ ಕಾವ್ಯವನ್ನು ಐದು ವಿಭಾಗಗಳಾಗಿ ವಿಂಗಡಿಸಿ ಅದರಲ್ಲಿ ಭೋಗವಿಜಯವೇ ಮೊದಲನೆಯದು. ಭೋಗವಿವರಣೆಗಾಗಿ ಕವಿ ಕಥಾನಾಯಕನ ಬೆಳವಣಿಗೆಗಳನ್ನು ಸಾದ್ಯಂತವಾಗಿ ನಿರೂಪಿಸುವ ತಾಳ್ಮೆ ರತ್ನಾಕರನಿಗಿಲ್ಲ. ಅರಸನಾಗಿ ಒಡ್ಡೋಲಗವನ್ನು ನಡೆಸುವ ಮೂಲಕವೇ ಕಾವ್ಯದಾರಂಭ. ರಾಜವೈಭವದ ನಡುವೆ ಭೋಗಸಾಧನಗಳ ಸುದೀರ್ಘವಾದ ನಿರೂಪಣೆ, ಅಪಾರವಾದ ಐಶ್ವರ್ಯ, ಪರಿವಾರ ಪ್ರದರ್ಶನ ಕಾವ್ಯವಾಗಿದೆ. ಎಂಬತ್ತು ಲಕ್ಷ ರಥಗಳು, ಹದಿನೆಂಟು ಕೋಟಿ ಕುದುರೆಗಳು, ಎಂಬತ್ನಾಲ್ಕು ಕೋಟಿ ಕಾಲಾಳುಗಳು ಇದ್ದರೂ ಭರತನ ಶರೀರ ವಜ್ರಮಯವಾಗಿ ಹೊಂಬಣ್ಣವಾಗಿದ್ದು, ಆರು ಖಂಡಗಳಲ್ಲಿನ ರಾಜರ ಬಲಕ್ಕಿಂತಲೂ ಭರತನ ಬಲ ಅಧಿಕವಾಗಿತ್ತು. ಇವನಿಗೆ ತೊಂಭತ್ತಾರು ಸಾವಿರ ಸುಂದರ ಪತ್ನಿಯರಿದ್ದರು ಎಂಬ ವಿವರಗಳು ಭರತನ ಭೋಗವಿಜಯಕ್ಕೆ ಪ್ರಸ್ತಾಪವಾಗಿ ಬರುತ್ತವೆ. ದಶವಿಧ ಭೋಗಾಂಗಳಲ್ಲಿ ಎಲ್ಲವನ್ನು ಬಿಟ್ಟು ಸ್ತ್ರೀ ಭೋಗವೊಂದನ್ನು ಉತ್ಕಟವಾಗಿ ವರ್ಣಿಸಿರುವ ಶೃಂಗಾರ ಕವಿ ರತ್ನಾಕರ. ಈತ ಆಸ್ಥಾನ ಕವಿಯಲ್ಲ, ಹುಟ್ಟುಕವಿ. ಸಂದರ್ಭದ ಒತ್ತಡದಿಂದ ಕಾವ್ಯಾಭಿವ್ಯಕ್ತಿ ಮೂಡಿರುವ ರಸಿಕ ಕವಿ. ತನ್ನ ಕಾಲದ ಸಾಂಗತ್ಯವನ್ನು ತನ್ನ ಕಾವ್ಯಕ್ಕೇ ಎರಕ ಒಯ್ದಿದ್ದಾನೆ. ಭರತೇಶ ವೈಭವ ಐದು ವಿಜಯಗಳ ಐದು ಮಜಲಿನ ಮಹಲು. ಕವಿಯ ಜೀವನವೇ ಒಂದು ಸಂಗೀತ ಲಹರಿ. ಅವನ ಕಾವ್ಯ ಭರತೇಶ ವೈಭವವೂ ಸಂಗೀತದ ಹೊನಲು. ಕಾವ್ಯ ರಚನೆಗೆ ಆಯ್ದುಕೊಂಡಿರುವ ಛಂದೋಬಂಧವೂ ಸಹಜ ಸಂಗೀತಮಯವಾದ ಸಾಂಗತ್ಯ. ಸಾಂಗತ್ಯಗಳು ಹಾಡುಗಬ್ಬದ ಮಟ್ಟು. ಲಲಿತ ಕಲೆಗಳನ್ನು ಸರಳಗೊಳಿಸಲು ಸಾಂಗತ್ಯದಷ್ಟು ಸಮರ್ಪಣೆ ಛಂದೋಬಂಧ ಮತ್ತೊಂದಿರಲಾರದು. ಸಂಗೀತ ಪ್ರಿಯನಾದ ರತ್ನಾಕರವರ್ಣಿ ತನ್ನ ಕಾವ್ಯ ನಾಯಕನಾದ ಭರತೇಶನನ್ನು ಸಂಗೀತಪ್ರಿಯನನ್ನಾಗಿ ಚಿತ್ರಿಸಿರುವುದು ಆಶ್ಚರ್ಯವಲ್ಲ. ಕಾವ್ಯದ ಮೊತ್ತ ಮೊದಲ ಆಸ್ಥಾನ ಸಂಧಿಯಲ್ಲಿಯೇ ಸಂಗೀತದ ವಾತಾವರಣ ತರಂಗಗಳು ಮೊದಲು ಮಾಡುತ್ತವೆ. ಮೊದಲಿಗೆ ಕವಿ ಹೇಳಿದ್ದಾನೆ ''ಇಲ್ಲದ ಗುಣಗಳನ್ನು ಸಲ್ಲದವನಿಗಿಟ್ಟು ಒಲ್ಲದ ಕಾವ್ಯ ಬರೆಯುವವ ನಾನಲ್ಲ''

ಎಂಬುದಾಗಿ. ಭವ್ಯರನ್ನು ಉದ್ದೇಶಿಸಿ ಕಾವ್ಯ ರಚಿಸುವುದು ಅವನ ಉದ್ದೇಶ. ಮೋಕ್ಷಕ್ಕೆ ಅರ್ಹರಾದ ಜೀವವೇ ಭವ್ಯಜೀವ. ಆದ್ದರಿಂದ ರತ್ನಾಕರನ ಉದ್ದೇಶ ಸ್ಪಷ್ಟವಾಗಿದೆ. ಶೃಂಗಾರ ಸಾಗರದಲ್ಲಿ ಈಜಿ ಬಂದರೂ ಭರತೇಶ ಮೋಕ್ಷಕ್ಕೆ ಅರ್ಹತೆಯನ್ನು ಪಡೆಯುವ ಶ್ರೇಷ್ಠ ವ್ಯಕ್ತಿತ್ವದವನು. ಅವನೊಬ್ಬ ಆದರ್ಶ ಶ್ರಾವಕ ಆದ್ದರಿಂದಲೇ ತನ್ನ ಕಾವ್ಯ ಗೃಹಸ್ಥಪುರಾಣವಾಗಿ ಮೂಡಿಬಂದಿದೆ.

ಭೋಗಸಂಧಿ ಒಂದು ಶೃಂಗಾರ ಸಾಗರ. ಭೋಗವಿಜಯವಾದರೂ ಯೋಗವನ್ನು ಬಿಡದೆ ಭೋಗಕ್ಕೆ ಬಲಿಯಾಗದೆ ಪ್ರತಿದಿನ ವಿವಿಧ ಸುಖ ಭೋಗಗಳನ್ನು ಭರತನ ಜೀವನಕ್ಕೆ ಉಜ್ವಲವೂ, ರಮಣೀಯವೂ ಆದ ಭೋಗ ಚಿತ್ರಗಳ ಪರಂಪರೆ ಹೆಣೆದುಕೊಂಡಿದೆ. ಭೋಗವಿಜಯವು ಅಭಿನೀತಗೊಂಡ ನಾಟಕದಂತಿದೆ. ಸಂಗೀತ, ಸಾಹಿತ್ಯ, ಮುನಿಗಳಿಗೆ ಆಹಾರದಾನ, ನಲ್ಲೆಯರೊಡನೆ ಸಹಪಂಕ್ತಿಭೋಜನ, ಉಪ್ಪರಿಗೆಯ ಒಡ್ಡೋಲಗ, ನಾದಿನಿಯರೊಡನಾಡುವ ಸರಸ ಮುಂತಾಗಿ ಪ್ರತಿಯೊಂದು ಜೀವಂತ ಚಿತ್ರಣಗಳಾಗಿ ಮೂಡಿ ಬಂದಿದೆ. ಸುಖವು ಕೇವಲ ಭೋಗದ ಬಾಹ್ಯಸಾಧನಗಳಿಂದ ಲಭಿಸುವಂಥದಲ್ಲ. ಅದು ಅಂತರಂಗದ ನೆಮ್ಮದಿಗೆ ಸೇರಿದ್ದು. ಇಂಥ ನೆಮ್ಮದಿ, ಪ್ರೀತಿಯ ಕೊಳು ಕೊಡುಗೆಗಳಿಂದ ಲಭಿಸುವಂಥದು. ಇದು ಬದುಕಿನ ಕಲೆ. ಇದು ಭರತನ ನಿಜವಾದ ಭೋಗವಿಜಯ. ವೈಮನಸುಗಳ ಸುಳಿವೇ ಇಲ್ಲ. ಎಲ್ಲೆಲ್ಲೂ ನಯ, ವಿನಯ, ಸೌಜನ್ಯಗಳ ಸಾಮ್ರಾಜ್ಯವೇ ತುಂಬಿ ತುಳುಕಾಡುತ್ತದೆ. ಕಾವ್ಯದ ತುಂಬ ಪ್ರತಿಯೊಬ್ಬರೂ ಇನ್ನೊಬ್ಬರ ಸುಖವನ್ನು ಕುರಿತು ಚಿಂತಿಸುತ್ತಾರೆ. ಒಬ್ಬರು ಇನ್ನೊಬ್ಬರ ಇಂಗಿತವನ್ನರಿತು ನಡೆಯುವರೇ ಆಗಿದ್ದಾರೆ. ಭರತ ಮನಸ್ಸಿನಲ್ಲಿ ಅಂದುಕೊಳ್ಳುವ ಮೊದಲೇ ನೀರಿನಗಿಂಡಿಯನ್ನು ಕೈಗಿಡುವ ಕುಸುಮಾಜಿ. ತನ್ನನ್ನು ಉಯ್ಯಾಲೆಯಲ್ಲಿಟ್ಟು ತೂಗುತ್ತಿದ್ದ ಮಗನಿಗೆ ಆಯಾಸವಾಗುವುದಲ್ಲಾ ಎಂಬುದನ್ನರಿತು 'ನನಗೆ ಇಲ್ಲೇಕೋ ನಿದ್ದೆ ಬರುತ್ತಿಲ್ಲ, ನನ್ನ ಮನೆಗೆ ಹೋಗುತ್ತೇನಪ್ಪಾ' ಎಂದು ಹೊರಡುವ ಯಶಸ್ವತೀ ದೇವಿ, ಇವರು ಉಣ್ಣುವವರು, ನಾವು ಬಡಿಸುವವರು ಎಂಬ ಭೇದವಿಲ್ಲದ ಭರತನ ಪತ್ನೀವರ್ಗ ಈ ಸಾಮರಸ್ಯವೇ ಸುಖದ ಮೂಲ. ಇದೇ ಗೃಹಜೀವನದ ಪ್ರಶಾಂತ ಸೌಖ್ಯ. ಹೀಗೆ ಭರತೇಶ ವೈಭವ ಭೋಗವೂ ಅಲ್ಲದೆ ತ್ಯಾಗವೂ ಅಲ್ಲದ ಜೀವಜೀವಗಳ ಜೀವನಯೋಗವಾಗಿದೆ. ಇಲ್ಲಿ ಬರುವ ಭೋಗಕ್ಕೆ ಯೋಗದ ರಕ್ಷೆಯಿದೆ. ಭೋಗವಿಜಯದಲ್ಲಿ ಬರುವುದು ರಮಣೀಯವಾದ ಸಂಭೋಗ ಶೃಂಗಾರ ಒಟ್ಟಾರೆಯಾಗಿ ಭರತೇಶ ವೈಭವದ ಭೋಗವಿಜಯವೇ ರತ್ನಾಕರನ ಕಾವ್ಯವಿಜಯವೂ ಆಗಿದೆ.

ಭರತೇಶನ ಮತ್ತೊಂದು ಮಜಲು ದಿಗ್ವಿಜಯ. ತನ್ನ ಆಯುಧಾಗಾರದಲ್ಲಿ ಚಕ್ರರತ್ನ ಉದಯಿಸಿದ ಸೂಚನೆಯಿಂದಾಗಿ ದಿಗ್ವಿಜಯ ಯಾತ್ರೆ ಕೈಗೊಳ್ಳುತ್ತಾನೆ.

ಈ ಭಾಗದಲ್ಲಿ ಮೂಲ ಕಥೆಯನ್ನು ಅನುಸರಿಸಿಯೂ ಕೆಲವಾರು ಪ್ರಮುಖ ಮಾರ್ಪಾಟುಗಳನ್ನು ಮಾಡಿಕೊಂಡಿದ್ದಾನೆ. ಭರತನನ್ನು ಪ್ರತಿರೋಧಿಸಿದ ಮಾಗಧನನ್ನು ಭರತನು ಜಯಿಸುತ್ತಾನೆ. ಜಿನಸೇನರ ಕಥೆಯಲ್ಲಿ ಆದರೆ ರತ್ನಾಕರನಲ್ಲಿ ಮಾಗಧನೇ ಹೋಗಿ ಭರತನಿಗೆ ತಲೆಬಾಗುತ್ತಾನೆ. ಇದರಿಂದ ಭರತನ ಪ್ರಭಾವವನ್ನು ಪ್ರಜ್ವಲಿಸುವ ಉದ್ದೇಶ ಕವಿಗಿದೆ. ಮತ್ತೊಂದು ಸಂದರ್ಭದಲ್ಲಿ ವಿಜಯಾರ್ಧ ಪರ್ವತದ ಗುಹಾದ್ವಾರದ ಕವಾಟ ವಿಸ್ಫೋಟನಾ ಸಂದರ್ಭ, ಮೂಲದಲ್ಲಿ ಭರತನ ಆಜ್ಞಯಂತೆ ಸೈನ್ಯಾಧಿಪತಿ ದಂಡರತ್ನದಿಂದ ವಿಸ್ಫೋಟಿಸಿದರೆ ರತ್ನಾಕರನಲ್ಲಿ ಬದಲಾವಣೆಯಾಗಿದೆ. ಅಪರೂಪಕ್ಕೆ ವೀರರಸ ಪ್ರತಿಪಾದನೆಯೂ ಆಗಿದೆ. ಭರತ ವಿಜಯ ಪ್ರಶಸ್ತಿಯನ್ನು ಬರೆಯಿಸಿದ ಪ್ರಸಂಗವೂ ರತ್ನಾಕರನಲ್ಲಿ ಬದಲಾಗಿದೆ. ಜಿನಸೇನ, ಪಂಪ ಇವರುಗಳಲ್ಲಿ 'ನೃಪಾಲನ ಗರ್ವ ಸೋರಿದುದು' ಎಂಬುದಾಗಿದ್ದರೆ ಇವರಿಂದ ಭರತನ ಘನತೆಗೆ ಕುಂದೆಂದು ಭಾವಿಸಿದ ರತ್ನಾಕರ ಆತ್ಮರತ್ವಕ್ಕೆ ಹೊರತಾದ ಲಿಪಿಯನ್ನು ಅಳಿಸಿ ತನ್ನ ಶಾಸನ ಆತ್ಮತತ್ವಪೂರ್ಣವಾದ ಅಳಿಸಲಾರದ ಹೆಗ್ಗಳಿಕೆಗೆ ಪಾತ್ರನಾಗುವ ರೀತಿ ಚಿತ್ರಿಸಿರುವುದು ಕವಿಯ ಸ್ವತಂತ್ರ ಪರಿಕಲ್ಪನೆಗಳಾಗಿವೆ. ಬಾಹುಬಲಿಯೊಡನೆ ಯುದ್ಧಮಾಡಬೇಕಾದ ಸಂದರ್ಭವನ್ನು ಕಿರುಬೆರಳಿನ ಸಟೆಯ ಪ್ರಸಂಗದಿಂದ ವಿನೋದ ಮಾರ್ಗದಲ್ಲಿ ಪರಾಕ್ರಮವನ್ನು ನಿರೂಪಿಸಿ ಭರತ ಬಾಹುಬಲಿಗಳ ಯುದ್ಧವನ್ನು ಪರಿಹರಿಸಿದ ರತ್ನಾಕರ ನಾಯಕನ ಅಲೌಕಿಕ ಸಾಮರ್ಥ್ಯವನ್ನು ದರ್ಶನ ಮಾಡಿಸಿದ್ದಾನೆ. ಜಿನಸೇನರಲ್ಲಿ ಭರತ ಧರ್ಮಯುದ್ಧದಲ್ಲಿ ಸೋತು ಚಕ್ರರತ್ನದಿಂದಲಾದರೂ ಬಾಹುಬಲಿಯ ಸಂಹಾರಕ್ಕೆ ಮುಂದಾಗುತ್ತಾನೆ. ಅದರಿಂದ ಭರತನಿಗೇ ಮುಖಭಂಗವಾಗುತ್ತದೆ. ಆದರೆ ರತ್ನಾಕರ ತನ್ನ ಕಾವ್ಯದಲ್ಲಿ ಭರತನ ಬಾಯಲ್ಲಿ ಸೋದರ ಸಂಹಿತೆಯನ್ನು ಪ್ರಸ್ತಾಪಿಸಿ ಜಿನಪುತ್ರರಲ್ಲಿ ಹಗೆತನ ಬೇಡವೆಂದು, 'ನಾನು ಗೆದ್ದಿರುವ ಧರೆಯನ್ನೂ ನೀನೆ ಇಟ್ಟುಕೋ' ಎಂದು ಹೇಳುವ ಮೂಲಕ ಬಾಹುಬಲಿ ತನ್ನಣ್ಣನಿಗೆ ಮಣಿಯುವಂತೆ ಬದಲಾಯಿಸಿದ್ದಾನೆ. ಒಳ್ಳೆಯತನದಿಂದ ಎಂಥ ಕೆಟ್ಟತನವನ್ನೂ ಗೆಲ್ಲಬಹುದೆಂಬ ಭಾರತೀಯ ಸಂಸ್ಕೃತಿ ಸತ್ವವನ್ನು ಸಾರುವ ಭರತನ ಪಾತ್ರ ಮಹಾಚೇತನರೂಪಿಯಾಗಿದೆ. ಬಾಹುಬಲಿಯ ಹೃದಯವನ್ನು ಗೆದ್ದಾಗಲೇ ಭರತನ ದಿಗ್ವಿಜಯ ಪೂರ್ಣವಾಗುವುದು. ಇದೇ ಭರತನ ದಿಗ್ವಿಜಯದ ದಿಗ್ವಿಜಯ. ಅವನ ವಿಜಯಕ್ಕಿಟ್ಟ ಕಳಶವಾಗಿದೆ. ಭರತನ ದಿಗ್ವಿಜಯ ಭಾಗದಲ್ಲೂ ಗೃಹಜೀವನ, ಸರಸ, ಭೋಗ, ಯೋಗ ಸಂಗತಿಗಳು ಅನಾಯಾಸವಾಗಿ ನಡೆಯುತ್ತವೆ. ಅರವತ್ತು ಸಾವಿರ ವರ್ಷಗಳ ದಿಗ್ವಿಜಯವದು. ಬಾಹುಬಲಿಯ ಹೃದಯ ವಿಜಯದೊಡನೆ ಮುಕ್ತಾಯವಾಗುತ್ತದೆ.

ಯೋಗವಿಜಯದಲ್ಲಿನ ಒಂಬತ್ತು ಸಂಧಿಗಳಲ್ಲಿ ಭರತನ ಯೋಗ ವಿಚಾರ ಬಂದಿರುವುದು ಒಂದೇ ಸಂಧಿಯಲ್ಲಿ. ಅಲ್ಲಿಯೂ ಸಹ ಸಭೆಯಲ್ಲಿ ಕುಳಿತ ಭರತ

ಅನುಭವದ ಆಧ್ಯಾತ್ಮರಸವನ್ನು ಆತ್ಮಕಲೆಯನ್ನು ಸಭಿಕರಿಗೆ ಸರಳವಾಗಿ ವರ್ಣಿಸುವ ಸಂದರ್ಭ. ಅದು ಮೋಕ್ಷ ವಿಜಯದಲ್ಲೂ ಸಹ ರತ್ನಾಕರ ಭರತೇಶನು ಕಡೆಗೆ ತಪಸ್ಸು ಮಾಡಿ ಕೈವಲ್ಯ ಪಡೆದುದನ್ನು ಹೇಳುವಾಗಲೂ ಶೃಂಗಾರ ಸಿದ್ಧ ಮುಕ್ತಿವನಿತೆಯ ಶಯ್ಯಾಗೃಹವನ್ನು ಪ್ರವೇಶಿಸಿದಂತೆಯೇ ವರ್ಣಿಸಿದ್ದಾನೆ. ಒಟ್ಟಿನಲ್ಲಿ ಇದೊಂದು ಶೃಂಗಾರ ಪ್ರಧಾನ ಕಾವ್ಯ. ಅರ್ಕಕೀರ್ತಿವಿಜಯ ಐದನೆಯ ಹಾಗೂ ಕೊನೆಯ ವಿಜಯ. ಇದರಲ್ಲಿ ಸರ್ವರ ನಿರ್ವೇಗ ಮತ್ತು ಸರ್ವರ ಮೋಕ್ಷವಿಚಾರಗಳೂ ಪ್ರಧಾನ. ಭರತ ಸಂಸಾರ ತ್ಯಾಗ ಮಾಡಿದರ ಪರಿಣಾಮ ಪ್ರಜೆಗಳ ಮೇಲೆ ಬಾಂಧವರ ಮೇಲೆ ತೀವ್ರ ಪರಿಣಾಮವನ್ನುಂಟು ಮಾಡುವ ಬಗೆ ಅನನ್ಯವಾಗಿದೆ. ಭರತನಿಗೆ ಪಂಚಕಲ್ಯಾಣಗಳನ್ನು ಕಲ್ಪಿಸುವ ಕಾರಣಕ್ಕಾಗಿ ಅರ್ಕಕೀರ್ತಿವಿಜಯವನ್ನು ಕಾವ್ಯದಲ್ಲಿ ಸೇರಿಸಲಾಗಿದೆಯೆಂದು ಸ್ಪಷ್ಟವಾಗುತ್ತದೆ.

ಭರತೇಶ ವೈಭವದಲ್ಲಿ ಲೌಕಿಕ, ಆಧ್ಯಾತ್ಮಿಕ ವಿಷಯಗಳೆರಡಕ್ಕೂ ಸೈ ಎನ್ನುವ ಕಥಾನಾಯಕನ ಪಾತ್ರ ಭರತನದು. ಗೃಹಸ್ಥರಲ್ಲಿ ಮುಖ್ಯನೂ ಜಿನಭಕ್ತಾಗ್ರೇಸರನೂ ಆಗಿ ರಾಜರ್ಷಿ ನಾಯಕನನ್ನಾಗಿ ರತ್ನಾಕರ ಚಿತ್ರಿಸಿದ್ದಾನೆ. ಇಷ್ಟಾದರೂ ಯೋಗಕ್ಕಿರುವ ಮಾನ್ಯತೆ ಭೋಗಕ್ಕಿಲ್ಲ. ಮುಕ್ತಿಯೇ ಪ್ರಮುಖ ಸುಖವಾಗಿದೆ. ರತ್ನಾಕರನೇ ಭೋಗವನ್ನು ಕೆಸರಿಗೆ ಹೋಲಿಸಿದ್ದಾನೆ. ಇಂಥ ಭೋಗದ ಕೆಸರಿಗಂಟದಂತೆ ಭರತ ಹೇಗೆ ಬಾಳುತ್ತಿದ್ದ ಎಂಬುದನ್ನು ಹೇಳುವುದೇ ರತ್ನಾಕರನ ಉದ್ದೇಶ. ಕಾವ್ಯ ಜನಾನುರಾಗಿಯಾಗಿರಬೇಕೆಂಬ ಕಾರಣಕ್ಕೆ ಶೃಂಗಾರ ಪ್ರಧಾನಗೊಳಿಸಿರಬೇಕು ಎಂದು ತೋರುತ್ತದೆ. ಜೈನತತ್ವವನ್ನು ಹೆಚ್ಚು ಕ್ಲಿಷ್ಟಗೊಳಿಸದೆ ಸರಳ ಕಥಾನಕದಂತೆ ಮಂಡಿಸಿದ್ದಾನೆ. ಲಲಿತವಾದ ಸಾಂಗತ್ಯ ಶೈಲಿಯಲ್ಲಿ ಕಥಾಶ್ರವಣಕ್ಕೆ ಮಾರ್ಗಮಾಡಿಕೊಟ್ಟಿದ್ದಾನೆ.

**ಪರಮಾರ್ಥ - ಸರ್ವಜ್ಞನ ವಚನಗಳು (ಡಾ।। ಎಲ್. ಬಸವರಾಜು)**

'ಪರಮಾರ್ಥ' ಸರ್ವಜ್ಞನ ಅಂಕಿತವೆಂದು, ಕಾಲಾನುಗತವಾಗಿ ಸರ್ವಜ್ಞನ ಹೆಸರೆ ಆತನ ಜನಪ್ರಿಯತೆಯಿಂದಾಗಿ 'ಸರ್ವಜ್ಞ' ಎನ್ನುವುದು ಅಂಕಿತವಾಗಿ ಪರಿವರ್ತಿತವಾಗಿದೆ ಎಂದು ಡಾ।। ಎಲ್. ಬಸವರಾಜು ಅವರು ಅಭಿಪ್ರಾಯಪಡುತ್ತಾರೆ. ಅವರು ''ಸರ್ವಜ್ಞನ ವಚನಗಳ ಸಂಗ್ರಹ'' ಸಂಪಾದನ ಗ್ರಂಥದಿಂದ ಕ್ರಿ.ಶ. 1636ರಲ್ಲಿ ವೆಂಕನೆಂಬುವನು ಪ್ರತಿ ಮಾಡಿದ ಪ್ರಾಚೀನತಮ ಓಲೆಯ ಗ್ರಂಥ ಮತ್ತು ಪ್ರಾಚೀನ ಓಲೆಯ ಪ್ರತಿಗಳು, ಮಧ್ಯಕಾಲೀನ ಕಾಗದದ ಪ್ರತಿಗಳು ಹಾಗೂ ಅಚ್ಚಾದ ಹಲವು ಪುಸ್ತಕಗಳನ್ನು ಆಧಾರವಾಗಿಟ್ಟುಕೊಂಡು ತೌಲನಿಕವಾಗಿ ಪರಿಶೀಲಿಸಿ, ಈ ನಿರ್ಣಯಕ್ಕೆ ಬಂದಿದ್ದಾರೆ. ಉತ್ತಂಗಿ ಚೆನ್ನಪ್ಪನವರು ''ಸರ್ವಜ್ಞನ ವಚನಗಳು'' ಗ್ರಂಥದ ಸಂಪಾದನಾ ಕೃತಿಯಲ್ಲಿ 'ಸರ್ವಜ್ಞ'ನೆನ್ನುವುದು

ಅಂಕಿತವಾದರೂ, ಅದೇ ಸರ್ವಜ್ಞನ ಹೆಸರೂ ಆಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದೇ ಮಾದರಿಯಲ್ಲಿ ಸರ್ವಜ್ಞನ ಕಾಲ-ದೇಶ, ಜನ್ಮಸ್ಥಳ ಮುಂತಾದ ಜೀವನ ಚರಿತ್ರೆಯ ಬಗ್ಗೆ ವಿದ್ವಾಂಸರಲ್ಲಿ ವಾದ ವಿವಾದಗಳು ನಡೆದೇ ಇದೆ.

'ಪರಮಾರ್ಥ'ವೆಂದರೆ ಪವಿತ್ರ, ಸತ್ಯ, ಪ್ರಾಮಾಣಿಕತೆ, ವಿಮೋಚನೆ, ಬಿಡುಗಡೆ, ಉನ್ನತಿ ಮುಂತಾದ ಅರ್ಥಸಂಚಯವನ್ನು ಈ ಪದದ ಪರಿಕಲ್ಪನೆ ಸೃಜಿಸುತ್ತದೆ. ಭಾರತೀಯ ಸಾಹಿತ್ಯ ಮೀಮಾಂಸೆಯಲ್ಲಿ ಅದರ ಪ್ರಯೋಜನವನ್ನು ಹೇಳುವಾಗ ಧರ್ಮ, ಅರ್ಥ, ಕಾಮ ಇವುಗಳು ಮೂರು ಪುರುಷಾರ್ಥಗಳೆಂದು ಗುರುತಿಸುತ್ತಾರೆ. ಇವುಗಳೆಂದ ಜೀವನಕ್ಕೆ ಪಡೆಯುವ ವಿಮುಕ್ತಿಯೇ ಪರಮಾರ್ಥವಾಗಿದೆ. ಹಾಗಾಗಿ ಈ 'ಪರಮಾರ್ಥ' ಅಂಕಿತವನ್ನು ಇಟ್ಟುಕೊಂಡು ಸರ್ವಜ್ಞ ಧರ್ಮ, ಅರ್ಥ, ಕಾಮಗಳ ಪರಮ ಪ್ರಯೋಜನಗಳನ್ನು ತನ್ನ ಅನುಭವಸಾರದ ತ್ರಿಪದಿಗಳಿಂದ ನೆರವೇರಿಸಲು ಪ್ರಯತ್ನ ಪಟ್ಟಿದ್ದಾನೆ. ಸರ್ವಜ್ಞನ ಈ ತ್ರಿಪದಿಗಳನ್ನು ಅನೇಕರು ಸರ್ವಜ್ಞನ ವಚನ ರಚನೆಗಳೆಂದು ಕರೆದಿದ್ದಾರೆ. ಒಂದು ರೀತಿಯಲ್ಲಿ ಸರ್ವಜ್ಞನ ತ್ರಿಪದಿಗಳು ವಚನ ರಚನೆಗಳೇ ಆಗಿವೆ. ಏಕೆಂದರೆ ವಚನಕಾರರ ನಂತರದಲ್ಲಿ ಸರಿಸುಮಾರು ಹದಿನಾರನೆಯ ಶತಮಾನದಲ್ಲಿ ಕಾಣಿಸಿಕೊಳ್ಳುವ ಸರ್ವಜ್ಞನನ್ನು ಹದಿನೈದನೇ ಶತಮಾನದಲ್ಲಾದ ವಚನಗಳ ಸಂಗ್ರಹ ಸ್ವರೂಪದ ಪುನರ್ ವ್ಯಾಖ್ಯಾನ, ರಚನಕ್ರಿಯೆಗಳು ಈತನ ಮೇಲೆ ದಟ್ಟವಾದ ಪ್ರಭಾವವನ್ನು, ಪರಿಣಾಮವನ್ನು ಉಂಟು ಮಾಡಿವೆ. ಹಾಗಾಗಿಯೇ ಸರ್ವಜ್ಞನ ವಚನಗಳು 'ವಚನ ಚಳುವಳಿ'ಯ ಧಾಟಿ, ಧೋರಣೆ, ಲಯ, ಭಾಷೆ, ವೈಚಾರಿಕತೆ, ಪ್ರಗತಿಪರತೆ, ಜಾತ್ಯಾತೀತತೆ, ಮಾನವೀಯತೆಯ ಮುಂತಾದ ಚಿಂತನೆಗಳನ್ನು ಸಹಜವಾಗಿಯೇ ಹೊತ್ತುಕೊಂಡು ಬಂದಿವೆ. ಈ ರೀತಿಯ ಚಿಂತನೆಗಳ ಧಾಟಿಯಲ್ಲಿ ಅಭಿವ್ಯಕ್ತಗೊಂಡಿರುವ ವಚನಗಳನ್ನು ವಿದ್ವಾಂಸರಾದ ಡಾ|| ಎಲ್. ಬಸವರಾಜು ಅವರು ವಿಷಯಕ್ಕನುಗುಣವಾಗಿ ಜಾತಿ ಸ್ಮರಣ ಪದ್ಧತಿ, ಗುರುಕರುಣ ಪದ್ಧತಿ, ಲಿಂಗಾತಿಶಯ ಪದ್ಧತಿ, ಇಷ್ಟಲಿಂಗ ಷಟ್ಸಲ ಪದ್ಧತಿಗಳೆಂದು ಸುಮಾರು ಇಪ್ಪತ್ತೆರಡು 'ಪದ್ಧತಿ'ಗಳೆಂದು ವಿಂಗಡಿಸಿಕೊಂಡು ಈ ಗ್ರಂಥದಲ್ಲಿ ಅಳವಡಿಸಿ ಜೋಡಿಸಿದ್ದಾರೆ. ಸಂಪಾದಕರ ಈ ಗ್ರಂಥವು ಅಲ್ಲಮ ವಚನಗಳ 'ಅನುಭಾವ'ವನ್ನು ನೆನಪಿಗೆ ತರುತ್ತವೆ.

'ಆಡು ಮುಟ್ಟದ ಸೊಪ್ಪಿಲ್ಲ' ಎನ್ನುವ ಗಾದೆಯಂತೆ ಸರ್ವಜ್ಞನು ಹೇಳದ ವಿಷಯವಿಲ್ಲ. ಮನುಷ್ಯ ಜೀವನದ ಎಲ್ಲಾ ಮಗ್ಗಲುಗಳನ್ನು ಕಟಕಿ, ವ್ಯಂಗ್ಯ, ಹಾಸ್ಯ ಮುಂತಾದ ಜೀವನ ವಿಮರ್ಶೆಯ ಚಾಟಿ ಏಟಿನಿಂದ ಯಾರ ಮುಲಾಜಿಗೂ ಒಳಗಾಗದೆ ಜಾಡಿಸಿದ್ದಾನೆ. ಒಂದು ರೀತಿಯಲ್ಲಿ ಜೀವನ ಸಕಲ ಪರೀಕ್ಷೆಗಳಲ್ಲಿ ಪ್ರವೇಶ ಪಡೆದುಕೊಂಡ ಸರ್ವಾಂತರ್ಯಾಮಿ. ವಿಮರ್ಶಕ ಎಲ್.ಆರ್. ಹೆಗ್ಗಡೆ ಯವರು ಅಭಿಪ್ರಾಯ ಪಡುವಂತೆ ''ಸರ್ವಜ್ಞ ಕನ್ನಡದ ಒಂದು ಪುಟ್ಟ ವಿಶ್ವಕೋಶ''

ವಾಗಿದ್ದಾನೆ. ಡಾ॥ ಜಿ.ಎಸ್. ಶಿವರುದ್ರಪ್ಪನವರು ಹೇಳುವಂತೆ 'ಸರ್ವಜ್ಞ' ಎಂದು ಜನಜನಿತವಾಗಿರುವ ಈ ವ್ಯಕ್ತಿ ಒಬ್ಬ ಕವಿ. ಕಂಡದ್ದನ್ನು ಕಂಡೊಡನೆಯೇ ಪದ್ಯರೂಪದಲ್ಲಿ ಕಟ್ಟಿನಿಲ್ಲಿಸುವ ಕೌಶಲವಿರುವ ಕಾರಣ ಈತ ಒಬ್ಬ ಕವಿ ಎನ್ನಬಹುದು. ಈ ಕವಿಯ ಕಾವ್ಯ 'ವಚನ' ರೂಪದ್ದು ಎನ್ನುತ್ತಾರೆ. ಸರ್ವಜ್ಞನ ಕವಿಯೊಬ್ಬ ಆತನು ಕಂಡ ಲೋಕಾನುಭವ ಮತ್ತು ದಕ್ಕಿಸಿಕೊಂಡ ಜೀವನಾನುಭವಗಳಿಂದ ಸಹಜವಾಗಿಯೇ ಹುಟ್ಟಿಕೊಂಡಿದ್ದಾನೆ. ಹಾಗಾಗಿ ಸರ್ವಜ್ಞನು ಸಹಜವಾಗಿ ಹೇಳಿದ ಸೂಕ್ತಿಗಳು ಅರಿವಿಲ್ಲದಂತೆ ಸಾಹಿತ್ಯ ವಾಙ್ಮಯವಾಗಿದೆ. ಈತನ ಸಮಾಜ ವಿಮರ್ಶೆಯ ವಚನಗಳಂತೂ ಈತನೊಬ್ಬ ಸಮಾಜಸುಧಾರಕನಂತೆ, ತತ್ವಜ್ಞಾನಿ, ಸಮಾಜ ಉದ್ಧಾರಕನಂತೆ ಮಾಡಿವೆ. ಇಲ್ಲಿ 'ಸರ್ವಜ್ಞ' ಎನ್ನುವ ವ್ಯಕ್ತಿ ಒಬ್ಬ ವ್ಯಕ್ತಿಯಲ್ಲ. ಅದೊಂದು ಕಾವ್ಯ ಪದ್ಧತಿಯಾಗಿದೆ. ಇದಕ್ಕಾಗಿ ಕಟಿಬದ್ಧನಾಗಿದ್ದಾನೆ. ಅದನ್ನು ಹೀಗೆ ಹೇಳಿಕೊಂಡಿದ್ದಾನೆ.

ಮಂಡ ಬೋಳಿಸಿಕೊಂಡು, ತುಂಡು ಗಂಬಳಿ ಹೊದೆದು
ಹಿಂಡನಗಲಿದ ಗಜದಂತೆ ಇಪ್ಪವನ
ಕಂಡು ನಂಬುವುದು ಪರಮಾರ್ಥ ।

ಕರದಿ ಕಪ್ಪರವುಂಟು, ಹಿರಿದೊಂದು ನಾಡುಂಟು
ಹರನೆಂಬ ದೈವ ನಮಗುಂಟು, ತಿರಿವರಿಂ
ಸಿರಿವಂತರಾರು ಪರಮಾರ್ಥ ।

ಸಮಾಜ ಪರಿವರ್ತನೆಗೆ ಅವತಾರ ಪುರುಷನಂತೆ ಹುಟ್ಟಿರುವನೇನೋ ಎನ್ನುವಂತ ತನ್ನ ಸೃಷ್ಟಿಯನ್ನು ತಿದ್ದಿಕೊಂಡಿದ್ದಾನೆ. ಇದನ್ನು ಸಾಧಿಸಲಿಕ್ಕಾಗಿ ಭಿಕ್ಷುಕನಾಗಿ ಕೈಯಲ್ಲಿ ಕಪ್ಪರವನ್ನು ಹಿಡಿದುಕೊಂಡು ನಡೆದಾಡುವ ಜಂಗಮನಂತೆ ಆಗಿದ್ದಾನೆ. ಜನಗಳ ಒಳಿತಿಗಾಗಿ ತಿರುಕನಾದರೂ ಚಿಂತೆಯಿಲ್ಲ ಇದು ಸರ್ವಜ್ಞನ ನಿಜವಾದ ಕಾಯಕವಾಗಿದೆ.

ಹೊಲಸು ಮಾಂಸದ ಹುತ್ತು ಎಲುಬಿನ ಹಂಜರವು
ಹೊಲೆ ಬಲಿದ ತನುವಿನೊಳಗಿರ್ದು ಮತ್ತದರ
ಕುಲವನರಸುವರೆ ಪರಮಾರ್ಥ ।

ಎಲುಬಿನ ಕಾಯಕ್ಕೆ ಸಲೆ ಚರ್ಮವನು ಹೊದಿಸಿ
ಮಲಮೂತ್ರ ಕ್ರಿಮಿಯು ಒಳಗಿರ್ಪ ದೇಹಕ್ಕೆ
ಕುಲವಾವುದಯ್ಯ ಪರಮಾರ್ಥ ।

ಕುಲದ ಜಾತಿಯ ವಿಚಾರ ಬಂದಾಗ ಸರ್ವಜ್ಞನ ನುಡಿ ಈಟಿ ತಿವಿದಂತೆ ಕಠಿಣವಾದುದು. ಇವುಗಳು ಮನುಷ್ಯನ ವೈರಿಗಳು. ಅವುಗಳು ಬಾಹ್ಯದಲ್ಲಿ ಇಲ್ಲ,

ಬದಲಾಗಿ ಅವು ಮನುಷ್ಯರ ಸ್ವಾರ್ಥದ ಅಂತರಂಗದೊಳಗೆ ಮನೆ ಮಾಡಿಕೊಂಡಿರುತ್ತದೆ. ಇಷ್ಟಲಿಂಗ ಷಟ್ಸ್ಥಲ ಪದ್ಧತಿಯ ತ್ರಿಪದಿಗಳಲ್ಲಿ ಸರ್ವಜ್ಞನು ವ್ಯಕ್ತಿ ಸಮಾಜದಲ್ಲಿ ನೈತಿಕ ನಿಷ್ಠೆಗಳು ಇರಬೇಕಾದ ನಿಷ್ಠೆಗಳನ್ನು ಹೇಳುತ್ತಾನೆ.

ಹರನಿಷ್ಠೆಗಲ್ಲದೆ ಹರೆದುಹೋಗದು ಪಾಪ
ಹರಭಕ್ತಿಯುಳ್ಳ ಗುರುವರ ನೆನ್ನಯ
ಗುರದೈವವೆಂಬೆ ಪರಮಾರ್ಥ ।

ಭಕ್ತರೊಡನಾಡುವುದು ಭಕ್ತರೊಡಗೂಡುವುದು
ಭಕ್ತರೊಳು ಭಕ್ತಿವೆರಸಿರ್ಪ ಭಕ್ತನೇ
ಮುಕ್ತನಾಗಿಹನು ಪರಮಾರ್ಥ ।

ಭಕ್ತ ಹರನ ನಿಷ್ಠೆಯಲ್ಲಿ ತನ್ನ ನಿಷ್ಠೆಯನ್ನು ನೆಟ್ಟಿಕೊಳ್ಳಬೇಕು. ಭಕ್ತಿಯ ಗುಂಪು ಅದು ಸದ್ದನಡತೆಯ, ಸಂಘವಾಗಿರುತ್ತದೆ. ಲೌಕಿಕದ ಜಂಜಾಟದಿಂದ ಮುಕ್ತವಾಗುವುದೆಂದರೆ ಭಕ್ತರ ಸ್ನೇಹವನ್ನು ಆಪ್ತವಾಗಿಸಬೇಕಾಗಿದೆ. ಇದಕ್ಕೆ ಬುದ್ಧಿವಂತಿಕೆ, ಜ್ಞಾನ ಬೇಕು. ಇಲ್ಲದಿದ್ದರೆ ಇಂತಹ ನಿಷ್ಠೆ-ನಿಯಮಗಳನ್ನು ಜೈಸಿಕೊಳ್ಳಲಾಗುವುದಿಲ್ಲ.

ಜ್ಞಾನ ಉಳ್ಳವನೋಡಲು ಭಾನುವಿನಂತಿಹುದು
ಜ್ಞಾನವಿಲ್ಲದವನ ಬಳಿಕಾಯ ಹಾಳೂರ
ಶ್ವಾನದಂತಿಹುದು ಪರಮಾರ್ಥ ।

ಒಳಗಣ ಜ್ಯೋತಿಯ ಬಳಗ ಬಲ್ಲಾತಂಗೆ
ಬೆಳಗಾಯಿತೇಳಿ ದೇಹಾರ ಕೆಂದೆಂಬ
ಕಳವಳವೇಕೆ ಪರಮಾರ್ಥ ।

ಹರನ ಭಕ್ತಿಯನ್ನು ಮೈಗೂಡಿಸಿಕೊಳ್ಳುವುದು ಸರಳವಲ್ಲ. ಅದೊಂದು ನಿಷ್ಠೆ. ಅದಕ್ಕೆ ಜ್ಞಾನ ಬೇಕು. ಅದಿಲ್ಲದೆ ಹೋದರೆ ಆ ದೇಹ ಪಾಳು ಮನೆಯಲ್ಲಿ ಬೊಗಳುವ ಶ್ವಾನದಂತೆ ಆಗಬೇಕಾಗುತ್ತದೆ. ಭಕ್ತನಿಗೆ ಆತ್ಮಜ್ಞಾನ ಮುಖ್ಯವಾಗಿ ಬೇಕು. ಇದನ್ನು ಯಾರು ಸಂಪಾದಿಸಿಕೊಳ್ಳುತ್ತಾರೆಯೋ ಅವರಿಗೆ ಯಾವುದೇ ದುಗುಡ-ದುಮ್ಮಾನ ಉಂಟಾಗುವುದಿಲ್ಲ. ಸುಖಾಸುಖ ಪದ್ಧತಿಯಲ್ಲಿ ಮನುಷ್ಯನ ಜಾರತನ, ಆಸೆ, ಗೋಪುರಗಳು ಅಗಾಧವಾಗಿರುತ್ತವೆ. ಹೆಣ್ಣು ಸಕಲ ಗಂಡುಗಳಿಗೆ ತಾಯಿ, ಹೆಂಡತಿ, ಸ್ನೇಹಿತೆ, ಪ್ರೇಯಸಿ ಇತ್ಯಾದಿಯಾಗಿ ಅವರ ಬಾಳಿನೊಳಗೆ ಬೇಕೇ ಬೇಕಾದ ಜೀವವಾಗಿದೆ. ಈ ಜೀವ ಇದ್ದರೆ ಗಂಡು ಜೀವದ ಉಸಿರಾಡುತ್ತದೆ. ಹಾಗೆಯೇ ಗಂಡಿನ ಅವಶ್ಯಕತೆ ಹೆಣ್ಣಿಗೂ ಬೇಕೇ ಬೇಕಾಗಿದೆ.

ಹೆಣ್ಣನು ಹೊನ್ನನು ಹಣ್ಣಾದ ಮರನನು
ಕಣ್ಣಲಿ ಕಂಡು ಮನದಲಿ ಬಯಸದ
ಅಣ್ಣಗಳದಾರು ಪರಮಾರ್ಥ ।

ಹೆಣ್ಣು, ಹೊನ್ನು, ಮಣ್ಣು ಇವುಗಳು ಪ್ರಪಂಚದ ಚಂಚಲವಸ್ತುಗಳು. ಇವುಗಳು ಮನುಷ್ಯನ ಬಾಳಿನ ಜಗತ್ತಿನಲ್ಲಿ ತೀರ ಅವಶ್ಯಕವಾದ ಜೀವಧಾತುಗಳು. ಜೇಡರ ದಾಸಿಮಯ್ಯ ಮತ್ತು ಅಲ್ಲಮಪ್ರಭುಗಳ ವಚನಗಳಲ್ಲಿ ಈ ಮೂರು ವಸ್ತುಗಳು ಗಂಭೀರ ಚರ್ಚೆಗೆ, ಜಿಜ್ಞಾಸೆಗೆ ಒಳಗಾಗಿವೆ.

ಸಮಾಜದಲ್ಲಿ ಎಲ್ಲಾ ದಾನಕ್ಕಿಂತ ದಾನವೆಂದರೆ ಅನ್ನದಾನ. ಇದನ್ನೇ ಬೇಂದ್ರೆಯವರು 'ಅನ್ನ ದೇವರ ಮುಂದೆ ಇನ್ನು ದೇವರು ಉಂಟೆ' ಎಂದು ಬಡವನ ಹಸಿವೆ ಈ ಅನ್ನ ದೇವರೆ ಮುಖ್ಯ. ಇದಿಲ್ಲದಿದ್ದರೆ ಯಾವ ದೇವರೂ ಇದ್ದರೂ ಪ್ರಯೋಜನವಿಲ್ಲ.

ಅನ್ನವನಿಕ್ಕುವುದು ನನ್ನಿಯ ನುಡಿವುದು
ತನ್ನಂತೆ ಪರರ ಬಗೆವುದು ಸ್ವರ್ಗ ತಾ
ಬಿನ್ನಾಣವಲ್ಲ ಪರಮಾರ್ಥ ।

ಸಮಾಜವು ಅನ್ನ, ನನ್ನಿ, ಪರೋಪಕಾರ, ಇವುಗಳು ನಿರ್ಮಿಸಿಕೊಂಡು ಬಾಳುವುದು ಸ್ವರ್ಗಕ್ಕಿಂತಲೂ ಮಿಗಿಲು. ಸ್ವರ್ಗ-ನರಕ ಕೈಲಾಸದಲ್ಲಿ ಇರುವುದಲ್ಲ. ಅದು ಇಹಲೋಕದಲ್ಲಿಯೇ ಇರುವಂತಹದ್ದು. ಇದು ಸರ್ವಜ್ಞನ ಸ್ಪಷ್ಟ ನಿಲುವು.

ಪರ ಉಪಕಾರಗಳ ನುರೆ ಮಾಳ್ಪ ಮಾನವನೆ
ಪರಶಿವ ಕಳುಹಲವ ಬಂದು ಧರೆಯೊಳಗೆ
ವರವೀವುತಿಹನು ಪರಮಾರ್ಥ ।

ಸರ್ವಜ್ಞನ ಪ್ರಕಾರ ಪರೋಪಕಾರವೇ ಪರಶಿವನಾಗುತ್ತದೆ. ದಯೆ, ಧರ್ಮ, ನೀತಿ, ಸತ್ಯ, ಪ್ರಾಮಾಣಿಕತೆ ಇವುಗಳೇ ಇಲ್ಲಿ ದೇವರುಗಳು. ಇವುಗಳನ್ನು ಬಿಟ್ಟರೆ ಭೂಮಿಯಲ್ಲಿ ಮತ್ತಾವುದು ದೈವಶಕ್ತಿ ಇರುವುದಿಲ್ಲ. ಹಾಗೆಯೇ ದಾನ ಕೊಟ್ಟದ್ದನ್ನು ಹೇಳಿಕೊಳ್ಳದಂತೆ, ಬಚ್ಚಿಟ್ಟುಕೊಳ್ಳದಂತೆ ಇರಬೇಕು.

ಕೊಟ್ಟುದು ತನಗೆ ಬಚ್ಚಿಟ್ಟುದು ಪರರಿಗೆ
ಕೊಟ್ಟುದು ಕೆಟ್ಟತೆನಬೇಡವದು ಮುಂದೆ
ಕಟ್ಟಿದ ಬುತ್ತಿ ಪರಮಾರ್ಥ ।

ಕೊಟ್ಟುದನ್ನು, ದಾನ ಮಾಡಿದ್ದನ್ನು, ತೋರಿಸಿಕೊಳ್ಳದೆ ಮಾಡುವುದು ಸಾರ್ಥಕವಾದ ಧರ್ಮವಾಗುತ್ತದೆ. ಇಲ್ಲದಿದ್ದರೆ ಅದು ಇನ್ನೊಬ್ಬರಿಗೂ ಆಗದಂತೆ ಆಗುತ್ತದೆ. ನೀತಿ ಪದ್ಧತಿಯಲ್ಲಿ ಯಾವುದೇ ಒಂದು ಕೆಲಸ ಮಾಡಿದರೂ ಅದಕ್ಕೊಂದು ಅರ್ಥವಂತಿಕೆ ಇರಬೇಕು. ಇಲ್ಲದಿದ್ದರೆ ಅದು ವ್ಯರ್ಥವಾಗುತ್ತದೆ ಎನ್ನುವ ಮನೋಭಾವ ಕಂಡು ಬರುತ್ತದೆ.

ಗುರುವಿಲ್ಲದಾ ಮಠವು ಹಿರಿಯರಿಲ್ಲದ ಮನೆಯು
ಅರಸಿಲ್ಲದೂರು ಇವು ಮೂರು ನುಲಿಬೆಂದ
ಹೊರಸಿನಂತಕ್ಕು ಪರಮಾರ್ಥ ।

ಪುಷ್ಪವಿಲ್ಲದ ಪೂಜೆ ತುಪ್ಪವಿಲ್ಲದ ಊಟ
ಒಪ್ಪವಿಲ್ಲದಳ ನಗೆನುಡಿ ಇವು ಮೂರು
ಸಪ್ಪನೆ ಕಂಡ ಪರಮಾರ್ಥ ।

ಮಠಕ್ಕೆ ಗುರು ಬೇಕು, ಮನೆಗೆ ಹಿರಯರು ಬೇಕು, ಊರಿಗೆ ದೊರೆ ಬೇಕು, ಹಾಗೆಯೇ ಪೂಜೆಯನ್ನು ಹೂವಿಲ್ಲದೆ ಮಾಡಲಾಗುವುದಿಲ್ಲ, ಊಟವನ್ನು ತುಪ್ಪವಿಲ್ಲದೆ ಮಾಡಬಾರದು. ಹಾಗೆಯೇ ಹೆಣ್ಣಿನ ಪರಿಹಾಸ್ಯ ಇತ್ಯಾದಿಗಳು ಒಂದಕ್ಕೊಂದು ಗುರುಸ್ಥಾನದ ಅವಶ್ಯಕತೆ ಇರಬೇಕಾಗುತ್ತದೆ. ಇವುಗಳಿಗೆ ಅದರದೇ ಆದ ಅಂದ ಚಂದಗಳು ಇದ್ದು ಅವುಗಳು ಬೆಳಗುತ್ತವೆ. ಹೀಗೆ ಸರ್ವಜ್ಞ ಲೋಕವನ್ನು ತಿದ್ದುತ್ತಾ, ಬದುಕನ್ನು ಹಸನುಗೊಳಿಸುತ್ತಾ, ಇಹ ಬದುಕಿಗೊಂದು ಅರ್ಥದ ಮಾರ್ಗ ಪರಂಪರೆಯನ್ನು ನಿರ್ಮಿಸಿದ್ದಾನೆ. ನಿಜವಾದ ಅರ್ಥದಲ್ಲಿ ಸರ್ವಜ್ಞನು ಜನತೆಯ ಕವಿಯೆಂದೇ ಹೇಳಬೇಕು. ಹಾಗಾಗಿಯೇ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಈತನಿಗೊಂದು ಪ್ರತ್ಯೇಕ ಸ್ಥಾನವಿದೆ.